ವಿದ್ಯಾರತ್ನ, ಪಂಡಿತ ಎಸ್. ರಂಗಾಚಾರ್, ಎಂ.ಎ., ಅವರ
ಕನ್ನಡ ಅನುವಾದ-ಪೀಠಿಕೆ-ಟಿಪ್ಪಣಿಗಳೊಡನೆ

| | |
|---|---|
| **ಸಂಸ್ಕೃತ ನಾಟಕಗಳು** | Rs. P. |
| ಅಭಿಜ್ಞಾನಶಾಕುಂತಲಂ (ಕಾಳಿದಾಸವಿರಚಿತ) | 6-25 |
| ವಿಕ್ರಮೋರ್ವಶೀಯಂ (ಕಾಳಿದಾಸವಿರಚಿತ) | 5-00 |
| ಸ್ವಪ್ನವಾಸವದತ್ತಂ (ಭಾಸವಿರಚಿತ) | 6-00 |
| ಊರುಭಂಗಂ (ಭಾಸವಿರಚಿತ) | 3-75 |
| ಪ್ರತಿಮಾ ನಾಟಕಂ (ಭಾಸವಿರಚಿತ) | 5-00 |
| ಅಭಿಷೇಕನಾಟಕಂ (ಭಾಸವಿರಚಿತ) | 5-00 |
| ಪಂಚರಾತ್ರಂ (ಭಾಸವಿರಚಿತ) | 4-50 |
| ಕರ್ಣಭಾರಂ (ಭಾಸವಿರಚಿತ) | 1-75 |
| ನಾಗಾನಂದ ನಾಟಕಂ (ಶ್ರೀಹರ್ಷರಚಿತ) | 4-75 |
| ರತ್ನಾವಳೀ (ಶ್ರೀಹರ್ಷರಚಿತ) ಕನ್ನಡ ಅನುವಾದ-ಟೀಕೆ-ಪೀಠಿಕೆಮಾತ್ರ | 1-50 |
| **ಸಂಸ್ಕೃತ ಕಾವ್ಯಗಳು** (ಕನ್ನಡ ಪ್ರತಿಪದಾರ್ಥದೊಡನೆ) | |
| ರಘುವಂಶ ಸರ್ಗ ೪ | 1-15 |
| —,,— ಸರ್ಗ ೬ | 3-00 |
| —,,— ಸರ್ಗ ೧೩ | 2-50 |
| ಕುಮಾರಸಂಭವ ಸರ್ಗ ೩ | 2-50 |
| —,,— ಸರ್ಗ ೫ | 3-00 |
| —,,— ಸರ್ಗ ೬ | 2-50 |
| ಮೇಘಸಂದೇಶ (ಪೂರ್ವಮೇಘ) | 2-00 |
| ಬುದ್ಧಚರಿತ ಸರ್ಗ ೧ | 2-50 |
| —,,— ಸರ್ಗ ೩ | 2-50 |
| ನೀತಿಶತಕ (ಭರ್ತೃಹರಿ ವಿರಚಿತ) | 2-50 |
| ಚಂಪೂರಾಮಾಯಣ ಅರಣ್ಯಕಾಂಡ | 2-75 |
| —,,— ಕಿಷ್ಕಿಂಧಾಕಾಂಡ | 2-75 |
| **ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ** | 6-00 |
| **ಅಮರ ಶಬ್ದ ಧಾತುರೂಪ** | 0-65 |
| **ಸಹಸ್ರನಾಮ** (ವಿಷ್ಣು, ಲಕ್ಷ್ಮೀ, ನರಸಿಂಹ, ರಾಮ, ಕೃಷ್ಣ) | |
| ಅಷ್ಟೋತ್ತರಶತನಾಮ ಸ್ತೋತ್ರಗಳು (ನಾಮಾವಳೀ ಸಹಿತ) | 2-50 |
| ಸ್ತೋತ್ರರತ್ನ, ಚತುಃಶ್ಲೋಕೀ, ನೃಸಿಂಹಪಂಚಾಮೃತ | 0-75 |
| ಮುಕುಂದಮಾಲಾ, ಜಿತಂತೇಸ್ತೋತ್ರ ಇತ್ಯಾದಿ | 0-50 |
| ಲಕ್ಷ್ಮೀಸ್ತೋತ್ರಮಾಲಿಕಾ | ಅಚ್ಚಿನಲ್ಲಿದೆ |

ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ

# ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ

ವಿದ್ಯಾರತ್ನ
ಪಂಡಿತ ಎಸ್. ರಂಗಾಚಾರ್, ಎಂ. ಎ.



ಸಂಸ್ಕೃತ ಸಾಹಿತ್ಯ ಸದನ
೧೧೪೦ ದೇವಪಾರ್ಥಿವ ರೋಡ್, ಚಾಮರಾಜಪುರಂ
ಮೈಸೂರು — ೪

ರೂ. ೬-೦೦

# ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ

ವಿದ್ಯಾರತ್ನ
ಪಂಡಿತ ಎಸ್. ರಂಗಾಚಾರ್, ಎಂ. ಎ.



ಸಂಸ್ಕೃತ ಸಾಹಿತ್ಯ ಸದನ
೧೦೪೦ ಚಾಮರಾಜಪುರಂ, ದೇವಪಾರ್ಥಿವ ರೋಡ್
ಮೈಸೂರು — ೪

ಪರಿಷ್ಕೃತ ದ್ವಿತೀಯ ಮುದ್ರಣ ೧೯೬೪

ಬೆಲೆ: ಆರು ರೂಪಾಯಿಗಳು

— ಮುದ್ರಕರು —
ಸಂಸ್ಕೃತ ಸಾಹಿತ್ಯ ಸದನ, ೨ ದೇವಪಾರ್ಥಿವ ರೋಡ್
ಚಾಮರಾಜಪುರಂ, ಮೈಸೂರು–೪

# ವಿಷಯ ಸೂಚೀ

ಶ್ರೀಃ

# ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ಇತಿಹಾಸ

## ಅಧ್ಯಾಯ ೧

### ಸಂಸ್ಕೃತ ವಾಙ್ಮಯದ ಎರಡು ಮುಖಗಳು

ಸಂಸ್ಕೃತವು ಭರತಖಂಡದಲ್ಲಿ ಪ್ರಚಲಿತವಾಗಿದ್ದ ಪ್ರಾಚೀನಭಾಷೆಯೆಂದು ಸ್ಥೂಲವಾಗಿ ಹೇಳಬಹುದಾದರೂ ಪಾಣಿನಿಯ ಕಾಲದಿಂದೀಚಿನ ಭಾಷೆಯೇ ಸಂಸ್ಕೃತ; ಅದಕ್ಕೂ ಹಿಂದಿನದು ವೈದಿಕಭಾಷೆ—ಎಂಬುದೇ ವಿದ್ವಾಂಸರ ಅಭಿಪ್ರಾಯ. ಈ ಎರಡು ಭಾಷೆಗಳಿಗೂ ಸಾಮಾನ್ಯತಃ ಸಂಸ್ಕೃತ ಎಂಬ ಶಬ್ದವೇ ಬಳಕೆಯಲ್ಲಿರುವುದರಿಂದ ಸ್ಪಷ್ಟನಿರ್ದೇಶನಕ್ಕಾಗಿ ಪಾಶ್ಚಾತ್ಯರು ಇವುಗಳನ್ನು **ವೈದಿಕ**(Vedic) ಮತ್ತು **ಕಾವ್ಯಸ್ಥ**(Classical) ಸಂಸ್ಕೃತಗಳೆಂದು ಕರೆದರು. ಇತರ ಭಾರತೀಯ ಭಾಷೆಗಳನ್ನನುಸರಿಸಿ ನಾವೂ ಇವುಗಳನ್ನು **ವೈದಿಕ, ಲೌಕಿಕ** ಸಂಸ್ಕೃತಗಳೆಂದು ಕರೆದರೆ ತಪ್ಪಾಗಲಾರದು. ಸಂಸ್ಕೃತ ಭಾಷೆಯಲ್ಲಿ ಈ ವೈದಿಕ ಮತ್ತು ಲೌಕಿಕ ಘಟ್ಟಗಳು ಗಮನಾರ್ಹವಾದುವು. ಕಾವ್ಯಗಳ ಸಂಸ್ಕೃತದಲ್ಲಿ ಪಾಂಡಿತ್ಯವಿದ್ದಮಾತ್ರಕ್ಕೆ ವೇದಗಳ ಅರ್ಥವೂ ಆಗುತ್ತದೆಂಬುದು ತಪ್ಪುಭಾವನೆ. ವೇದಗಳ ಭಾಷೆಗೂ ಕಾವ್ಯಗಳ ಭಾಷೆಗೂ ತುಂಬಾ ಅಂತರವಿದೆ. ವೈದಿಕಭಾಷೆ ಉದಾತ್ತ ಅನುದಾತ್ತ ಸ್ವರಿತಗಳೆಂಬ ಸ್ವರಗಳಿಂದ ಕೂಡಿದ್ದು ಅದರ ಉಚ್ಚಾರದ ರೀತಿಯೇ ಬೇರೆ; ಸ್ವರವಿಲ್ಲದ ಕಾವ್ಯಭಾಷೆಯ ಉಚ್ಚಾರವೇ ಬೇರೆ. ಈ ಎರಡು ಭಾಷೆಗಳ ವ್ಯಾಕರಣಪ್ರಕ್ರಿಯೆಗಳಲ್ಲೂ ಬಹಳ ವ್ಯತ್ಯಾಸವಿದೆ. ಭಾಷಾಭೇದವಿರುವಂತೆಯೇ ಅವುಗಳಲ್ಲಿ ರಚಿತವಾಗಿರುವ ವಾಙ್ಮಯಗಳೂ ವಿಭಿನ್ನವಾಗಿವೆ. ವೈದಿಕವಾಙ್ಮಯರಚನೆಯಾಗಿ ಅದು ತಟಸ್ಥವಾದ ಮೇಲೆ ಸಂಸ್ಕೃತ (ಲೌಕಿಕ) ವಾಙ್ಮಯದ ರಚನೆ ಆರಂಭವಾಯಿತೆಂಬ ಕೆಲವರ ಅಭಿಪ್ರಾಯ ಸರಿಯಾದುದೆಂದು ಹೇಳಲಾಗುವುದಿಲ್ಲ. ಏಕಕಾಲದಲ್ಲಿ ಎರಡೂ ಪ್ರಚಲಿತವಾಗಿದ್ದುದೂ ಉಂಟು. ಕ್ರಿಸ್ತಶಕಾದಿಗಿಂತ ಅನೇಕ ಶತಾಬ್ದಿಗಳ ಹಿಂದೆ ಸಂಸ್ಕೃತ (ಲೌಕಿಕ) ಸಾಹಿತ್ಯಸೃಷ್ಟಿಯ ಆರಂಭವಾಯಿತೆಂದೂ ವೈದಿಕ ಸಾಹಿತ್ಯದ ರಚನೆ ಅದಕ್ಕೂ ಬಹಳ ಹಿಂದೆ ಆರಂಭವಾಗಿದ್ದಿರಬೇಕೆಂದೂ ಮಾತ್ರ ಧಾರಾಳವಾಗಿ ಹೇಳಬಹುದು.

## ವೈದಿಕ ವಾಙ್ಮಯ

'ವಿದ–ಜ್ಞಾನೇ' ಎಂಬ ಧಾತುವಿನಿಂದ 'ವೇದ' ಎಂಬ ಪದ ಬಂದಿದೆ. ವೇದ ಎಂದರೆ ಜ್ಞಾನ. ಅನೇಕ ಸಹಸ್ರವರ್ಷಗಳ ಹಿಂದೆ ಭರತ[illegible]ಕ್ಕೆ ಬಂದು ಸಿಂಧೂನದೀತೀರದಲ್ಲಿ ನೆಲಸಿದ ಆರ್ಯರು ತಮ್ಮ ವಿವೇಚನೆ ಅನುಭವಗಳಿಂದ ಅರಿತುಕೊಂಡಿದ್ದ ದೇವತೆಗಳಿಗೆ ಅಥವಾ ದೈವೀಶಕ್ತಿಗಳಿಗೆ ಸಂಬಂಧಿಸಿದ ಅನೇಕ ಪ್ರಕಾರವಾದ ಜ್ಞಾನಸಮುದಾಯವೇ ವೇದ. ಹಿಂದೂ ಧರ್ಮದ ಒಂದೊಂದು ಸಿದ್ಧಾಂತವೂ ನಿಂತಿರುವುದು ಈ ವೇದದ ಆಧಾರದ ಮೇಲೆಯೇ.[1] ಪ್ರತಿಯೊಬ್ಬ ಹಿಂದೂವಿನ ನಿತ್ಯಜೀವನವೂ, ಅವನು ಹುಟ್ಟುವುದರಿಂದ ಹಿಡಿದು ಸಾಯುವವರೆಗೆ ಮಾತ್ರವಲ್ಲದೆ ಸತ್ತಮೇಲೂ, ವೇದದ ಪ್ರಭಾವಕ್ಕೊಳಪಟ್ಟಿದೆ. ವೇದ ಮಂತ್ರೋಚ್ಚಾರಣೆಯಿಲ್ಲದೆ ಯಾವ ವಿಧಿಯೂ ಸಾಗುವಂತಿಲ್ಲ.

ಈ ಪ್ರಕಾರವಾದ ಜ್ಞಾನರಾಶಿಯನ್ನು, ವೇದವನ್ನು, (ವೇದ) ವ್ಯಾಸರು ವಿಷಯಾನುಗುಣವಾಗಿ ನಾಲ್ಕು ಭಾಗವಾಗಿ ವಿಂಗಡಿಸಿದರೆಂದೂ, ಅಲ್ಲಿಂದೀಚೆಗೆ ದೇವತೆಗಳ ಸ್ತೋತ್ರರೂಪವಾದ ಭಾಗಕ್ಕೆ '**ಋಗ್ವೇದ**'ವೆಂದೂ ದೇವತೆಗಳ ಯಜನ (ಪೂಜಾ) ರೂಪವಾದ ಭಾಗಕ್ಕೆ '**ಯಜುರ್ವೇದ**'ವೆಂದೂ, ಅವರ ಪ್ರೀತ್ಯರ್ಥವಾದ 'ಗಾನ'ಗಳ ವಿಭಾಗಕ್ಕೆ '**ಸಾಮವೇದ**'ವೆಂದೂ, ಈ 'ಯಜನ'ಕ್ಕೆ ಉಂಟಾಗಬಹುದಾದ ನಾನಾವಿಧ ವಿಘ್ನಗಳ ಪರಿಹಾರಕ್ಕೆ ಉಪಯುಕ್ತವಾದ ಸಂಕೀರ್ಣ ವಿಭಾಗಕ್ಕೆ '**ಅಥರ್ವವೇದ**'ವೆಂದೂ ಹೆಸರುಂಟಾದುದಾಗಿ ಪ್ರಸಿದ್ಧಿಯಿದೆ. ಈ ನಾಲ್ಕು ವೇದಗಳಲ್ಲೂ ಮೊದಲ ಭಾಗಕ್ಕೆ **ಸಂಹಿತೆ**, ಎರಡನೆಯ ಭಾಗಕ್ಕೆ **ಬ್ರಾಹ್ಮಣ** ಎಂದು ಹೆಸರು. 'ಬ್ರಾಹ್ಮಣ'ಗಳ ಕೊನೆಯಲ್ಲಿ **ಆರಣ್ಯಕ**ಗಳೂ ಆರಣ್ಯಕಗಳಿಗೆ ಅನುಬಂಧಗಳಂತಿರುವ **ಉಪನಿಷತ್ತು**ಗಳೂ ಇವೆ. ಇವುಗಳೂ ಬೇರೆ ಬೇರೆ ವೇದಗಳಿಗೆ ಸಂಬಂಧಿಸಿದಂತೆ ರಚಿತವಾಗಿರುವ ಪ್ರಾತಿಶಾಖ್ಯಗಳೂ ವೇದಾಂಗಗಳೂ ಒಟ್ಟು ಸೇರಿ '**ವೈದಿಕ ವಾಙ್ಮಯ**'ವೆನಿಸಿಕೊಳ್ಳುತ್ತವೆ.

---

1 ವೇದದ ಭಾಷೆಯ ಪ್ರಭಾವವು ಪ್ರಪಂಚದ ಬೇರೆ ಬೇರೆ ಭಾಷೆಗಳ ಮೇಲೆ ಬಿದ್ದು ಅವುಗಳ ಬೆಳವಣಿಗೆಗೆ ಕಾರಣವಾಗಿರುವುದರಿಂದ ಭಾಷಾಶಾಸ್ತ್ರವನ್ನು ಅಭ್ಯಸಿಸುವವರಿಗಂತೂ ವೇದಗಳ ಭಾಷೆಯ ಪರಿಚಯ ಅತ್ಯಾವಶ್ಯಕ. ಹಾಗೆಯೇ ಪ್ರಪಂಚದ ಭಿನ್ನಭಿನ್ನ ಸಂಸ್ಕೃತಿಗಳ ಅಧ್ಯಯನಕ್ಕೆ ವೈದಿಕ ಸಂಸ್ಕೃತಿಯ ಪೂರ್ಣವಾದ ಅರಿವು ಬೇಕೇಬೇಕು.



ಬೇರೆ ಬೇರೆ ದೇವತೆಗಳ ಸ್ತೋತ್ರರೂಪವಾದ ಮಂತ್ರಗಳ ಸಮುದಾಯಗಳೇ 'ಸಂಹಿತೆ'ಗಳು. ಈ ಮಂತ್ರಗಳು ಪದ್ಯರೂಪವಾಗಿಯೇ ಇವೆ. ದೇವತೆಗಳ ಸ್ವರೂಪ, ಸಾಮರ್ಥ್ಯ ಮುಂತಾದುವುಗಳ ನಿರೂಪಣೆ, ಪ್ರಾರ್ಥನಾಫಲವಾಗಿ ಅವರು ನೀಡುವ ಪ್ರಸಾದ ಇವುಗಳ ವಿವರಣೆಯೇ ಈ ಮಂತ್ರಗಳ ವೈಶಿಷ್ಟ್ಯ. ಈ ಮಂತ್ರಗಳನ್ನು ಬಳಸಿಕೊಂಡು ಯಜ್ಞಮಾಡುವ ಕ್ರಮ, ಯಜ್ಞಸಾಧನಗಳು ಮುಂತಾದುವುಗಳನ್ನು 'ಬ್ರಾಹ್ಮಣ'ಗಳು ವಿವರಿಸುತ್ತವೆ. ಈ ಬ್ರಾಹ್ಮಣಗಳೆಲ್ಲ ಗದ್ಯರೂಪವಾಗಿವೆ. ಇವುಗಳಲ್ಲಿ ಮಧ್ಯೆ ಮಧ್ಯೆ [2]ಇತಿಹಾಸ, ಪುರಾಣ, ಗಾಥಾ, [2]ನಾರಾಶಂಸಿಗಳೆಂಬ ಕಥಾಪ್ರಸಂಗಗಳೂ ಬರುತ್ತವೆ. ಯಜ್ಞಸ್ವರೂಪ, ಯಜ್ಞಾಂಗಗಳು, ಯಜ್ಞಕಾಲ ಮುಂತಾದುವೂ ಆಧ್ಯಾತ್ಮ ಚಿಂತನವೂ 'ಆರಣ್ಯಕ'ಗಳ ವಿಷಯ. ಇವು ರಹಸ್ಯಗಳೆಂದು ಭಾವಿಸಲ್ಪಟ್ಟು ಊರ ಹೊರಗೆ ಅರಣ್ಯಗಳಲ್ಲೇ ಉಪದೇಶಿಸಲ್ಪಡುತ್ತಿದ್ದುದರಿಂದ ಇವಕ್ಕೆ ಆರಣ್ಯಕಗಳೆಂಬ ಹೆಸರು ಬಂದಿತು. ಉಪನಿಷತ್ತುಗಳೂ ಈ ಆರಣ್ಯಕಗಳಿಗೆ ಸೇರಿಕೊಂಡಂತೆಯೇ ಇವೆ. ಇವು ವೇದಗಳ ಕೊನೆಯ ಭಾಗವಾಗಿ ಬರುವುದರಿಂದ ಇವುಗಳಿಗೆ **ವೇದಾಂತ**ವೆಂದೂ ಹೆಸರಿದೆ. ಈ **ಉಪನಿಷತ್ತು**ಗಳಲ್ಲಿರುವುದು ಜೀವ, ಈಶ್ವರ, ಪ್ರಪಂಚ ಅಥವಾ ಒಟ್ಟಿನಲ್ಲಿ ಪರಬ್ರಹ್ಮವನ್ನು ಕುರಿತ ಎಲ್ಲರೂ ತಿಳಿದುಕೊಳ್ಳಲೂ ಎಲ್ಲರಿಗೂ ತಿಳಿಸಲೂ ಸಾಧ್ಯವಾಗದಂತಹ ಜಟಿಲ ರಹಸ್ಯ.

ಮೇಲೆ ಹೇಳಿದ ಸಂಹಿತೆಗಳೂ, ಆರಣ್ಯಕ ಉಪನಿಷತ್ತುಗಳನ್ನೊಳಗೊಂಡ ಬ್ರಾಹ್ಮಣಗಳೂ ಶ್ರುತಿಗಳು. ಇವನ್ನು ಅಪೌರುಷೇಯವೆಂದೇ ಸಾಮಾನ್ಯವಾಗಿ ಭಾವಿಸಲಾಗಿದೆ. ಶ್ರುತಿಗಳಿಗೆ ಸಂಬಂಧಿಸಿದಂತೆ ರಚಿತವಾಗಿರುವ ಗ್ರಂಥ ಸಮುದಾಯಕ್ಕೆ **ಶ್ರೌತ** ಎನ್ನುತ್ತಾರೆ. ಅವುಗಳಲ್ಲಿ ಪ್ರಾತಿಶಾಖ್ಯಗಳು ಮುಖ್ಯ. ಗುರುವಿನಿಂದ ಶಿಷ್ಯ, ಅವನಿಂದ ಅವನ ಶಿಷ್ಯ ಹೀಗೆ ಪರಂಪರೆಯಾಗಿ ಶ್ರುತಿಗಳನ್ನು ಕೇಳಿಯೇ ಕಲಿಯುವುದರಲ್ಲಿ ಬೇರೆ ಬೇರೆ ಪಾಠಗಳೂ ಇತರ ವ್ಯತ್ಯಾಸಗಳೂ ತಲೆದೋರಿ ಅನೇಕ ಶಾಖೆಗಳಿಗೆ ಕಾರಣವಾದುವಲ್ಲದೆ, ಆಯಾ ಶಾಖೆಗಳ ವೈಶಿಷ್ಟ್ಯಗಳೆಲ್ಲಾ ಗ್ರಂಥಸ್ಥವಾಗಿ ಪ್ರಾತಿಶಾಖ್ಯಗಳೆಂದು ಪ್ರಸಿದ್ಧವಾದುವು.

---

2 ವೀರಚರಿತ (Epics) ಗಳ ರಚನೆಯು 'ಬ್ರಾಹ್ಮಣ'ಗಳ ಕಾಲದಲ್ಲೇ ರೂಪುಗೊಂಡಿತ್ತೆಂದು ಇದರಿಂದ ಧಾರಾಳವಾಗಿ ಹೇಳಬಹುದು.

ವೇದಾಂಗಗಳೆಂದು ಪ್ರಸಿದ್ಧವಾಗಿರುವ ಶಿಕ್ಷಾ,[3] ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ[4] ಎಂಬ ಆರೂ ವೈದಿಕವಾಙ್ಮಯದಲ್ಲೇ ಸೇರಿರುತ್ತವೆ. ಈ ವೇದಾಂಗಗಳ ಬಗ್ಗೆ ವಿವರಗಳು ಬ್ರಾಹ್ಮಣಗಳಲ್ಲೇ ಇದ್ದರೂ ಕಾಲಕ್ರಮದಲ್ಲಿ ಪ್ರತ್ಯೇಕವಾದ ಶಾಸ್ತ್ರವಿಷಯಗಳಾಗಿ ಪರಿಗಣಿಸಲ್ಪಟ್ಟು ಗ್ರಂಥರಚನೆಗೆ ಆರಂಭವಾಯಿತು. ಇವೆಲ್ಲ ಸೂತ್ರಗ್ರಂಥಗಳು. ಇವು ಸಣ್ಣ ಪುಟ್ಟ ಗದ್ಯವಾಕ್ಯಗಳ ರೂಪದಲ್ಲಿರುವುವಲ್ಲದೆ ಕಂಠಸ್ಥಮಾಡಿಕೊಂಡು ನೆನಪಿಟ್ಟುಕೊಳ್ಳುವುದಕ್ಕೆ ಸುಲಭರೀತಿಯಲ್ಲಿವೆ. ಪ್ರಾಚೀನ ಸೂತ್ರಗ್ರಂಥಗಳು 'ಬ್ರಾಹ್ಮಣ'ವಾಕ್ಯಗಳ ರೀತಿಯಲ್ಲೇ ರಚಿತವಾಗಿದ್ದು ಆ ವಾಕ್ಯಗಳನ್ನೇ ಬಹುವಾಗಿ ಉದಾಹರಿಸುತ್ತವೆ. ಈ ಅಂಶವನ್ನು ಗಮನಿಸಿದರೆ, ಬ್ರಾಹ್ಮಣಗಳ ಗದ್ಯವೇ ಸೂತ್ರಗಳ ಶೈಲಿಗೆ ಮೂಲವೆಂದು ಧಾರಾಳವಾಗಿ ಹೇಳಬಹುದು.

ಪ್ರತಿಯೊಂದು ಸಂಹಿತೆಯಲ್ಲೂ ಇರುವ ವಾಕ್ಯ ಸಮುದಾಯಗಳ ಸಂಖ್ಯೆ, ಮಂತ್ರದ್ರಷ್ಟಾರರಾದ ಋಷಿಗಳು, ಮಂತ್ರಗಳ ಛಂದಸ್ಸು, ಮಂತ್ರಗಳಿಂದ ಸ್ತುತರಾದ ದೇವತೆಗಳು ಮತ್ತು ಆ ಮಂತ್ರಗಳ ವಿನಿಯೋಗ ಇವುಗಳನ್ನು ಕ್ರೋಡೀಕರಿಸಿ ನೆನಪಿಟ್ಟುಕೊಳ್ಳಲು ಅನುಕೂಲವಾಗುವ ರೀತಿಯಲ್ಲಿ ರಚಿತವಾಗಿರುವ 'ಅನುಕ್ರಮಣಿ'ಗಳು ಬಹಳ ಉಪಯುಕ್ತವಾದುವು.

## ವೇದಗಳ ಕಾಲ

ವೇದಗಳು (ಅಂದರೆ [5]ಮಂತ್ರಬ್ರಾಹ್ಮಣಗಳು) ಯಾರಿಂದಲೂ ರಚಿತವಾದುವುಗಳಲ್ಲ; ಅವು ಅಪೌರುಷೇಯ, ಅನಾದಿ ಮತ್ತು ನಿತ್ಯಗಳು; ಅವು ಈಶ್ವರಕರ್ತೃಕಗಳೂ ಅಲ್ಲ, ಈಶ್ವರನಿಂದ ಆವಿಷ್ಕಾರಗೊಂಡವು ಮಾತ್ರ; ಋಷಿ

3 ಶಿಕ್ಷಾ—ಇದು ಸ್ವರಗಳನ್ನೂ ವರ್ಣಗಳ ಸ್ಥಾನಪ್ರಯತ್ನಗಳನ್ನೂ ಬೋಧಿಸುತ್ತದೆ.

4 'ಕಲ್ಪ'ದಲ್ಲಿ ಮೂರು ವಿಭಾಗಗಳಿವೆ — ಶ್ರೌತ, ಗೃಹ್ಯ, ಧರ್ಮ ಎಂದು. ಇವೆಲ್ಲಾ ಸೂತ್ರಗ್ರಂಥಗಳು. ಶ್ರೌತಸೂತ್ರಗಳು ಯಜ್ಞವಿಧಾನಗಳನ್ನು ಬೋಧಿಸುತ್ತವೆ. ಗೃಹ್ಯಸೂತ್ರಗಳು ಗೃಹಸ್ಥನು ನಿತ್ಯಜೀವನದಲ್ಲಿ ನಡೆಸಬೇಕಾದ ಉಪನಯನ, ವಿವಾಹ, ಅಗ್ನಿಹೋತ್ರ ಮುಂತಾದುವುಗಳನ್ನು ವಿವರಿಸುತ್ತವೆ. ಧರ್ಮಸೂತ್ರಗಳು ಬೇರೆ ಬೇರೆ ವರ್ಣಗಳಿಗೆ ಸೇರಿದವರು ಬೇರೆ ಬೇರೆ ಆಶ್ರಮಗಳಲ್ಲಿ ಪಾಲಿಸಬೇಕಾದ ಆಚಾರವ್ಯವಹಾರಗಳನ್ನು ತಿಳಿಸುತ್ತವೆ.

5 ಮಂತ್ರಬ್ರಾಹ್ಮಣಾನಾಮೇವ ವೇದನಾಮಧೇಯತ್ವಂ ।



ಗಳು ಮಂತ್ರಗಳನ್ನು ಕಂಡುಕೊಂಡವರು;[6] ರಚಿಸಿದವರಲ್ಲ. ಆದ್ದರಿಂದ ವೇದಗಳ ಕರ್ತೃತ್ವ ಅಥವಾ ಕಾಲದ ವಿಚಾರಕ್ಕೆ ಪ್ರಸಕ್ತಿಯೇ ಇರುವುದಿಲ್ಲ. ಶ್ರೌತಗ್ರಂಥಗಳು (ಅಂದರೆ ಪ್ರಾತಿಶಾಖ್ಯಗಳೂ ವೇದಾಂಗಗಳೂ ಅನುಕ್ರಮಣಿಗಳೂ) ಮಾತ್ರ ಸಕರ್ತೃಕಗಳು—ಎಂಬುದು ನಮ್ಮ ಪ್ರಾಚೀನರ ಮತ. ಆಧುನಿಕ ಭಾರತೀಯ ಮತ್ತು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ ಮುಂದೆ ಹೇಳುವಂತಿದೆ. ಪ್ರಾಯಃ ಮಧ್ಯ ಏಷಿಯಾದಿಂದ ಖೈಬರ್ ಕಣಿವೆಯ ಮೂಲಕ ಇಂಡಿಯಾದೇಶದೊಳಕ್ಕೆ ಬಂದು ಸಿಂಧೂನದೀ ತೀರದಲ್ಲಿ ನೆಲಸಿದ ಆರ್ಯರು ದೇವತೆಗಳ ಪ್ರಸಾದದಿಂದಲೇ ತಮ್ಮ ಎಲ್ಲ ವ್ಯವಹಾರಗಳಲ್ಲೂ ಜಯ ಮತ್ತು ಸಮೃದ್ಧಿಗಳು ಸಾಧ್ಯವೆಂದೂ ಅವರನ್ನು ಸ್ತೋತ್ರಮಾಡುವುದರಿಂದಲೇ ಅವರ ಪ್ರಸಾದ ಲಭ್ಯವಾಗತಕ್ಕದ್ದೆಂದೂ ಅರಿತು ಭಾವಾವೇಶದಿಂದ ಅವರನ್ನು ಸ್ತುತಿಸುತ್ತಿದ್ದರು. ಅಂತಹ ಸ್ತೋತ್ರರೂಪವಾದ ಸೂಕ್ತಗಳ ಸಮುದಾಯವೇ ಋಗ್ವೇದ.[7] ಹೀಗೆಯೇ ಋಗ್ವೇದವಾದಮೇಲೆ ಯಜುರ್ವೇದ, ಸಾಮವೇದ,

6 ಮಂತ್ರದ್ರಷ್ಟಾರಃ ನ ತು ಕರ್ತಾರಃ ।

7 ಹಲವು ಬೆರಕೆಯಾಗಿ ಕಲೆತುಹೋಗಿದ್ದ ವೇದವನ್ನು (ವೇದ) ವ್ಯಾಸರು ಯಜ್ಞಾದಿಗಳಲ್ಲಿ ನೆರವಾಗುತ್ತಿದ್ದ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಎಂಬ ಋತ್ವಿಕ್ಕುಗಳ ಕೆಲಸಗಳಿಗನುಗುಣವಾಗಿ ನಾಲ್ಕು ಭಾಗವಾಗಿ ವಿಂಗಡಿಸಿದರೆಂದೂ ಅವುಗಳಿಗೆ ಕ್ರಮವಾಗಿ ಹೋತೃವೇದ (ಋಗ್ವೇದ), ಅಧ್ವರ್ಯುವೇದ (ಯಜುರ್ವೇದ), ಉದ್ಗಾತೃವೇದ (ಸಾಮವೇದ), ಬ್ರಹ್ಮವೇದ (ಅಥರ್ವವೇದ) ಎಂಬ ಹೆಸರುಗಳುಂಟಾದುವೆಂದೂ ಪ್ರಸಿದ್ಧಿಯಿದೆ. ಈ ವಿಂಗಡಣೆ ಕ್ರಿಸ್ತಪೂರ್ವ ಸುಮಾರು ೧೫೦೦ ರಲ್ಲಿ ಆಯಿತೆಂದು ಕೆಲವು ಆಧುನಿಕರು ಅಭಿಪ್ರಾಯಪಡುತ್ತಾರೆ. ಆದರೆ, ಅಪಾರವಾದ ಈ ವೇದರಾಶಿಯು ಮಂತ್ರಾದಿಗಳ ರಚನೆಗೆ ಸಾವಿರಾರು ವರ್ಷಗಳ ಕಾಲ ಸಂದಿರಬೇಕೆಂಬುದನ್ನೂ, ಅವು ರಚಿತವಾದ ಎಷ್ಟೋ ಕಾಲದ ಬಳಿಕ, ಮಹಾಭಾರತ ರಚಿಸುವುದಕ್ಕಿಂತ ಬಹಳ ಕಾಲ ಮುಂಚಿತವಾಗಿ ವೇದವ್ಯಾಸರು ಅವುಗಳನ್ನು ನಾಲ್ಕು ವೇದಗಳನ್ನಾಗಿ ವಿಂಗಡಿಸಿದರೆಂಬುದನ್ನೂ ಗಮನಿಸಿದರೆ ವೇದಗಳ ಕಾಲದ ಬಗೆಗೆ ಆಧುನಿಕರ ಮೇಲ್ಕಂಡ ಅಭಿಪ್ರಾಯ ತುಂಬ ಅಸಮಂಜಸವೆಂದು ತೋರುವುದರಲ್ಲಿ ಸಂದೇಹವಿಲ್ಲ. ಮೊದಮೊದಲು ಋಕ್, ಯಜುಸ್, ಸಾಮ— ಈ ಮೂರೇ ವೇದಗಳಿದ್ದು ಅವುಗಳಿಗೆ 'ತ್ರಯೀ' ಎಂಬ ಹೆಸರು ವಾಡಿಕೆಯಲ್ಲಿತ್ತೆಂಬುದಕ್ಕೆ ಆಧಾರಗಳಿವೆ. ಕಾಲಕ್ರಮದಲ್ಲಿ ಈ ಮೂರರ ಜತೆಗೆ ನಾಲ್ಕನೆಯ ವೇದ ಸೇರಿಕೊಂಡಿರಬೇಕು. ಯಜ್ಞಗಳಲ್ಲೂ ವೈದಿಕಕರ್ಮಗಳಲ್ಲೂ ಆಯಾ ಕರ್ಮವು ಸಾಂಗವಾಗಿ ನ್ಯೂನಾತಿರೇಕಗಳಿಲ್ಲದೆ ನಿರ್ವಿಘ್ನವಾಗಿ ನಡೆಯುವಂತೆ ನೋಡಿಕೊಳ್ಳುವುದು ಮಾತ್ರ 'ಬ್ರಹ್ಮ' ಎಂಬ ಋತ್ವಿಜನ ಕೆಲಸ. ಮೊದಮೊದಲು ಇಂತಹ ಋತ್ವಿಜನಿಗೆ ಈ ಕರ್ಮ

ಅಥರ್ವವೇದಗಳೂ ಒಂದೊಂದಾಗಿ ಮೂಡಿಬಂದುವು. ಈಗ ತಿಳಿದಿರುವ ಮಟ್ಟಿಗೆ ವೇದಗಳಿಗಿಂತ ಪ್ರಾಚೀನವಾದ ಯಾವ ಗ್ರಂಥವೂ ಪ್ರಪಂಚದ ಯಾವ ಭಾಗದಲ್ಲೂ ದೊರೆತಿಲ್ಲ. ಆದರೂ ವೇದಗಳು ರಚಿತವಾದ ಕಾಲ ಇಂತಹುದೇ ಎಂದು ಹೇಳಲು ನಿಷ್ಕೃಷ್ಟವಾದ ಆಧಾರಗಳಿಲ್ಲದೆ ಮ್ಯಾಕ್ಡೊನಲ್ ರವರು ಕ್ರಿ. ಪೂ. ೧೫೦೦ ರಿಂದ ೨೦೦ ರವರೆಗೆ ವೇದಗಳ ರಚನೆ ರೂಪಗೊಂಡಿತೆಂದು ಹೇಳಿದ್ದರೆ, ಪ್ರೊಫೆಸರ್ ಜಾಕೋಬಿ ಅವರು ಕ್ರಿ. ಪೂ. ೪೦೦೦ ಕ್ಕೂ ಹಿಂದೆಯೇ ವೇದಗಳು ರಚಿತವಾದುವೆಂದು ಅಭಿಪ್ರಾಯಪಟ್ಟಿದ್ದಾರೆ.

---

ಗಳಲ್ಲಿ ಸ್ಥಾನವಿದ್ದಿರಲಾರದು. ಆರ್ಯರು ತಾವು ಮಾಡುತ್ತಿದ್ದ ಯಜ್ಞಾದಿಗಳಿಗೆ ನಾನಾ ಬಗೆಯ ಈತಿಬಾಧೆಗಳೂ ಮತ್ತು ದುಷ್ಟಶಕ್ತಿಗಳಿಂದ ವಿಘ್ನಗಳೂ ಬರುತ್ತಿದ್ದು ಅವುಗಳ ನಿವಾರಣೆಗೆ ಇಲ್ಲಿಯ ಮೂಲನಿವಾಸಿಗಳ ಸಹಾಯವನ್ನೇ ಪಡೆಯಬೇಕಾಗಿ ಬಂದಾಗ ಆ ಮೂಲನಿವಾಸಿಗಳು ಬಳಸುತ್ತಿದ್ದ ಮಾಟ ಮಂತ್ರ ಅಭಿಚಾರಗಳ, ವನಸ್ಪತಿಗಳ ಮತ್ತು ದೇವತಾಪ್ರಸಾದವನ್ನು ಸಂಪಾದಿಸಿಕೊಳ್ಳಲು ಅವರು ನಡಸುತ್ತಿದ್ದ ಪೂಜಾದಿಕರ್ಮಗಳ ಪರಿಚಯಹೊಂದಿ ಅವುಗಳ ಪ್ರಭಾವವನ್ನು ಮನಗಂಡು ಅವುಗಳನ್ನು ತಮ್ಮದೇ ಆದ ರೀತಿಯಲ್ಲಿ ರೂಪಿಸಿಕೊಂಡರು. ಅದೇ ಅಥರ್ವವೇದ. ನಮ್ಮ ದೇಶದ ಮೂಲನಿವಾಸಿಗಳ ಈ ಬಹುಮುಖವಾದ ಜ್ಞಾನದ ಆಧಾರದ ಮೇಲೆಯೇ ತಂತ್ರಶಾಸ್ತ್ರವೂ ಆಯುರ್ವೇದ ಮತ್ತು ಇತರ ಉಪವೇದಗಳೂ ರೂಪಿತವಾದುವೆಂದು ಹೇಳಬಹುದು. ಕ್ರಮೇಣ ಆರ್ಯರು ಮೇಲೆ **ಹೇಳಿದ** ಅಥರ್ವವೇದದ ಬಲದಿಂದಲೇ ಯಜ್ಞಗಳನ್ನು ನಿರಾತಂಕವಾಗಿ ನೆರವೇರಿಸಿಕೊಳ್ಳಲು ನಾಲ್ಕನೆಯ ಋತ್ವಿಜನನ್ನು ನೇಮಿಸಿಕೊಂಡು ಅವನನ್ನು 'ಬ್ರಹ್ಮ' ಎಂದು ಕರೆದಿರಬೇಕು.



# ಅಧ್ಯಾಯ ೨

## ಇತಿಹಾಸ, ಪುರಾಣ ಮತ್ತು ವೀರಚರಿತಗಳು (Epics)

ಇತಿ–ಹ+ಆಸ=ಇತಿಹಾಸ.[1] ಬ್ರಾಹ್ಮಣಗಳಲ್ಲಿ ಬರುವ ಕೆಲವು [2]ಐತಿಹ್ಯಮಯ ಕಥೆಗಳಿಗೆ 'ಇತಿಹಾಸ' ಎಂಬ ಹೆಸರು ವೇದಗಳಲ್ಲೇ ಬಳಸಲ್ಪಟ್ಟಿದೆ. ಈ ಕಥೆಗಳೆಲ್ಲಾ ಪ್ರಾಯಃ ಗದ್ಯದಲ್ಲಿವೆ. ಋಗ್ವೇದದಲ್ಲೂ ಇಂತಹ ಕಥಾಪ್ರಬಂಧಗಳು ಕೆಲವಿವೆ. ಇವುಗಳ ಮತ್ತು ಬ್ರಾಹ್ಮಣಗಳಲ್ಲಿನ 'ಇತಿಹಾಸ'ಗಳ ಮಾದರಿಯಲ್ಲೇ ಮುಂದಿನ ಇತಿಹಾಸ, ಪುರಾಣ ಅಥವಾ ವೀರಕಥಾಕಾವ್ಯಗಳು ರಚಿತವಾದುವೆಂದು ಹೇಳಬಹುದು. ಈ [3]ಬಗೆಯ ಕಾವ್ಯದ ಬೆಳವಣಿಗೆ ಹೇಗಾಯಿತು ಎಂಬುದನ್ನು ನಿರೂಪಿಸಲು ಸಾಕಷ್ಟು ಆಧಾರಗಳು ಉಪಲಬ್ಧವಾಗಿಲ್ಲ. ನಮಗೆ ದೊರೆತಿರುವ ಈ ರೀತಿಯ ಇತಿಹಾಸ ಕಾವ್ಯಗಳಲ್ಲಿ ಮಹಾಭಾರತವೇ ಅತ್ಯಂತ ಪ್ರಾಚೀನ. ಮಹಾಭಾರತದಷ್ಟು ಪರಿಷ್ಕೃತವಾದ ಮೇಲ್ಮಟ್ಟಕ್ಕೆ ಈ ಕಾವ್ಯ ಜಾತಿ ಬೆಳೆದು ಬರಲು ಬಹಳ ಕಾಲ ಹಿಡಿದಿರಬೇಕೆಂಬುದು ಸುಸ್ಪಷ್ಟ. ಆದರೆ ಬ್ರಾಹ್ಮಣಗಳ ಕಾಲದಿಂದೀಚೆಗೆ ಮಹಾಭಾರತ ರಚಿತವಾಗಲಾರಂಭಿಸಿದ ಕಾಲದವರೆಗೆ ಇಂತಹ ಕಾವ್ಯಗಳು ಎಷ್ಟು ರಚಿತವಾದುವೋ ಹೇಳಲು ಸಾಧ್ಯವಿಲ್ಲ. ಇತಿಹಾಸ, ಆಖ್ಯಾನ, ಪುರಾಣಗಳನ್ನು ಕಾವ್ಯಗಳೆಂದು ಸಾಮಾನ್ಯವಾಗಿ ವ್ಯವಹರಿಸುವುದಿಲ್ಲ. ಅವುಗಳು ವೀರರ ಕತೆಗಳು, ಬಹುಕಾಲದ ಹಿಂದೆ ನಡೆದುವೆಂದು ಹೇಳಲಾಗುವ ಚರಿತಗಳು, ಇತಿವೃತ್ತಗಳು. ಮಹಾಭಾರತವು ಈ ಗುಂಪಿಗೇ ಸೇರಿದುದು. ಕಾವ್ಯಶೈಲಿಯಲ್ಲೇ ರಚಿತವಾದ ವೀರಪುರುಷರ ಆಖ್ಯಾನಗಳೂ ಇವೆ. ಅವುಗಳಲ್ಲಿ ಆದಿಕಾವ್ಯವೆಂದು ಪ್ರಸಿದ್ಧವಾದ ರಾಮಾಯಣ ಪ್ರಮುಖವಾದುದು.

### ೧. ಮಹಾಭಾರತ

ಇಂಡಿಯಾ ದೇಶದ ಪ್ರಪ್ರಥಮ ಚಕ್ರವರ್ತಿಯೆಂದು ನಂಬಲಾಗಿರುವ ಭರತನ ವಂಶಜರಾದ ಕೌರವ ಪಾಂಡವರ ಪ್ರತಿಸ್ಪರ್ಧೆಯಿಂದ ನಡೆದ ಮಹಾ

---

1 ಇತಿ–ಹ+ಆಸ = ಹಿಂದೆ ಹೀಗೆಯೇ ಇತ್ತು.

2 ಇತಿ ಹ ಎಂಬುದರಿಂದ ಐತಿಹ್ಯ ಎಂಬ ಶಬ್ದ ಬಂದಿದೆ.

3 ಇತಿಹಾಸ ಪುರಾಣಗಳೆಲ್ಲ ಅನುಷ್ಟುಪ್ ಛಂದಸ್ಸಿನಲ್ಲೇ ರಚಿತವಾಗಿವೆ.

ಸಮರವನ್ನು ಈ ಗ್ರಂಥವು ವರ್ಣಿಸಿರುವುದರಿಂದ ಇದಕ್ಕೆ [4]'ಮಹಾಭಾರತ' ಎಂಬ ಹೆಸರು ಬಂತೆಂದು ಹೇಳಬಹುದು ಇದರಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚು ಶ್ಲೋಕಗಳಿವೆ. ಇಷ್ಟು [5]ದೊಡ್ಡ ಪದ್ಯಗ್ರಂಥ ಪ್ರಪಂಚದ ಯಾವ ಭಾಗದಲ್ಲೂ ಈವರೆಗೆ ರಚಿತವಾಗಿಲ್ಲ ಆದ್ದರಿಂದಲೇ ಮಹಾಭಾರತವನ್ನು ಹಿಮವಂತನಿಗೂ ಸಮುದ್ರಕ್ಕೂ ಹೋಲಿಸುವುದು ವಾಡಿಕೆಯಾಗಿದೆ.

ಯಥಾ ಸಮುದ್ರೋ ಭಗವಾನ್ ಯಥಾ ಚ ಹಿಮವಾನ್ ಗಿರಿಃ।
ಖ್ಯಾತಾವುಭೌ ರತ್ನನಿಧೀ ತಥಾ ಭಾರತಮುಚ್ಯತೇ ॥

ಮಹಾಭಾರತದಲ್ಲಿ ೨೧೯೪ ಅಧ್ಯಾಯಗಳಿವೆ. ಅವುಗಳನ್ನು ೧೮ ಪರ್ವಗಳಾಗಿ ವಿಭಾಗಿಸಲಾಗಿದೆ. ಈ ಪರ್ವಗಳಲ್ಲಿ ಅವಾಂತರಪರ್ವಗಳೂ ಕೆಲವೆಡೆ ಇವೆ. ಮಹಾಭಾರತಕ್ಕೆ ಅನುಬಂಧವಾಗಿ ೧೨೦೦೦ ಶ್ಲೋಕಗಳುಳ್ಳ ಹರಿವಂಶ ಎಂಬ ಶ್ರೀಕೃಷ್ಣನ ಚರಿತ್ರೆಯ ವಿವರಗಳನ್ನೊಳಗೊಂಡ ಭಾಗವಿದೆ. ಅದನ್ನು ಮಹಾಭಾರತದ 'ಖಿಲ'ವೆನ್ನುತ್ತಾರೆ.

## ಮಹಾಭಾರತದ ೧೮ ಪರ್ವಗಳಲ್ಲಿರುವ ವಿಷಯಗಳ ಸಂಗ್ರಹ

೧. ಆದಿಪರ್ವ— ಧೃತರಾಷ್ಟ್ರನೂ ಪಾಂಡುವೂ ಭೀಷ್ಮನಿಂದ ಪಾಲಿತರಾಗುವುದು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ನೂರು ಜನ ಪುತ್ರರ ಜನನ; ಮತ್ತು ಪಾಂಡುವಿಗೆ ಕುಂತಿಯಲ್ಲಿ ಮೂವರು ಮತ್ತು ಮಾದ್ರಿಯಲ್ಲಿ ಇಬ್ಬರು ಪುತ್ರರ ಉತ್ಪತ್ತಿ.

೨. ಸಭಾಪರ್ವ— ಹಸ್ತಿನಾಪುರದ ಸಭೆ; ಪಗಡೆಯ ಜೂಜು; ಪಾಂಡವರ ಅರಣ್ಯವಾಸ.

---

[4] ದೇವತೆಗಳು ತಕ್ಕಡಿಯಲ್ಲಿ ತೂಗಿದಾಗ ಎಲ್ಲ ವೇದಗಳಿಗಿಂತಲೂ ಮಹಾಭಾರತವೇ ಹೆಚ್ಚು ಭಾರವಾಗಿತ್ತು; ಗಾತ್ರದಲ್ಲೂ ದೊಡ್ಡದಾಗಿತ್ತು. ಆದ್ದರಿಂದ ಅದಕ್ಕೆ ಮಹಾಭಾರತ ಎಂಬ ಹೆಸರು ಬಂದಿತು— ಎಂದು ಮಹಾಭಾರತದ ಆದಿಪರ್ವದಲ್ಲಿ ಹೇಳಿದೆ. —

ಪುರಾ ಕಿಲ ಸುರೈಃ ಸರ್ವೈಃ ಸಮೇತ್ಯ ತುಲಯಾ ಧೃತಂ ।
ಚತುರ್ಭ್ಯಃ ಸರಹಸ್ಯೇಭ್ಯೋ ವೇದೇಭ್ಯೋ ಹ್ಯಧಿಕಂ ಯದಾ ॥
ತದಾ ಪ್ರಭೃತಿ ಲೋಕೇಸ್ಮಿನ್ ಮಹಾಭಾರತಮುಚ್ಯತೇ ।
ಮಹತ್ವೇ ಚ ಗುರುತ್ವೇ ಚ ಧ್ರಿಯಮಾಣಂ ಯಶೋಧಿಕಂ ॥
ಮಹತ್ವಾತ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ ॥ 1-1-269 ರಿಂದ 271

[5] ಗಾತ್ರದಲ್ಲಿ ತುಂಬ ದೊಡ್ಡವೆಂಬ ಪ್ರಸಿದ್ಧಿ ಪಡೆದ ಹೋಮರನ Illyad ಮತ್ತು Odyssey ಗಳ ಎಂಟರಷ್ಟಿದೆ ಮಹಾಭಾರತದ ಗಾತ್ರ.



೩. ವನಪರ್ವ— ಕಾಮ್ಯಕ ವನದಲ್ಲಿ ಪಾಂಡವರ ವಾಸ. (ಇದು ಬಹಳ ದೊಡ್ಡ ಪರ್ವ. ಇದರಲ್ಲೇ ನಳ, ಕಿರಾತಾರ್ಜುನೀಯ ಮುಂತಾದ ಉಪಾಖ್ಯಾನಗಳು ಬರುತ್ತವೆ).

೪. ವಿರಾಟಪರ್ವ— ವಿರಾಟನಗರದಲ್ಲಿ ಪಾಂಡವರ ಅಜ್ಞಾತವಾಸ; ಕೀಚಕನ ವಧೆ; ಉತ್ತರ ಗೋಗ್ರಹಣ.

೫. ಉದ್ಯೋಗಪರ್ವ— ಕೌರವ ಪಾಂಡವಪಕ್ಷಗಳಲ್ಲಿ ಯುದ್ಧಸಿದ್ಧತೆಗಳು.

೬. ಭೀಷ್ಮಪರ್ವ— ಕುರುಕ್ಷೇತ್ರದಲ್ಲಿ ಉಭಯಸೇನೆಗಳೂ ಯುದ್ಧೋನ್ಮುಖರಾಗುವುದು; ಭೀಷ್ಮನ ಸೇನಾಪತ್ಯ ಮತ್ತು ಪತನ.

೭. ದ್ರೋಣಪರ್ವ— ದ್ರೋಣನ ಸೇನಾಪತ್ಯ ಮತ್ತು ಧೃಷ್ಟದ್ಯುಮ್ನನಿಂದ ಅವನ ಪತನ.

೮. ಕರ್ಣಪರ್ವ— ಕರ್ಣನ ಸೇನಾಪತ್ಯ; ಅರ್ಜುನನಿಂದ ಕರ್ಣನ ಹನನ.

೯. ಶಲ್ಯಪರ್ವ— ಶಲ್ಯನ ಸೇನಾಪತ್ಯ; ಕೌರವವೀರರ ಪತನ; ಭೀಮದುರ್ಯೋಧನರ ಗದಾಯುದ್ಧ; ದುರ್ಯೋಧನನ ಅಂತ್ಯ.

೧೦. ಸೌಪ್ತಿಕಪರ್ವ— ಅಳಿದುಳಿದ ಮೂವರು ಕೌರವಪಕ್ಷೀಯರು ರಾತ್ರಿಯಲ್ಲಿ ಪಾಂಡವರ ಬಿಡಾರವನ್ನು ಪ್ರವೇಶಿಸಿ ಮೋಸದಿಂದ ಅವರ ಸೇನೆಯನ್ನು ನಾಶಪಡಿಸುವುದು.

೧೧. ಸ್ತ್ರೀಪರ್ವ— ಗಾಂಧಾರಿ ಮತ್ತಿತರ ಸ್ತ್ರೀಯರ ಪ್ರಲಾಪ.

೧೨. ಶಾಂತಿಪರ್ವ— ಯುಧಿಷ್ಠಿರನ ಪಟ್ಟಾಭಿಷೇಕ. ಯುಧಿಷ್ಠಿರನಿಗೆ ಭೀಷ್ಮನು ರಾಜಧರ್ಮ, ಆಪದ್ಧರ್ಮ ಮತ್ತು ಮೋಕ್ಷಧರ್ಮಗಳನ್ನು ಉಪದೇಶಿಸುವುದು.

೧೩. ಅನುಶಾಸನಪರ್ವ— ಭೀಷ್ಮನು ಲೋಕನೀತಿ, ರಾಜನೀತಿ, ವ್ರತಾದಿನಿಯಮಗಳು ಮೊದಲಾದುವನ್ನು ಉಪದೇಶಿಸುವುದು. ಭೀಷ್ಮನ ಅವಸಾನ.

೧೪. ಅಶ್ವಮೇಧಪರ್ವ— ಯುಧಿಷ್ಠಿರನಿಂದ ಅಶ್ವಮೇಧಯಾಗ.

೧೫. ಆಶ್ರಮವಾಸಿಕಪರ್ವ— ಅಂಧ ಧೃತರಾಷ್ಟ್ರನು ಗಾಂಧಾರಿ ಕುಂತಿಯರೊಡನೆ ವಾನಪ್ರಸ್ಥನಾಗುವುದು ಮತ್ತು ಅವರ ಅವಸಾನ.

೧೬. ಮೌಸಲಪರ್ವ— ಕೃಷ್ಣಬಲರಾಮರ ಅಂತ್ಯ, ಯಾದವೀಕಲಹ ಮತ್ತು ನಾಶ.

೧೭. ಮಹಾಪ್ರಾಸ್ಥಾನಿಕಪರ್ವ— ಪಾಂಡವರು ರಾಜ್ಯತ್ಯಾಗಮಾಡಿ ಸ್ವರ್ಗಾಭಿಮುಖರಾಗುವುದು.

೧೮. ಸ್ವರ್ಗಾರೋಹಣಪರ್ವ — ಪಾಂಡವರು ದ್ರೌಪದಿಯೊಡನೆ ಸ್ವರ್ಗಾರೋಹಣ ಮಾಡುವುದು.

ಇವುಗಳಲ್ಲಿ 14700 ಶ್ಲೋಕಗಳುಳ್ಳ ಶಾಂತಿಪರ್ವ ಅತ್ಯಂತ ದೊಡ್ಡದು. 200 ಶ್ಲೋಕಗಳ ಸ್ವರ್ಗಾರೋಹಣ ಪರ್ವ ಅತ್ಯಂತ ಚಿಕ್ಕದು.

ಮಹಾಭಾರತವು ಪ್ರಧಾನವಾಗಿ ಅನುಷ್ಟುಪ್ ಶ್ಲೋಕಗಳಲ್ಲೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ಈಗ ರೂಢಿಯಲ್ಲಿಲ್ಲದ ಆರ್ಷೇಯ ಗದ್ಯದಲ್ಲಿರುವ

ಭಾಗಗಳೂ ಇವೆ. ಇವು ಆದಿಪರ್ವದಲ್ಲಿ ಮೂರು, ವನಪರ್ವದಲ್ಲಿ ಏಳು, ಶಾಂತಿಪರ್ವದಲ್ಲಿ ಏಳು, ಅನುಶಾಸನಪರ್ವದಲ್ಲಿ ಮೂರು, — ಹೀಗೆ ಒಟ್ಟು ಇಪ್ಪತ್ತು ಕಡೆ ಬರುತ್ತವೆ. ಇವೆಲ್ಲಾ ಪ್ರಾಯಃ ಋಷಿಗಳು ವಿವರಿಸುವ ಉಪಾಖ್ಯಾನಗಳೇ.

## ಮಹಾಭಾರತದ ರಚನೆ

ಮಹಾಭಾರತ ರಚಿಸಿದವರು [5]ವ್ಯಾಸಮಹರ್ಷಿಗಳು. ಇವರು ಕೌರವ ಪಾಂಡವರ ಸಮಕಾಲೀನರಾಗಿದ್ದುದರಿಂದ ಮಹಾಭಾರತದ ವಿವರಗಳನ್ನು ತಾವು [6]ಕಣ್ಣಾರ ಕಂಡಂತೆಯೇ ನಿರೂಪಿಸಿರುವುದು ಈ ಗ್ರಂಥದ ವೈಶಿಷ್ಟ್ಯ. ವ್ಯಾಸರು ಇದನ್ನು ರಚಿಸುತ್ತಾ ಹೋದಂತೆಲ್ಲಾ ಗಣೇಶನು [7]ಬರೆದಿಟ್ಟುಕೊಂಡನಂತೆ. ಗ್ರಂಥರಚನೆ ಮುಗಿಯಲು ಮೂರು ವರ್ಷಗಳು ಬೇಕಾದುವೆಂದು ತಿಳಿದು ಬರುತ್ತದೆ.[8] ಮಹಾಭಾರತವನ್ನು ವ್ಯಾಸರು ದ್ವಾಪರಯುಗದ ಕೊನೆಯಲ್ಲಿ ಕಲಿಯುಗದ ಆದಿಯಲ್ಲಿ ರಚಿಸಿದರೆಂದು ವರಾಹಪುರಾಣ ತಿಳಿಸುತ್ತದೆ. ಕಲಿಯುಗದ ಮೊದಲನೆಯ ದಿವಸ ಕೃಷ್ಣನು ಪರಂಧಾಮವೈದಿದಂತೆ ಭಾಗವತದಲ್ಲಿ ಉಕ್ತವಾಗಿದೆ. ವಾಸುದೇವನ ಮಾಹಾತ್ಮ್ಯ, ಪಾಂಡವರ ಸತ್ಯಪರತೆ, ದುರ್ಯೋಧನಾದಿಗಳ ದುರ್ವೃತ್ತ — ಇವುಗಳನ್ನು ಮಹಾಭಾರತದಲ್ಲಿ ವ್ಯಾಸರು ನಿರೂಪಿಸಿರುವುದಾಗಿ ಆದಿಪರ್ವದಲ್ಲಿ ಹೇಳಿದೆ.[9] ಮಹಾಭಾರತದ ವ್ಯಾಖ್ಯಾನ

[5] ಕೃಷ್ಣ ಎಂಬುದು ಇವರ ಸರಿಯಾದ ಹೆಸರು. ಇವರೇ ವೇದಗಳನ್ನು ಕ್ರಮಪಡಿಸಿದುದರಿಂದ ವೇದವ್ಯಾಸರಾದರು;—(ವಿವ್ಯಾಸ ವೇದಾನ್ ಯಸ್ಮಾತ್ಸ ತಸ್ಮಾತ್ ವ್ಯಾಸ ಇತಿ ಸ್ಮೃತಃ—ಮಹಾಭಾರತ 1-64-130); ದ್ವೀಪದಲ್ಲಿ ಜನಿಸಿದುದರಿಂದ ದ್ವೈಪಾಯನನೂ, ಪರಾಶರನ ಮಗನಾದುದರಿಂದ ಪಾರಾಶರ್ಯನೂ, ಕನ್ಯೆಯಲ್ಲಿ ಜನಿಸಿದುದರಿಂದ ಕಾನೀನನೂ, ಬದರಿಕಾಶ್ರಮದಲ್ಲಿದ್ದುದರಿಂದ ಬಾದರಾಯಣನೂ ಆದರು. ಇವರಿಗೆ ವಸಿಷ್ಠರ ಸಂಬಂಧದಿಂದ ವಾಸಿಷ್ಠ ಎಂಬ ಹೆಸರೂ ಬಂದಿತ್ತು. ಕೃಷ್ಣದ್ವೈಪಾಯನ ವ್ಯಾಸ ಎಂಬುದು ಇವರಿಗೆ ಸಾಮಾನ್ಯವಾಗಿ ರೂಢಿಯಲ್ಲಿರುವ ಹೆಸರು.

[6] ಕುರುರಾಜಕುಲಸ್ಥಾನಾಂ ದೃಷ್ಟಂ ವೃತ್ತಂ ಚ ಯತ್ ಸ್ಥಿತಂ।
ತತ್ಸರ್ವಂ ಭಗವಾನ್ ವ್ಯಾಸೋ ವರ್ಣಯಾಮಾಸ ಭಾರತೇ ॥ — ಪದ್ಮಪುರಾಣ

[7] ಮಹಾಭಾರತ ಆದಿಪರ್ವ 1-115. [T. R. Krishnachar's edition]

[8] ತ್ರಿಭಿರ್ವರ್ಷೈಃ ಸದೋತ್ಥಾಯೀ ಕೃಷ್ಣದ್ವೈಪಾಯನೋ ಮುನಿಃ।
ಮಹಾಭಾರತಮಾಖ್ಯಾನಂ ಕೃತವಾನಿದಮುತ್ತಮಮ್ ॥ — ಆದಿ 62-55

[9] ವಾಸುದೇವಸ್ಯ ಮಾಹಾತ್ಮ್ಯಂ ಪಾಂಡವಾನಾಂ ಚ ಸತ್ಯತಾಂ।
ದುರ್ವೃತ್ತಂ ಧಾರ್ತರಾಷ್ಟ್ರಾಣಾಮುಕ್ತವಾನ್ ಭಗವಾನೃಷಿಃ ॥ — ಆದಿ 1-76



ಕಾರರಲ್ಲಿ ಅಗ್ರಗಣ್ಯನೆಂದು ಪರಿಗಣಿತನಾಗಿರುವ ನೀಲಕಂಠನೂ[10] ಇದೇ ಅಂಶವನ್ನು ಪ್ರತಿಪರ್ವದ ಅವತರಣಿಕೆಯಲ್ಲೂ ಪ್ರತಿಪಾದಿಸಿದ್ದಾನೆ.

ವ್ಯಾಸರು ಈ ರೀತಿ ರಚಿಸಿದ ಆಖ್ಯಾನಕ್ಕೆ 'ಜಯ'[11] ಎಂದು ಹೆಸರು. ಇದನ್ನು ಕೌರವ ಪಾಂಡವರೆಲ್ಲ ಗತಿಸಿದ ಮೇಲೆ ಸುಮಂತು, ಜೈಮಿನಿ, ಪೈಲ, ಶುಕ ಮತ್ತು ವೈಶಂಪಾಯನ ಎಂಬ ವ್ಯಾಸರ ಐದು ಜನ ಶಿಷ್ಯರೂ ಪ್ರತ್ಯೇಕವಾಗಿ ಪ್ರಚುರಪಡಿಸಿದರಂತೆ. ಈ ಐದು ಪರಂಪರೆಯ ಆಖ್ಯಾನಗಳಲ್ಲಿ ವೈಶಂಪಾಯನನಿಂದ ಬಂದುದು ಮಾತ್ರ ಸಂಪೂರ್ಣವಾಗಿಯೂ, ಜೈಮಿನಿಯದರಲ್ಲಿ ಕೇವಲ ಅಶ್ವಮೇಧಪರ್ವವೂ ಈಗ ಉಪಲಬ್ಧವಾಗಿವೆ.

ವೈಶಂಪಾಯನನು ಈ ಆಖ್ಯಾನವನ್ನು ಮೊಟ್ಟಮೊದಲು ಜನಮೇಜಯನ ಸರ್ಪಯಾಗದಲ್ಲಿ ಪಠಿಸಿದಂತೆಯೂ, ಆಗ ಜನಮೇಜಯನು ಕೆಲವು ವಿವರಗಳನ್ನು ತಿಳಿಯಲು ಅಪೇಕ್ಷಿಸಿದಂತೆಯೂ ವೈಶಂಪಾಯನನು ವಿಸ್ತಾರವಾಗಿ ಎಲ್ಲವನ್ನೂ ತಿಳಿಸಿದಂತೆಯೂ ಮಹಾಭಾರತದಿಂದಲೇ ತಿಳಿದು ಬರುತ್ತದೆ. ಈ ವಿವರಗಳೂ ಮೂಲ ಆಖ್ಯಾನವಾದ 'ಜಯ'ವೂ ಒಟ್ಟು ಸೇರಿ 'ಭಾರತಸಂಹಿತೆ'ಯಾಯಿತು. ವೈಶಂಪಾಯನನಿಂದ ಕೇಳಿ ತಿಳಿದುಕೊಂಡಿದ್ದ ಇದೇ 'ಭಾರತಸಂಹಿತೆ'ಯನ್ನು 'ಸೌತಿ'ಯು ಮುಂದೆ ನೈಮಿಶಾರಣ್ಯದಲ್ಲಿ ಶೌನಕಋಷಿಗೆ ಯಾಗಕಾಲದಲ್ಲಿ ಶ್ರವಣಮಾಡಿಸಿದಂತೆಯೂ, ಆಗ ಆ ಋಷಿಯ ಪ್ರಶ್ನೆಗಳಿಗೆ ಸಮಾಧಾನರೂಪವಾಗಿ ಸೌತಿಯು ಇನ್ನೂ ಹೆಚ್ಚು ವಿವರಗಳನ್ನು ನೀಡಿದಂತೆಯೂ ಮಹಾಭಾರತದಲ್ಲೇ ಹೇಳಿರುವುದರಿಂದ, ಈ ಹೊಸ ಅಂಶಗಳೂ ಭಾರತಸಂಹಿತೆಗೆ ಸೇರಿಕೊಂಡು ಈಗಿನ ಮಹಾಭಾರತದ ಆವಿರ್ಭಾವವಾಯಿತು.

ಈಗ ಪ್ರಚಲಿತವಾಗಿರುವ ಮಹಾಭಾರತವು ಮೂಲತಃ ಚಿಕ್ಕ ಆಖ್ಯಾನವೆಂದೂ ಕನಿಷ್ಟಪಕ್ಷ ಮೂರು ಹಂತಗಳಲ್ಲಿ ಅದು ಬೆಳೆದು ಈಗಿನ ಬೃಹದಾಕಾರವನ್ನು ತಾಳಿರಬೇಕೆಂದೂ ಹೇಳಲು ಅಂತಃಪ್ರಮಾಣಗಳೇ ಹೇರಳವಾಗಿವೆ.—

[10] ನೀಲಕಂಠ (ಕ್ರಿ.ಶ. ೧೭ನೆಯ ಶತಮಾನ), ಸರ್ವಜ್ಞನಾರಾಯಣ (ಕ್ರಿ.ಶ. ೧೪ನೆಯ ಶತಮಾನ), ಅರ್ಜುನಮಿಶ್ರ (ಕ್ರಿ.ಶ. ೧೫ ನೆಯ ಶತಮಾನ) ಇವರು ಮಹಾಭಾರತ ವ್ಯಾಖ್ಯಾನಕಾರರಲ್ಲಿ ಪ್ರಸಿದ್ಧರು.

[11] ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥
—ಮಹಾಭಾರತದ ಪ್ರಾರಂಭಿಕ ಮಂಗಳ ಶ್ಲೋಕ

೧) ಮಹಾಭಾರತಕ್ಕೆ [12]ಜಯ, [13]ಭಾರತಸಂಹಿತೆ, [14]ಮಹಾಭಾರತ ಎಂಬ ಮೂರು ಹೆಸರುಗಳಿರುವುದು.

೨) ಮೂರು ಬೇರೆ ಬೇರೆ ಮಂಗಳ ಶ್ಲೋಕಗಳಿರುವುದು.

೩) ಮೂರು ಬೇರೆ ಬೇರೆ ಭಾಗವನ್ನು ಮಹಾಭಾರತದ [15]ಆದಿ ಎಂದು ನಿರ್ದೇಶಿಸಿರುವುದು.

೪) ಮಹಾಭಾರತದ ಒಟ್ಟು ಶ್ಲೋಕಗಳ ಸಂಖ್ಯೆಯನ್ನು ಆದಿಪರ್ವದಲ್ಲೇ ಮೂರು ಕಡೆ ಮೂರು ಬಗೆಯಾಗಿ ಹೇಳಿರುವುದು. (ಉಗ್ರಶ್ರವಸ್ಸಿನ [16]ವಾಕ್ಯದಂತೆ 8800 ಶ್ಲೋಕಗಳು; ಮುಂದೆ ವ್ಯಾಸರೇ ಹೇಳುವಂತೆ[17] 24000 ಶ್ಲೋಕಗಳು; ಇನ್ನೂ ಮುಂದೆ ಹೇಳಿರುವಂತೆ [18]ಒಂದು ಲಕ್ಷ ಶ್ಲೋಕಗಳು).

೫) ಮೂರು ಬಗೆಯ ವಿಷಯಗಳು ಮಹಾಭಾರತದಲ್ಲಿ ಪ್ರತಿಪಾದಿತವಾಗಿರುವುದು—

12 ಜಯೋ ನಾಮೇತಿಹಾಸೋಽಯಂ ಶ್ರೋತವ್ಯೋ ವಿಜಿಗೀಷುಣಾ — ಆದಿ 62-22

13 ಚತುರ್ವಿಂಶತಿಸಾಹಸ್ರೀಂ ಚಕ್ರೇ ಭಾರತಸಂಹಿತಾಂ ।
ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ ॥ — ಆದಿ 1-78

14 ಮೇಲಿನ ಟಿಪ್ಪಣಿ 3 ನೋಡಿ.

15 ಮನ್ವಾದಿ ಭಾರತಂ ಕೇಚಿತ್ ಆಸ್ತಿಕಾದಿ ತಥಾಪರೇ ।
ತಥೋಪರಿಚರಾದನ್ಯೇ ವಿಪ್ರಾಃ ಸಮ್ಯಗಧೀಯಿರೇ ॥ — ಆದಿ 1-66

16 ಯಸ್ಮಿನ್ ಪ್ರತಿಜ್ಞಯಾ ಪ್ರಾಹ ಮುನಿರ್ದ್ವೈಪಾಯನಸ್ತ್ವಿದಂ ।
ಅಷ್ಟೌ ಶ್ಲೋಕಸಹಸ್ರಾಣಿ ಅಷ್ಟೌ ಶ್ಲೋಕಶತಾನಿ ಚ ॥ — ಆದಿ 1-117
ಇಲ್ಲಿಂದ ಮುಂದಕ್ಕೆ 'ತತ್ ಶ್ಲೋಕಕೂಟಮದ್ಯಾಪಿ ಗ್ರಥಿತಂ ಸುದೃಢಂ ಮುನೇ' ಎಂಬ ವಾಕ್ಯವಿದೆ. ಇಲ್ಲಿನ ಶ್ಲೋಕಕೂಟ ಎಂಬ ಪದಕ್ಕೆ 'ಕೂಟಶ್ಲೋಕ' ಎಂಬ ಅರ್ಥವಿಟ್ಟು ಕೊಂಡು ಮೇಲಿನ ವಾಕ್ಯ ಮಹಾಭಾರತದಲ್ಲಿರುವ ಕೂಟ ಶ್ಲೋಕಗಳಿಗೆ ಅನ್ವಯಿಸುತ್ತದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ 'ತತ್ ಶ್ಲೋಕಕೂಟಂ' ಎಂದರೆ ಶ್ಲೋಕಸಮೂಹ ಎಂದು ಅರ್ಥಮಾಡುವುದೇ ಸಮಂಜಸವಾಗಿ ತೋರುತ್ತದೆ. ಮಹಾಭಾರತದಲ್ಲಿ 'ಕೂಟಶ್ಲೋಕ'ವೆನ್ನಿಸಿಕೊಳ್ಳಬಹುದಾದ 8800 ಶ್ಲೋಕಗಳಿವೆಯೆನ್ನುವುದಾದರೂ ವಾಸ್ತವಾಂಶಕ್ಕೆ ಬಹುದೂರ.

17 ಮೇಲಿನ ಟಿಪ್ಪಣಿ 13 ನೋಡಿ.

18 ಅಸ್ಮಿಂಸ್ತು ಮಾನುಷೇ ಲೋಕೇ ವೈಶಂಪಾಯನ ಉಕ್ತವಾನ್ ।
ಏಕಂ ಶತಸಹಸ್ರಂ ತು ಮಯೋಕ್ತಂ ವೈ ನಿಬೋಧತ ॥ — ಆದಿ 1-127



ಅ) ಪ್ರಧಾನ ಕಥಾಭಾಗವಾದ ಕೌರವ ಪಾಂಡವ ವೀರರ ಚರಿತೆ, ಮಹಾಭಾರತ ಯುದ್ಧ ಮತ್ತು ಅದರ ಪರಿಣಾಮ.

ಆ) ಆಧ್ಯಾತ್ಮಿಕ ತತ್ವ ಮತ್ತು ವೈಷ್ಣವ ಸಿದ್ಧಾಂತಗಳನ್ನು ನಿರೂಪಿಸುವ ಅನೇಕ ಪ್ರಸಂಗಗಳು. (ಭಗವದ್ಗೀತೆಯೂ ಇದೇ ಭಾಗಕ್ಕೆ ಸೇರಿದುದು).

ಇ) ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳ ವಿವರಣೆ, ಅವುಗಳನ್ನು ಸಂಪಾದಿಸುವ ಮಾರ್ಗ ಮುಂತಾದುವುಗಳನ್ನು ಬೋಧಿಸುವ ಹೇರಳವಾದ ಉಪಾಖ್ಯಾನಗಳು.

೬) ವ್ಯಾಸರಿಂದ ರಚಿತವಾದ ಮೂಲ ಆಖ್ಯಾನ ಬೇರೆ ಬೇರೆ ಕಾಲಗಳಲ್ಲಿ ವೈಶಂಪಾಯನ ಮತ್ತು ಸೂತಪುರಾಣಿಕ ಇವರಿಬ್ಬರ ಕೈವಾಡಕ್ಕೊಳಗಾಗಿ ಹೊರ ಬಂದಿರುವುದು.

ಈ ಎಲ್ಲ ಪ್ರಮಾಣಗಳ ಪರಿಶೀಲನೆಯಿಂದ ಸಿದ್ಧವಾಗುವುದೇನೆಂದರೆ—

ಅ) ವ್ಯಾಸರು ರಚಿಸಿದ ಮೂಲ ಆಖ್ಯಾನದಲ್ಲಿ 8800 ಶ್ಲೋಕಗಳಿದ್ದು ಅದಕ್ಕೆ **ಜಯ** ಎಂಬ ಹೆಸರು ಇದ್ದಿರಬೇಕು.

ಆ) ವೈಶಂಪಾಯನರು ತಮ್ಮ ವಿವರಣೆಗಳೊಂದಿಗೆ ಜನಮೇಜಯನಿಗೆ ಶ್ರವಣಮಾಡಿಸಿದ ಎರಡನೆಯ ಹಂತದ **ಭಾರತಸಂಹಿತೆ**ಯಲ್ಲಿ 24000 ಶ್ಲೋಕಗಳಿದ್ದಿರಬೇಕು.

ಇ) ಸೂತಪುರಾಣಿಕನು ನೈಮಿಶಾರಣ್ಯದಲ್ಲಿ ಋಷಿಗಳಿಗೆ ತಿಳಿಸಿದ ಮೂರನೆಯ ಹಂತದ **ಮಹಾಭಾರತ**ದಲ್ಲಿ ಒಂದು ಲಕ್ಷ ಶ್ಲೋಕಗಳಿದ್ದಿರಬೇಕು.

ಇದರಿಂದ ಮಹಾಭಾರತವು ಒಂದು ನಿರ್ದಿಷ್ಟಕಾಲದಲ್ಲಿ ಒಬ್ಬನೇ ಕವಿಯಿಂದ ರಚಿತವಾದದ್ದಲ್ಲವೆಂದೂ ಮೂಲಭಾರತವು ವ್ಯಾಸರಚಿತವೇ ಎಂಬುವುದರಲ್ಲಿ ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಮುಂದೆ ಎರಡು [19]ಹಂತಗಳಲ್ಲಾದರೂ ಅದು ಬೆಳೆದು ಈಗಿನ ರೂಪಕ್ಕೆ ಬಂದಿರಬೇಕೆಂದೂ ಹೇಳಬೇಕಾಗುತ್ತದೆ.

19 ಹೀಗೆ ಬೆಳೆಯಲು ಅನೇಕ ಶತಮಾನಗಳ ಕಾಲ ಹಿಡಿದಿರಬೇಕು. ನಾನಾ ಲೇಖಕರು ತಮಗೆ ತೋರಿದಂತೆಲ್ಲಾ ಉಪಾಖ್ಯಾನಾದಿಗಳನ್ನು ಮೂಲ ಆಖ್ಯಾನಕ್ಕೇ ಸೇರಿಸಿ ಹೀಗೆ ಬೆಳೆಸಿರಬೇಕು. ಆದ್ದರಿಂದಲೇ ಯಯಾತಿ, ವೃತ್ರ ಮುಂತಾದ ಉಪಾಖ್ಯಾನಗಳು

## ಮಹಾಭಾರತದ ಕಾಲ

ಮಹಾಭಾರತಯುದ್ಧವು ದ್ವಾಪರ ಕಲಿಯುಗಗಳ ಸಂಧಿಯಲ್ಲಿ[20] ನಡೆಯಿತೆಂದೂ ಮಹಾಭಾರತಯುದ್ಧ ಮುಗಿಡ ಮೇಲೆ ಪಾಂಡವರು 36 ವರ್ಷಕಾಲ ರಾಜ್ಯಭಾರಮಾಡಿದುದಾಗಿಯೂ ಧೃತರಾಷ್ಟ್ರನು 18 ವರ್ಷ ಮಾತ್ರ ಬದುಕಿದ್ದುದಾಗಿಯೂ ಮಹಾಭಾರತದಲ್ಲೇ ಹೇಳಿದೆ. ಶ್ರೀಕೃಷ್ಣನು ಕಲಿಯುಗ ಪ್ರವೇಶಿಸಿದ ಮೊದಲನೆಯ ದಿವಸವೇ [21]ಇಹಲೋಕವನ್ನು ತ್ಯಾಗಮಾಡಿದುದಾಗಿ ಭಾಗವತ xii 2-30 ರಿಂದ ತಿಳಿದುಬರುತ್ತದೆ. ಪರಂಪರೆಯಾಗಿ ಬಂದಿರುವ ಈ ಆಧಾರಗಳಿಂದ ಮಹಾಭಾರತ ಯುದ್ಧವು ಕ್ರಿ.ಪೂ. 3138 ರಲ್ಲಿ ನಡೆಯಿತೆಂದೂ ಕೃಷ್ಣನು ಕ್ರಿ.ಪೂ. 3102 ರಲ್ಲಿ ಪರಂಧಾಮವೈದಿದನೆಂದೂ ಸ್ಪಷ್ಟವಾಗುತ್ತದೆ.

ಪರೀಕ್ಷಿತ್ ರಾಜನು ಆಳುತ್ತಿದ್ದಾಗ ಸಪ್ತರ್ಷಿಮಂಡಲವು ಮಘಾ ನಕ್ಷತ್ರದಲ್ಲಿದ್ದಂತೆ [22]ಪುರಾಣಗಳಲ್ಲಿ ಉಕ್ತವಾಗಿದೆ. ಖಗೋಳಜ್ಞರ ಗಣಿತದ ರೀತ್ಯಾ ಇದು ಕ್ರಿ.ಪೂ. 3177 ರಲ್ಲೂ ಕ್ರಿ.ಪೂ. 477 ರಲ್ಲೂ ಆಗಿತ್ತೆಂದೂ ಪುನಃ ಕ್ರಿ.ಶ. 2223 ರಲ್ಲಿ ಸಂಭವಿಸುತ್ತದೆಂದೂ ಪ್ರತಿಸಲವೂ ಸಪ್ತರ್ಷಿಮಂಡಲವು ಆಯಾನಕ್ಷತ್ರದಲ್ಲಿ 100 ವರ್ಷಗಳ[23] ಕಾಲ ಇರುತ್ತದೆಂದೂ ತಿಳಿದುಬರುತ್ತದೆ.

---

ಮಹಾಭಾರತದ ಬೇರೆ ಬೇರೆ ಕಡೆ ಬೇರೆ ಬೇರೆ ರೀತಿಯಲ್ಲಿ ಪುನರುಕ್ತವಾಗಿರುವುದು. ಕ್ಷೇತ್ರಮಹಾತ್ಮ್ಯಗಳಂತು ಸಂಪೂರ್ಣವಾಗಿ ಪ್ರಕ್ಷಿಪ್ತಗಳೇ—ಎಂಬುದು ಆಧುನಿಕ ವಿಮರ್ಶಕರ ಅಭಿಪ್ರಾಯ.

20 ಅಂತರೇ ಚೈವ ಸಂಪ್ರಾಪ್ತೇ ಕಲಿದ್ವಾಪರಯೋರಭೂತ್ ।
ಸಮಂತಪಂಚಕೇ ಯುದ್ಧಂ ಕುರುಪಾಂಡವಸೇನಯೋಃ ॥ — ಆದಿ 2-13

21 ಕೃಷ್ಣನು 125 ವರ್ಷ 7 ತಿಂಗಳು 8 ದಿನ ಬದುಕಿ ಕಲಿಯುಗದ ಮೊದಲನೇ ದಿನ ಇಹಲೋಕ ತ್ಯಾಗಮಾಡಿಪಂತೆ ವಿಷ್ಣುಪುರಾಣದಲ್ಲೂ ಇತರಪುರಾಣಗಳಲ್ಲೂ ಹೇಳಿದೆ.

22 ಅ) ಸಪ್ತರ್ಷಯೋ ಮಘಾಯುಕ್ತಾಃ ಕಾಲೇ ಪಾರಿಕ್ಷಿತೇ ಶತಂ ।
— ಮತ್ಸ್ಯಪುರಾಣ 271-46

ಆ) ತೇ ತು ಪಾರಿಕ್ಷಿತೇ ಕಾಲೇ ಮಘಾಸ್ವಾಸನ್ ದ್ವಿಜೋತ್ತಮ ।
— ವಿಷ್ಣುಪುರಾಣ 4-24-106

ಇ) ಭಾಗವತ xii 2. ವಾಯುಪುರಾಣ 99.

23 ಬೃಹತ್ಸಂಹಿತೆ xiii 4.



ಈ ಪ್ರಮಾಣವೂ ಮಹಾಭಾರತ ಯುದ್ಧವು ಕ್ರಿ. ಪೂ. 3138 ರಲ್ಲಿ ಆಯಿತೆಂಬುದನ್ನೇ ಪುಷ್ಟೀಕರಿಸುತ್ತದೆ.

ಮಹಾಭಾರತ ಯುದ್ಧ ಮುಗಿದಮೇಲೆ 36 ವರ್ಷ ಪಾಂಡವರು ರಾಜ್ಯವಾಳಿದರು ಇವರ ಕಾಲವಾದ ಮೇಲೆ ವ್ಯಾಸರು ಈ ಆಖ್ಯಾನವನ್ನು ರಚಿಸಿದುದು. ಅದನ್ನು ರಚಿಸಲು ಮೂರು ವರ್ಷ ಹಿಡಿಯಿತು. ಅಂದರೆ ಕ್ರಿಸ್ತಪೂರ್ವ 3100 ರ ಸುಮಾರಿನಲ್ಲಿ ಮೂಲ ಮಹಾಭಾರತ ರಚಿತವಾಗಿರಬೇಕು. ಪರೀಕ್ಷಿತನಿಗೆ ಪಟ್ಟಕಟ್ಟಿ ಪಾಂಡವರು ಮಹಾಪ್ರಸ್ಥಾನ ಬೆಳೆಸಿದಂತೆ ಮಹಾಪ್ರಾಸ್ಥಾನಿಕಪರ್ವದಲ್ಲಿ ಉಕ್ತವಾಗಿದೆ. ಇದು ಕ್ರಿ.ಪೂ. 3102 ರಲ್ಲಿ ಆಗಿರಬೇಕು. ಪರೀಕ್ಷಿತನು ರಾಜ್ಯವಾಳಿದ್ದು 60 ವರ್ಷ ಕಾಲ. ಆದ್ದರಿಂದ ಅವನ ಮಗ ಜನಮೇಜಯನು ಕ್ರಿ.ಪೂ. 3042 ರಲ್ಲಿ ರಾಜನಾಗಿ ಒಂದೆರಡು ವರ್ಷಗಳಲ್ಲಿ ಯಾಗಮಾಡಿದಾಗ ವೈಶಂಪಾಯನರು 'ಜಯ'ದ ಶ್ರವಣಮಾಡಿಸಿದರಾದುದರಿಂದ ಸುಮಾರು ಕ್ರಿ.ಪೂ. 3040 ರಲ್ಲಿ ಅದು ಭಾರತಸಂಹಿತೆಯ ರೂಪ ತಾಳಿರಬೇಕು. ಈ ಭಾರತವು ಮುಂದೆ, ಅಂದರೆ ಸುಮಾರು ಕ್ರಿ.ಪೂ. 3000 ದ ವೇಳೆಗೆ ಸೌತಿಯು ನೈಮಿಶಾರಣ್ಯದಲ್ಲಿ ಪಠಿಸಿದಾಗ, ಮಹಾಭಾರತವಾಗಿ ಈಗಿನ ರೂಪದಲ್ಲಿ ಪ್ರಚಾರಕ್ಕೆ ಬಂದಿರಬೇಕು.

ಆದರೆ ಆಧುನಿಕ ವಿದ್ವಾಂಸರು ಮಹಾಭಾರತ ಅಷ್ಟು ಪ್ರಾಚೀನವೆಂದು ಹೇಳಲು ಹಿಂದೆಗೆಯುತ್ತಾರೆ. ಅವರ ವಿಚಾರಸರಣಿ ಬೇರೆ ರೀತಿಯಲ್ಲಿದೆ.—

ಮಹಾಭಾರತದ ಕಥಾವಸ್ತು ಕುರುಪಾಂಚಾಲರ ವೈಮನಸ್ಯದಿಂದಾದ ಯುದ್ಧವೆಂದು ಹಿಂದೆಯೇ ಹೇಳಿದೆ. ಯಜುರ್ವೇದದಲ್ಲಿ ಈ ಎರಡು ಬಣಗಳವರೂ ಪುನಃ ಒಂದಾಗಿ ಸೇರಿದಂತೆ ಉಲ್ಲೇಖವಿರುವುದರಿಂದ ಈ ಕಥಾವಸ್ತು ಕ್ರಿ.ಪೂ. ಒಂದು ಸಾವಿರ ವರ್ಷದಷ್ಟಾದರೂ ಹಿಂದಿನದಿರಬೇಕು. ಈ ಎರಡು ಬಣಗಳ ವೀರರ ಕಥೆಗಳೂ ಪ್ರಶಂಸೆಗಳೂ ಬೇರೆ ಬೇರೆ ಕಡೆ ಬೇರೆ ಬೇರೆ ಕಾಲಗಳಲ್ಲಿ ರಚಿತವಾಗಿ ಬಳಕೆಯಲ್ಲಿದ್ದು ಕ್ರಮೇಣ ಸುಮಾರು ಕ್ರಿ.ಪೂ. 600 ರಲ್ಲಿ ಮಹಾಭಾರತದ 8800 ಶ್ಲೋಕಗಳ ಮೂಲರೂಪದಲ್ಲಿ ಕ್ರಮಬದ್ಧವಾದ ಆಕಾರ ತಾಳಿರಬೇಕೆಂದು ಸಾಮಾನ್ಯವಾಗಿ ಊಹಿಸಬಹುದು. ಮೂಲಭಾರತವು ಜನಸಾಮಾನ್ಯರಲ್ಲಿ ಹೆಚ್ಚು ಹೆಚ್ಚು ಪ್ರಸಿದ್ಧಿಗಳಿಸುತ್ತಿದ್ದುದರಿಂದ ಜನರಲ್ಲಿ ದೈವಭಕ್ತಿಯನ್ನು ವೃದ್ಧಿಪಡಿಸಲು ಅದನ್ನು ಪ್ರಭಾವಶಾಲಿಯಾದ ಸಾಧನ

ವನ್ನಾಗಿ ಬಳಸಿಕೊಳ್ಳಲು ಬಯಸಿದ ಧರ್ಮಾಭಿಮಾನಿಗಳು ಅದಕ್ಕೆ ವೈಷ್ಣವ ರೂಪವನ್ನು ಕೊಟ್ಟು ಕೃಷ್ಣನನ್ನು ವಿಷ್ಣುವಿನ ಅವತಾರವೇ ಎಂದು ನಿರೂಪಿಸುವ ಕೆಲವು ಹೊಸ ಹೊಸ ಭಾಗಗಳನ್ನು ಸೇರಿಸಿ, 24000 ಶ್ಲೋಕಗಳಷ್ಟು ಬೆಳೆಸಿ ಅದನ್ನು ಐದನೆಯ ವೇದ, 'ಕಾರ್ಷ್ಣ ವೇದ' ಎಂದು ಕರೆದಿರಬೇಕು. ಇವುಗಳಲ್ಲಿ ಬೌದ್ಧ ಅವಶೇಷ ಮತ್ತು ವಿಹಾರಗಳ ಮತ್ತು ಯವನರ [24]ಉಲ್ಲೇಖಗಳಿರುವುದರಿಂದ ಈ ಎರಡನೆಯ ಹಂತದ ಬೆಳವಣಿಗೆಯು ಕ್ರಿ. ಪೂ. 300 ರ ವೇಳೆಗೆ ಮುಗಿದಿರಬೇಕು. ಈ ಎರಡನೆಯ ಹಂತದ ಭಾರತವು ಎಲ್ಲ ವರ್ಗಗಳ ಜನರಲ್ಲೂ ದೈವಭಕ್ತಿ ಮೂಡಿಸಲು ಸಮರ್ಥವಾದುದನ್ನು ಕಂಡ ತತ್ತ್ವಾಭಿಮಾನಿಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ನೀತಿಬೋಧಕಗಳೂ ಆಧ್ಯಾತ್ಮಿಕ ತತ್ತ್ವನಿರೂಪಣೆ ಮಾಡತಕ್ಕವುಗಳೂ ಆದ ಹಲವಾರು ಪ್ರಕರಣಗಳನ್ನು ಮಧ್ಯೆ ಮಧ್ಯೆ ಸೇರಿಸಿ ಭಾರತವನ್ನು ಮೂರನೆಯ ಹಂತದ ಒಂದು ಲಕ್ಷಕ್ಕಿಂತ ಹೆಚ್ಚು ಶ್ಲೋಕಗಳುಳ್ಳ ಮಹಾಭಾರತವನ್ನಾಗಿ ನಿರೂಪಿಸಿ ಅದನ್ನು ಸ್ಮೃತಿಯೆಂದು ಕರೆದು ಜನಸಾಮಾನ್ಯರ ನೀತಿ ಮತಬೋಧೆಗೆ ಬಳಸಲಾರಂಭಿಸಿರಬೇಕು. ಇದು ಕ್ರಿ. ಶ. 300 ರ [25]ವೇಳೆಗೆ ಆಗಿರಬಹುದು. ಒಟ್ಟಿನಲ್ಲಿ ಮಹಾಭಾರತ ತನ್ನ ಮೂಲರೂಪದಿಂದ ಈಗಿನ ರೂಪಕ್ಕೆ ಬೆಳೆಯಲು ಎಂಟು ಒಂಭತ್ತು ಶತಾಬ್ದಿಗಳ ಕಾಲ ಹಿಡಿಸಿರಬೇಕು.

ಇದು ಬಹುಜನ ಆಧುನಿಕರಿಗೆ ಸಮ್ಮತವಾದ ಅಭಿಪ್ರಾಯವೇ ಆದರೂ, ಇದಕ್ಕೆ ವಿರುದ್ಧವಾಗಿ ಬೇರೆ ರೀತಿಯಲ್ಲಿ ಮಹಾಭಾರತದ ಕಾಲ ಮತ್ತು ರಚನೆಗಳನ್ನು ನಿರೂಪಿಸಿರುವ ವಿದ್ವಾಂಸರೂ[26] ಇದ್ದಾರೆ.

---

24 ಈ ಯವನರನ್ನು ಗ್ರೀಕರೆಂದೇ ಭಾವಿಸಲಾಗಿದೆ. ಅಲೆಗ್ಝಾಂಡರನ ದಂಡಯಾತ್ರೆಯ ಕಾಲದಿಂದ ಇಂಡಿಯಾದೇಶದಲ್ಲಿ ಗ್ರೀಕರ ಸಂಪರ್ಕ ಆರಂಭವಾಯಿತು.

25 ಕ್ರಿಸ್ತಶಕ ಮೊದಲನೆಯ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿದ್ದ ಗ್ರೀಕ್ ಲೇಖಕ ರೇಟಾರ್ ಡಯಾನ್ ಕ್ರಿಸೋಸ್ಟಮ್ ಎಂಬುವನು ಒಂದು ಲಕ್ಷ ಶ್ಲೋಕದ ಮಹಾಭಾರತ ದಕ್ಷಿಣ ಇಂಡಿಯಾದಲ್ಲಿ ಪ್ರಸಿದ್ಧವಾಗಿತ್ತೆಂದು ಬರೆದಿದ್ದಾನೆ. ಈ ಆಧಾರದ ಮೇಲೆ ಮಹಾಭಾರತ ತನ್ನ ಈಗಿನ ರೂಪವನ್ನು ಕ್ರಿಸ್ತಶಕಾದಿಯ ವೇಳೆಗೇ ಪಡೆದಿತ್ತೆಂದು ಹೇಳಬೇಕಾಗುತ್ತದೆ. — ನೋಡಿ Dr. V. Varadachari's A History of Samskrita Literature (2nd edition), page 52.

26 ನಮ್ಮ Outlines of the History of Classical Sanskrit Literature ಪುಟ 15 ನೋಡಿ.



## ಅನಂತರಕಾಲೀನ ಸಾಹಿತ್ಯದ ಮೇಲೆ ಮಹಾಭಾರತದ ಪ್ರಭಾವ

ಮೇಲೆ ವಿವರಿಸಿರುವಂತೆ ಮಹಾಭಾರತದಲ್ಲಿ ಅಡಕವಾಗದ ವಿಷಯವಿಲ್ಲ. ಅದರಲ್ಲೇ ಹೇಳಿರುವಂತೆ ಅದು [27]ಧರ್ಮಶಾಸ್ತ್ರ, [27]ಅರ್ಥಶಾಸ್ತ್ರ, [27]ಮೋಕ್ಷಶಾಸ್ತ್ರವೂ ಕೂಡ. ಮನುಷ್ಯನಾದವನು ತಿಳಿದುಕೊಳ್ಳಲೇಬೇಕಾದ ಹಲವಾರು ವಿಷಯಗಳ ನಿರೂಪಣೆ, ನಾವು ಆಶಿಸಬಹುದಾದ ಸಕಲ ಪುರುಷಾರ್ಥಗಳನ್ನೂ ದೊರಕಿಸಬಲ್ಲ ಸಾಧನಗಳ ವಿವರಣೆ, ನೀತಿ-ಮತ-ಬೋಧಕ ಪ್ರಕರಣಗಳು, ಆಧ್ಯಾತ್ಮಿಕ ತತ್ತ್ವಪ್ರತಿಪಾದಕ ಪ್ರಸಂಗಗಳು, ವೀರಪುರುಷರ ಉಪಾಖ್ಯಾನಗಳು, ವಿವಿಧ ಸನ್ನಿವೇಶಗಳಲ್ಲಿ ನಾನಾ ಅಂತಸ್ತಿನ ಜನರ ನಡವಳಿಕೆಗಳು— ಮುಂತಾದ[28] ಬಹುಮುಖವಾದ ವಿಚಾರಗಳನ್ನು ಕತೆಯರೂಪನಲ್ಲಿ, ಎಲ್ಲರಿಗೂ ತಿಳಿಯುವ ರೀತಿಯಲ್ಲಿ, ಮಹಾಭಾರತವು ತಿಳಿಸುವುದರಿಂದ ಅದನ್ನು ಒಂದು [29]ವಿಶ್ವಕೋಶವೆಂದೇ ಸಾಮಾನ್ಯವಾಗಿ ಭಾವಿಸಲಾಗುತ್ತಿದೆ. ಮಹಾಭಾರತಕ್ಕೇ ಅನ್ವಯಿಸುವ

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ತತ್ ಕ್ವಚಿತ್ ॥ ಆದಿಪರ್ವ 62-26

ಎಂಬ ಮಾತಿನಲ್ಲಿ ಅತ್ಯುಕ್ತಿಯಿಲ್ಲ. ಇಂತಹ ನಿಧಿಸ್ವರೂಪವಾದ ಮಹಾಭಾರತವು ಮುಂದೆ ನಿರಂತರವಾಗಿ [30]ಲೇಖಕರಿಗೆ ನಾನಾ ಬಗೆಯಲ್ಲಿ ಸ್ಫೂರ್ತಿ ನೀಡಿ, ಬರೆಯಲು ವಸ್ತುವನ್ನೂ ಒದಗಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಮಹಾಭಾರತದಲ್ಲಿ ಅತ್ಯಂತ ಜನಪ್ರಿಯವಾದ ಉಪಾಖ್ಯಾನ ಸಾವಿತ್ರ್ಯುಪಾಖ್ಯಾನವಾದರೆ, ಅನೇಕರೀತಿಯ ಕಾವ್ಯರಚನೆಗೆ ಆಧಾರವಾಗಿರುವುದು

---

27 ಧರ್ಮಶಾಸ್ತ್ರಮಿದಂ ಪುಣ್ಯಂ ಅರ್ಥಶಾಸ್ತ್ರಮಿದಂ ಪರಂ ।
ಮೋಕ್ಷಶಾಸ್ತ್ರಮಿದಂ ಪ್ರೋಕ್ತಂ ವ್ಯಾಸೇನಾಮಿತಬುದ್ಧಿನಾ ॥ — ಆದಿ 62–25

28 ಮಹಾಭಾರತ ಆದಿಪರ್ವ ಅಧ್ಯಾಯ ೧ ಶ್ಲೋಕ 86-95 ನೋಡಿ.

29 (a) ಇತಿಹಾಸೋತ್ತಮಾದಸ್ಮಾಜ್ಜಾಯಂತೇ ಕವಿಬುದ್ಧಯಃ ।
ಪಂಚಭ್ಯ ಇವ ಭೂತೇಭ್ಯೋ ಲೋಕಸಂವಿಧಯಸ್ತ್ರಯಃ ॥
(b) ಇದಂ ಕವಿವರೈಃ ಸರ್ವೈಃ ಆಖ್ಯಾನಮುಪಜೀವ್ಯತೇ ।
ಉದಯಪ್ರೇಪ್ಸುಭಿರ್ಭೃತ್ಯೈಃ ಅಭಿಜಾತ ಇವೇಶ್ವರಃ ॥

30 ಸರ್ವೇಷಾಂ ಕವಿಮುಖ್ಯಾನಾಂ ಉಪಜೀವ್ಯೋ ಭವಿಷ್ಯತಿ ।
ಪರ್ಜನ್ಯ ಇವ ಭೂತಾನಾಂ ಅಕ್ಷಯೋ ಭಾರತದ್ರುಮಃ ॥ —ಆದಿ 1-108

ನಳೋಪಾಖ್ಯಾನ. ಈ ನಳದಮಯಂತಿಯ ಕಥೆಯ ಆಧಾರದಮೇಲೆ ರಚಿತವಾಗಿರುವ ಶ್ರೀಹರ್ಷಕೃತ ನೈಷಧೀಯಚರಿತ (ಕ್ರಿ.ಶ. 1150), ಕೃಷ್ಣಾನಂದಕೃತ ಸಹೃದಯಾನಂದ (ಕ್ರಿ.ಶ. 1200), ವಾಮನಭಟ್ಟ ಬಾಣಕೃತ ನಳಾಭ್ಯುದಯ (ಕ್ರಿ.ಶ. 1400), ವಾಸುದೇವಕೃತ ನಳೋದಯ (ಕ್ರಿ.ಶ. 1450) ಎಂಬ ಪದ್ಯಕಾವ್ಯಗಳೂ, ತ್ರಿವಿಕ್ರಮಭಟ್ಟಕೃತ ನಳಚಂಪೂ (ಕ್ರಿ.ಶ. 900) ಎಂಬ ಚಂಪೂಕಾವ್ಯವೂ, ಕ್ಷೇಮೀಶ್ವರಕೃತ ನೈಷಧಾನಂದ (ಕ್ರಿ.ಶ. 900), ರಾಮಚಂದ್ರಕೃತ ನಳವಿಲಾಸ (ಕ್ರಿ.ಶ. 1150) ಮತ್ತು ನೀಲಕಂಠ ದೀಕ್ಷಿತಕೃತ ನಳಚರಿತ (ಕ್ರಿ.ಶ. 1650) ಎಂಬ ನಾಟಕಗಳೂ ತುಂಬ ಪ್ರಸಿದ್ಧವಾಗಿವೆ. ಕಾಳಿದಾಸನ ಶಾಕುಂತಲ ನಾಟಕಕ್ಕೆ ಮಹಾಭಾರತದ ಶಕುಂತಲೋಪಾಖ್ಯಾನವೇ ಮೂಲ. ಮಹಾಭಾರತದ ಒಟ್ಟು ಕಥೆಯ ಮುಖ್ಯವಾದ ಪ್ರಸಂಗಗಳೆಲ್ಲವನ್ನೂ ಭಾಸ ತನ್ನದೇ ಆದ ರೀತಿಯಲ್ಲಿ ನಾಟಕರೂಪವಾಗಿ ಪರಿವರ್ತಿಸಿದ್ದಾನೆ. ಆ ಪೈಕಿ ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ, ಊರುಭಂಗ ಈ ಐದು ಏಕಾಂಕಗಳು ಈಗ ಉಪಲಬ್ಧವಾಗಿವೆ. ಅವನ ಪಂಚರಾತ್ರ ನಾಟಕಕ್ಕೂ ಮಹಾಭಾರತವೇ ಮೂಲ. ಭಟ್ಟನಾರಾಯಣನ (ಕ್ರಿ.ಶ. 650) ವೇಣೀಸಂಹಾರ, ಕುಲಶೇಖರವರ್ಮನ (ಕ್ರಿ.ಶ. 750) ಸುಭದ್ರಾಧನಂಜಯ, ರಾಜಶೇಖರನ (ಕ್ರಿ.ಶ. 900) ಬಾಲಭಾರತ, ಇವೂ ಮಹಾಭಾರತದ ಕಥೆಯ ಮೇಲಣ ನಾಟಕಗಳೇ. ಭಾರವಿಯ (ಕ್ರಿ.ಶ. 580) ಕಿರಾತಾರ್ಜುನೀಯ, ಮಾಘನ (ಕ್ರಿ.ಶ. 700) ಶಿಶುಪಾಲವಧ, ಅಮರಚಂದ್ರನ (ಕ್ರಿ.ಶ. 1250) ಬಾಲಭಾರತಗಳಂತು ಸುಪ್ರಸಿದ್ಧ ಮಹಾಕಾವ್ಯಗಳು. ಅನಂತಭಟ್ಟನ (ಕ್ರಿ.ಶ. 1550) ಭಾರತಚಂಪೂ ಮತ್ತು ಕ್ಷೇಮೇಂದ್ರನ (ಕ್ರಿ.ಶ. 1050) ಭಾರತಮಂಜರಿ ಇವೆರಡೂ ಸಮಗ್ರ ಮಹಾಭಾರತದ ಸಂಗ್ರಹಗಳು.

ಮಹಾಭಾರತದ ಪ್ರಭಾವ ಕಾವ್ಯರಚನೆಯಲ್ಲಿ ಮಾತ್ರ ಸೀಮಿತವಾಗಲಿಲ್ಲ. ಧರ್ಮಶಾಸ್ತ್ರಕಾರರೂ ಅಧ್ಯಾತ್ಮತತ್ತ್ವ ಪ್ರತಿಪಾದಕರೂ ಮಹಾಭಾರತವನ್ನು ಪ್ರಮಾಣಗ್ರಂಥವಾಗಿ ಪರಿಗಣಿಸಿ, ಕಾಲಕ್ರಮದಲ್ಲಿ 'ಭಾರತಃ ಪಂಚಮೋ ವೇದಃ' ಎಂಬ ಭಾವನೆ ಎಲ್ಲರಲ್ಲೂ ರೂಢಮೂಲವಾಗುವಂತೆ ಮಾಡಿದರು; ತಮ್ಮ ಗ್ರಂಥಗಳಲ್ಲೂ, ಭಾಷ್ಯಾದಿಗಳಲ್ಲೂ ಮಹಾಭಾರತದ ವಾಕ್ಯಗಳನ್ನು ಪ್ರಮಾಣವಾಗಿ ಉದಾಹರಿಸಲಾರಂಭಿಸಿದರು.



ಭಾರತದ ಪ್ರಾಂತೀಯ ಭಾಷೆಗಳ ಮೇಲೂ ಮಹಾಭಾರತದ ಪ್ರಭಾವ ಅಪರಿಮಿತ. ಮಹಾಭಾರತದ ಅನುವಾದ ಪ್ರತಿಯೊಂದು ಭಾರತೀಯ ಭಾಷೆಯಲ್ಲೂ ಅನೇಕರಿಂದ ಆಗಿದೆ. ಮಹಾಭಾರತದ ಕಥೆಯಮೇಲೆ ಕಾವ್ಯನಾಟಕಾದಿಗಳ ರಚನೆ ಅಸಂಖ್ಯಾತವಾಗಿ ಬೆಳೆದಿದೆ. ಭಾರತವಾಚನ ಆದಿಕಾಲದಿಂದ ಈಗಿನವರೆಗೂ ನಮ್ಮ ಇಂಡಿಯಾ ದೇಶದ ಎಲ್ಲ ನಗರ-ಗ್ರಾಮಗಳಲ್ಲೂ ಅವಿಚ್ಛಿನ್ನವಾಗಿ ನಡೆಯುತ್ತಲೇ ಬಂದಿದೆ. ನಮ್ಮ ನಾಡಿನ ಭಿನ್ನಭಿನ್ನ ಭಾಷೆಗಳನ್ನಾಡುವ ಎಲ್ಲ ಜನರೂ ಒಂದೇ ರಾಷ್ಟ್ರದ ಪ್ರಜೆಗಳೆಂಬ ಭಾವೈಕ್ಯಸಾಧನೆಯ ಮಾರ್ಗದಲ್ಲಿ ಮೊದಲ ಹೆಜ್ಜೆಯಿಟ್ಟ ಕೀರ್ತಿ ಮಹಾಭಾರತಕ್ಕೇ ಸಲ್ಲತಕ್ಕದ್ದು.

ಮಹಾಭಾರತವು ಈ ಪ್ರಪಂಚದ ಅನೇಕ ಭಾಷೆಗಳಿಗೆ ಪರಿವರ್ತಿತವಾಗಿ ಅನ್ಯಸಾಹಿತ್ಯಗಳಮೇಲೂ ಪ್ರಭಾವ ಬೀರಿದೆಯೆಂದು ಧಾರಾಳವಾಗಿ ಹೇಳಬಹುದು. ಭಾರತೀಯ ಸಂಸ್ಕೃತಿ ಮತ್ತು ಪ್ರಾಚೀನ ಇತಿಹಾಸಗಳನ್ನು ಪ್ರತಿಬಿಂಬಿಸುವ ಸರ್ವಜನಾದರಣೀಯವಾದ ಇಂತಹ ಮಹಾಭಾರತವನ್ನು ರಚಿಸಿದ ವ್ಯಾಸಮಹರ್ಷಿಗಳು ನಮ್ಮ ರಾಷ್ಟ್ರಕವಿಗಳ ಮುನ್ಸಾಲಿನಲ್ಲಿ ಪರಿಗಣಿತರಾಗಿರುವುದರಲ್ಲಿ ಅತಿಶಯವೇನೂ ಇಲ್ಲ.

## ಹರಿವಂಶ

ಹರಿವಂಶ ಮಹಾಭಾರತದ ಖಿಲ. ಅದರಲ್ಲಿ ಹರಿವಂಶಪರ್ವ, ವಿಷ್ಣುಪರ್ವ, ಭವಿಷ್ಯಪರ್ವ ಎಂಬ ಮೂರು ಪರ್ವಗಳಿವೆ; ಒಟ್ಟು 16000 ಕ್ಕಿಂತ ಹೆಚ್ಚು ಶ್ಲೋಕಗಳಿವೆ. ಮೊದಲನೆಯ ಹರಿವಂಶಪರ್ವದಲ್ಲಿ ಪ್ರಪಂಚದ ಸೃಷ್ಟಿ, ಸೂರ್ಯಚಂದ್ರ ವಂಶಗಳು, ಯದುವಂಶ ಮತ್ತು ಕೃಷ್ಣಾವತಾರದ ವಿವರಗಳಿವೆ. ಎರಡನೆಯ ವಿಷ್ಣುಪರ್ವದಲ್ಲಿ ಕೃಷ್ಣನ ಬಾಲಲೀಲೆಗಳು, ಕೃಷ್ಣನು ವಿಷ್ಣುವಿನ ಅವತಾರವೇ ಎಂದು ನಿರೂಪಿಸುವ ಅವನ ಇತರ ಸಾಹಸಕೃತ್ಯ ಮತ್ತು ಪ್ರಸಂಗಗಳು ವರ್ಣಿತವಾಗಿವೆ. ಮೂರನೆಯ ಭವಿಷ್ಯಪರ್ವದ ಆದಿಯಲ್ಲಿ ಭವಿಷ್ಯದ್ಯುಗಗಳಲ್ಲಿ ಸಂಭವಿಸಬಹುದಾದ ಕೆಲವು ಅಂಶಗಳ ಉಲ್ಲೇಖವೂ ವಾಮನ-ನರಸಿಂಹಾವತಾರಗಳ ಕತೆಯೂ ಶಿವ-ವಿಷ್ಣುಗಳ ಪರಸ್ಪರ ಸ್ತೋತ್ರಗಳೂ ಸೃಷ್ಟಿ ವಿಚಾರವೂ ಮಹಾಭಾರತ ಹರಿವಂಶಗಳ ಪಠಣದ ಫಲಶ್ರುತಿಗಳೂ ಬರುತ್ತವೆ.

ಹರಿವಂಶದಲ್ಲಿ ಉಪಾಖ್ಯಾನಗಳೇ ಹೆಚ್ಚು.[31] ಗಂಗಾವತರಣ, ಋಷ್ಯಶೃಂಗ, ಪರಶುರಾಮ, ಚ್ಯವನ, ಶಿಬಿ, ರಾಮ, ಸಾವಿತ್ರಿ, ನಳ, ನಹುಷ, ಯಯಾತಿ, ಧ್ರುವ, ವೇನ, ವಿಶ್ವಾಮಿತ್ರ, ಮೊದಲಾದ ಉಪಾಖ್ಯಾನಗಳು ಹರಿವಂಶದಲ್ಲಿ ಹೃದಯಂಗಮವಾಗಿ ವಿವರಿಸಲ್ಪಟ್ಟಿವೆ. ಈ ಉಪಾಖ್ಯಾನ-ಬಾಹುಳ್ಯದಿಂದಲೂ ಕೃಷ್ಣಾವತಾರದ ವಿವರಗಳೆಲ್ಲ [32]ಮೊಟ್ಟಮೊದಲಬಾರಿಗೆ ಬರುವುದು ಹರಿವಂಶದಲ್ಲೇ ಆದುದರಿಂದಲೂ ಹರಿವಂಶ ತುಂಬ ಪ್ರಸಿದ್ಧಿಗೆ ಬಂತೆಂದು ಹೇಳಬಹುದು.

ಈ ಹರಿವಂಶವನ್ನೂ ವ್ಯಾಸರೇ ರಚಿಸಿದುದಾಗಿಯೂ ಇದರ ಮೂರು ಪರ್ವಗಳೂ ಸೇರಿ ವ್ಯಾಸರ ಮಹಾಭಾರತದ ೧೦೦ ಪರ್ವಗಳು ಪೂರ್ಣವಾದುವೆಂದೂ ಮಹಾಭಾರತದಲ್ಲೇ ಹೇಳಿದೆ—

ಹರಿವಂಶಸ್ತತಃ ಪರ್ವ ಪುರಾಣಂ ಖಿಲಸಂಜ್ಞಿತಂ ।
ವಿಷ್ಣುಪರ್ವ ಶಿಶೋಶ್ಚರ್ಯಾ ವಿಷ್ಣೋಃ ಕಂಸವಧಸ್ತಥಾ ॥
ಭವಿಷ್ಯಂ ಪರ್ವಚಾಪ್ಯುಕ್ತಂ ಖಿಲೇಷ್ವೇವಾದ್ಭುತಂ ಮಹತ್ ।
ಏತತ್ಪರ್ವಶತಂ ಪೂರ್ಣಂ ವ್ಯಾಸೇನೋಕ್ತಂ ಮಹಾತ್ಮನಾ ॥ ಆದಿ ೨–೮೩, ೮೪

ಜನಮೇಜಯನ ಸರ್ಪಯಾಗದಲ್ಲಿ ಮಹಾಭಾರತದ ವಾಚನವಾದ ಮೇಲೆ ವೈಶಂಪಾಯನರೇ ಈ ಹರಿವಂಶವನ್ನೂ ಓದಿ ಹೇಳಿದಂತೆ ಉಲ್ಲೇಖವಿದೆ.

## ಭಗವದ್ಗೀತೆ

ಭಗವದ್ಗೀತೆ ಮಹಾಭಾರತದಲ್ಲಿ ಭೀಷ್ಮಪರ್ವದ ಒಂದು ಭಾಗ. ಅದರಲ್ಲಿ ೧೮ ಅಧ್ಯಾಯಗಳೂ ೭೦೦ ಶ್ಲೋಕಗಳೂ ಇವೆ. ಕೃಷ್ಣಾರ್ಜುನರ ಸಂವಾದ ರೂಪದಲ್ಲಿರುವ ಭಗವದ್ಗೀತೆಯನ್ನು ಉಪನಿಷತ್ತುಗಳಲ್ಲಿ ಒಂದೆಂದೇ ಭಾವಿಸಲಾಗಿದೆ. ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಶ್ರೀಕೃಷ್ಣನು ಸಂಗ್ರಹವಾಗಿ ಉಪದೇಶಿಸಿದ ತತ್ತ್ವಗಳನ್ನು ವ್ಯಾಸರು ಈ ಗೀತೆಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾರೆಂದು ಕೆಲ ಆಧುನಿಕರು ಹೇಳುತ್ತಾರಾದರೂ, ಶ್ರೀಕೃಷ್ಣನ ಮಾತುಗಳನ್ನೇ ಯಥಾವತ್ತಾಗಿ ವ್ಯಾಸರು ಇಲ್ಲಿ ಬರೆದಿರುವುದರಿಂದ ಈ

31 ಹರಿವಂಶದ $\frac{4}{5}$ ಭಾಗ ಉಪಾಖ್ಯಾನ; $\frac{1}{5}$ ಭಾಗ ಮಾತ್ರ ಪ್ರತಿಪಾದ್ಯವಾದ ವಿಷಯ.

32 ಭಾಗವತದಲ್ಲೂ ಕೃಷ್ಣಾವತಾರದ ವಿವರಗಳಿದ್ದರೂ, ಅದು ಇತ್ತೀಚೆಗೆ ರಚಿತವಾದ ಪುರಾಣವೆಂದು ಆಧುನಿಕ ವಿಮರ್ಶಕರ ಅಭಿಪ್ರಾಯ.



ಗೀತಾಭಾಗ ಶ್ರೀಕೃಷ್ಣರಚಿತವೆಂಬುದೇ ಸಾಂಪ್ರದಾಯಿಕವಾದ ಮತ್ತು ಸಾಮಾನ್ಯವಾಗಿ ಎಲ್ಲ ಭಾರತೀಯರ ಮತ. ಆದ್ದರಿಂದಲೇ ಇದಕ್ಕೆ ಭಗವದ್ಗೀತೆ ಎಂಬ ಹೆಸರೇ ಮೊದಲಿನಿಂದ ಬಂದಿದೆ.

ಯುದ್ಧದಲ್ಲಿ ಸ್ವಜನರನ್ನೂ ಹಿರಿಯರನ್ನೂ ವಧಿಸಲು ಅರ್ಜುನ ಹಿಂಜರಿದಾಗ ಶ್ರೀಕೃಷ್ಣನು ಅವನಿಗೆ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳನ್ನು ಆರಾರು ಅಧ್ಯಾಯಗಳಲ್ಲಿ ಉಪದೇಶಿಸಿ, ಕ್ಷತ್ರಿಯನಾದ ಅವನಿಗೆ ಸ್ವಧರ್ಮವಾದ ಯುದ್ಧದಲ್ಲಿ ಆಸಕ್ತಿಯುಂಟಾಗುವ ಹಾಗೆ ಮಾಡುತ್ತಾನೆ. ಈ ಮೂರು ಯೋಗಗಳ ಪ್ರತಿಪಾದನೆಯ ಮೂಲಕ ಸರ್ವರಿಗೂ ಸರ್ವಥಾ 'ಸ್ವಧರ್ಮಾಚರಣೆಯೇ ಶ್ರೇಯಸ್ಕರ'[33] ಎಂಬುದನ್ನು ತೋರಿಸುವುದೇ ಭಗವದ್ಗೀತೆಯ ಉದ್ದೇಶ. ಆಧ್ಯಾತ್ಮಿಕ ತತ್ತ್ವನಿರೂಪಣೆಯ ಹಿನ್ನೆಲೆಯಲ್ಲಿ ಈ ಉದ್ದೇಶ ಸಾಧಿತವಾಗಿರುವುದರಿಂದ ಹಿಂದೂ ದಾರ್ಶನಿಕರಿಗೆ ಇದು ಅತಿ ಅಮೂಲ್ಯಗ್ರಂಥವಾಗಿದೆ. ಶಂಕರ, ರಾಮಾನುಜ, ಮಧ್ವ ಮುಂತಾದ ಆಚಾರ್ಯರೆಲ್ಲ ಈ ಗೀತೆಗೆ ತಮ್ಮ ಮತಸಂಪ್ರದಾಯದಂತೆ ಭಾಷ್ಯಗಳನ್ನು ಬರೆದಿದ್ದಾರೆ; ತಮ್ಮ ತಮ್ಮ ಮತದ ಪ್ರತಿಪಾದನೆಗೆ ಗೀತೆಯನ್ನು ಪ್ರಮಾಣಗ್ರಂಥವನ್ನಾಗಿ ಅಂಗೀಕರಿಸಿದ್ದಾರೆ. ಗೀತೆಯ ಭಾಷೆ ಸುಂದರ, ಸುಲಭ; ಶೈಲಿ ಲಲಿತ.

೭೦೦ ಶ್ಲೋಕಗಳ ಇಷ್ಟು ವಿಸ್ತಾರವೂ, ಅಧ್ಯಾತ್ಮ ತತ್ತ್ವನಿರೂಪಣೆಯಂತಹ ಗಹನ ವಿಷಯ ಪ್ರತಿಪಾದಕವೂ ಆದ ಗೀತೆಯನ್ನು ಯುದ್ಧಭೂಮಿಯಲ್ಲಿ, ಅದೂ ಎದುರಾಳಿಗಳು ಯುದ್ಧವಾರಂಭಿಸಿಬಿಟ್ಟ ಮೇಲೆ, ಶ್ರೀಕೃಷ್ಣ ಅರ್ಜುನನಿಗೆ ಉಪದೇಶಿಸಿದನೆಂಬುದು ನಂಬಲಸಾಧ್ಯವಾದ ವಿಚಾರವೆಂದು ಕೆಲ ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಆ ಸನ್ನಿವೇಶದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಸಂಗ್ರಹವಾಗಿ ತತ್ತ್ವೋಪದೇಶಮಾಡಿರಬಹುದೆಂದೂ ಅದನ್ನು[34] ವ್ಯಾಸರೋ, ಅಥವಾ ಬೇರೆ ಯಾರೋ, ವಿಸ್ತಾರವಾಗಿ ಈ ಗೀತೆಯ ೭೦೦ ಶ್ಲೋಕಗಳಲ್ಲಿ ನಿರೂಪಿಸಿರಬೇಕೆಂದೂ ಅವರು ಹೇಳುತ್ತಾರೆ. ಏಳನೆಯ ಶತ

33 ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ — ಗೀತೆ ೩–೩೫

34 ಭಗವದ್ಗೀತೆಯು ಕ್ರಿಸ್ತಪೂರ್ವ ಮೂರು ಅಥವಾ ನಾಲ್ಕನೆಯ ಶತಮಾನದಲ್ಲಿ ಈಗಿನ ರೂಪದಲ್ಲಿ ರಚಿತವಾಗಿರಬೇಕೆಂದೂ ಕ್ರಿಸ್ತಶಕ ಎರಡನೆಯ ಶತಮಾನದ ವೇಳೆಗೆ ಮಹಾಭಾರತದೊಳಕ್ಕೆ ಸೇರಿಸಲ್ಪಟ್ಟಿರಬೇಕೆಂದೂ ಆಧುನಿಕರು ಪ್ರತಿಪಾದಿಸುತ್ತಾರೆ.

ಮಾನದ ಬಾಣ ಮಹಾಕವಿಯೂ ಎಂಟನೆಯ ಶತಮಾನದ ಶಂಕರಾಚಾರ್ಯರೂ ಭಗವದ್ಗೀತೆಯನ್ನು ಸಾಕ್ಷಾತ್ ಕೃಷ್ಣರಚಿತವೆಂದೇ ವಾಚ್ಯವಾಗಿ ಹೇಳಿದ್ದಾರೆ.

ಭಗವದ್ಗೀತೆಯು ಪ್ರಪಂಚದ ಎಲ್ಲ ಭಾಷೆಗಳಿಗೂ ಪರಿವರ್ತಿತವಾಗಿದೆ. ಅಧ್ಯಾತ್ಮ ಗ್ರಂಥಗಳಲ್ಲಿ ಅದರದು ಬಹಳ ಉನ್ನತಸ್ಥಾನ. ಹಿಂದುಗಳಿಗೆ ಅದು ಅತ್ಯಂತ ಪವಿತ್ರವಾದ ಗ್ರಂಥ.[35]

## ೨. ಪುರಾಣಗಳು

ಲೋಕಸೃಷ್ಟಿ ಮತ್ತು ಪ್ರಾಚೀನ ಸಂಪ್ರದಾಯಗಳನ್ನು ತಿಳಿಸುವ ಪ್ರಕರಣಗಳನ್ನು 'ಪುರಾಣ' ಎಂಬ ಹೆಸರಿನಿಂದ ಬ್ರಾಹ್ಮಣಗಳು ವ್ಯವಹರಿಸುತ್ತವೆ. ಋಷಿಗಳ ವಂಶಪರಂಪರೆ ಮತ್ತು ದೇವತೆಗಳಿಗೆ ಸಂಬಂಧಿಸಿದ ಪ್ರಾಚೀನ ಕಥೆಗಳು ಎಂಬ ಅರ್ಥದಲ್ಲಿ 'ಪುರಾಣ' ಶಬ್ದವನ್ನು ಮಹಾಭಾರತ ಬಳಸುತ್ತದೆ. ಉಪನಿಷತ್ತುಗಳು ಪುರಾಣ ಇತಿಹಾಸಗಳಲ್ಲಿ ಯಾವ ವ್ಯತ್ಯಾಸವನ್ನೂ ಮಾಡದೆ ಅವನ್ನು ಐದನೆಯ ವೇದ ಎಂದು ನಿರ್ದೇಶಿಸುತ್ತವೆ. ಪುರಾಣಗಳು ವೇದೋಪಬೃಂಹಣಕ್ಕಾಗಿ ಎಂದು ಸ್ಮೃತಿಗಳು ಸಾರುತ್ತವೆ. ಇದನ್ನೆಲ್ಲಾ ಗಮನಿಸಿದರೆ ಪುರಾಣಗಳು ಬಹಳ ಪ್ರಾಚೀನಕಾಲದಿಂದಲೂ ಇದ್ದುವೆಂದು ಧಾರಾಳವಾಗಿ ಹೇಳಬಹುದು. ಪುರಾ ನವಂ ಪುರಾಣಂ (ಹಿಂದೆ ಹೊಸದಾಗಿದ್ದುದು) ಎಂಬುದು ಪುರಾಣ ಶಬ್ದದ ಅರ್ಥವಾದರೂ, ಅದರಲ್ಲಿನ ಬಹುಭಾಗ ಊಹಾಪೋಹದಂತೆ ಕಾಣುವುದರಿಂದ ಆಧುನಿಕರು ಪುರಾಣಗಳನ್ನು ಪ್ರಾಮಾಣಿಕವೆಂದು ಪರಿಗಣಿಸುವುದಿಲ್ಲ. ಆದರೂ ಪುರಾಣಗಳಲ್ಲಿರುವ ವಿಚಾರಗಳು ಬಹುಮುಖವಾಗಿದ್ದು ಓದುಗರ ಜ್ಞಾನಾಭಿವೃದ್ಧಿಗೆ ತುಂಬ ಸಹಕಾರಿಗಳೆಂಬುದರಲ್ಲಿ ಸಂಶಯವಿಲ್ಲ. ಲೋಕಸೃಷ್ಟಿ, ಭೌಗೋಲಿಕ ವಿಷಯಗಳು, ಯುಗವಿಭಾಗಗಳು, ಪೂಜಾವಿಧಾನಗಳು, ರಾಜವಂಶಗಳು, ದೇವಕ್ಷೇತ್ರ ಮಹಾತ್ಮ್ಯಗಳು

35 ಗೀತಾಯಾಃ ಪುಸ್ತಕಂ ಯತ್ರ ಯತ್ರ ಪಾಠಃ ಪ್ರವರ್ತತೇ ।
ತತ್ರ ಸರ್ವಾಣಿ ತೀರ್ಥಾನಿ ಪ್ರಯಾಗಾದೀನಿ ತತ್ರ ವೈ ॥
ಗೀತಾರ್ಥಶ್ರವಣಾಸಕ್ತೋ ಮಹಾಪಾಪಯುತೋಽಪಿ ವಾ ।
ವೈಕುಂಠಂ ಸಮವಾಪ್ನೋತಿ ವಿಷ್ಣುನಾ ಸಹ ಮೋದತೇ ॥
ಭಾರತಾಮೃತ-ಸರ್ವಸ್ವಂ ವಿಷ್ಣೋರ್ವಕ್ತ್ರಾದ್ವಿನಿಃಸೃತಂ ।
ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥



ಮುಂತಾದ ಅನೇಕ ವಿಚಾರಗಳಿಂದ ತುಂಬಿರುವ ಪುರಾಣಗಳಲ್ಲಿ ನೀತಿಬೋಧಕ ಪ್ರಸಂಗಗಳೂ ಮತೀಯ ಸಿದ್ಧಾಂತ ಪೋಷಕ ಪ್ರಕರಣಗಳೂ ಹೇರಳವಾಗಿವೆ. ಈ ಪೈಕಿ ಎಷ್ಟೋ ಭಾಗಗಳು ಈಚಿನವು. ಪುರಾಣಗಳ ಮೂಲರೂಪವು ಪ್ರಾಯಃ ಕ್ರಿ ಪೂ. ಎಷ್ಟೋ ಶತಮಾನಗಳ ಹಿಂದೆ ಚಿಕ್ಕದಾಗಿದ್ದಿರಬೇಕು. ವಿಷ್ಣುಪುರಾಣದಲ್ಲಿ ಹೇಳಿರುವಂತೆ ಅದೇ ವ್ಯಾಸರು ಬರೆದ[36] 'ಪುರಾಣಸಂಹಿತೆ' ಯಾಗಿದ್ದು, ಅವರ ಶಿಷ್ಯರ ಕೈಯಲ್ಲಿ ೧೮ ಪುರಾಣಗಳ ರೂಪ ತಾಳಿದ್ದಿರಬಹುದು. ಮೊದಲು ಒಂದೇ ಪುರಾಣವಿತ್ತೆಂದು ಇತರ ಪುರಾಣಗಳೂ ಹೇಳುತ್ತವೆ. ಎಲ್ಲ ಪುರಾಣಗಳೂ ವ್ಯಾಸಕರ್ತೃಕ ಎಂಬ ಪ್ರಸಿದ್ಧಿಗೆ ಇದೇ ಕಾರಣವಿರಬೇಕು. ಅಲ್ಲದೆ ಇಂತಹ ಮೂಲಪುರಾಣ ಅಥವಾ ಪುರಾಣಸಂಹಿತೆ ಮಹಾಭಾರತಕ್ಕೂ[37] ಹಿಂದೆಯೇ ರಚಿತವಾಗಿದ್ದಿರಬೇಕು. ಕಾಲಕ್ರಮದಲ್ಲಿ ಬ್ರಹ್ಮ ವಿಷ್ಣು ಶಿವ ಎಂಬ ತ್ರಿಮೂರ್ತಿಗಳ ಭಾವನೆ ಜನರಲ್ಲಿ ಬೆಳೆದು, ಆ ದೇವತೆಗಳಲ್ಲಿ ಉಚ್ಚ ನೀಚಕಲ್ಪನೆಯಿಂದ ತಮ್ಮ ತಮ್ಮ ಸಿದ್ಧಾಂತವನ್ನು ಸ್ಥಾಪಿಸಲು ಹೊರಟ ಲೇಖಕರಿಂದ ಹೊಸ ಹೊಸ ಭಾಗಗಳು ಈ ಮೂಲ ಪುರಾಣಗಳಿಗೆ ಸೇರಿಸಲ್ಪಟ್ಟು ಅವು ಈಗಿನ ರೂಪಕ್ಕೆ ಬೆಳೆಯಲವಕಾಶವಾಯಿತೆಂದು ತೋರುತ್ತದೆ. ಇದರಿಂದ ಯಾವ ಪುರಾಣವನ್ನು ತೆಗೆದುಕೊಂಡು ಪರಿಶೀಲಿಸಿದರೂ ಮೊದಲಿನಿಂದ ಕೊನೆಯವರೆಗೆ ಅನುಪೂರ್ವಿಯಿಲ್ಲದೆ, ಅನೇಕ ಬಿಡಿಭಾಗಗಳನ್ನು ಒಟ್ಟುಗೂಡಿಸಿದ ತೇಪೆ ಕೆಲಸದಂತೆ ಕಾಣುತ್ತದೆ.

ಕೆಲವು ಪುರಾಣಗಳ ಈಗಿನ ಗಾತ್ರ ಕ್ರಿ. ಶ. ೧ ನೆಯ ಶತಮಾನದಿಂದ ಈಚೆಗೆ ಪ್ರಾಪ್ತವಾದುದೆಂದು ಹೇಳಬೇಕಾಗುತ್ತದೆ. ಏಕೆಂದರೆ, ಉದಾಹರಣೆಗೆ ವಿಷ್ಣುಪುರಾಣದಲ್ಲಿ ಮೌರ್ಯವಂಶದ, ವಾಯು ಮತ್ತು ಮತ್ಸ್ಯಪುರಾಣಗಳಲ್ಲಿ ಗುಪ್ತ ಮತ್ತು ಆಂಧ್ರ ವಂಶಗಳ ವಿವರಗಳು ಬರುತ್ತವೆ. ಇಂತಹ ವಿಚಾರಗಳನ್ನು ಪರಿಶೀಲಿಸಿದರೆ ಕೆಲವು ಪುರಾಣಗಳು ಗಾತ್ರದಲ್ಲಿ ಕ್ರಿ. ಶ. ೬ ನೆಯ ಶತಮಾನದವರೆಗೂ ಏಕಪ್ರಕಾರವಾಗಿ ಬೆಳೆಯುತ್ತಲೇ ಹೋಗಿವೆಯೆನ್ನಬೇಕಾ

36 ಆಖ್ಯಾನೈಶ್ಚಾಪ್ಯುಪಾಖ್ಯಾನೈಃ ಗಾಥಾಭಿಃ ಕಲ್ಪಶುದ್ಧಿಭಿಃ ।
ಪುರಾಣಸಂಹಿತಾಂ ಚಕ್ರೇ ಪುರಾಣಾರ್ಥವಿಶಾರದಃ ॥ — ವಿಷ್ಣು ಪು. ೩-೬-೧೫
37 ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ ।
ಭಾರತಾಖ್ಯಾನಮಖಿಲಂ ಚಕ್ರೇ ತದುಪಬೃಂಹಣಂ ॥ — ಮತ್ಸ್ಯ ಪು. ೫೩-೭೦

ಗುತ್ತದೆ. ಏಳನೆಯ ಶತಮಾನದ ಬಾಣಕವಿಯೂ ಎಂಟನೆಯ ಶತಮಾನದ ಕುಮಾರಿಲಭಟ್ಟನೂ, ಅದ್ವೈತಾಚಾರ್ಯರಾದ ಶಂಕರರೂ ಪುರಾಣಗಳನ್ನು ಪ್ರಮಾಣವಾಗಿ ಅಂಗೀಕರಿಸಿರುವುದರಿಂದ, ಅವರ ಕಾಲಕ್ಕೆ ಹಿಂದೆಯೇ ಅವು ಈಗಿನ ರೂಪ ತಾಳಿರಬೇಕೆಂಬುದರಲ್ಲಿ ಮಾತ್ರ ವಿವಾದಕ್ಕವಕಾಶವಿಲ್ಲ.

"ಪುರಾಣಗಳು ಹದಿನೆಂಟು. ಅವುಗಳ ಶ್ಲೋಕಸಂಖ್ಯೆ ಒಟ್ಟು ೪ ಲಕ್ಷ. ಅವುಗಳಲ್ಲದೆ ೧೮ ಉಪಪುರಾಣಗಳೂ ಇವೆ. ಎಲ್ಲ ಪುರಾಣಗಳೂ ವ್ಯಾಸರಿಂದಲೇ ರಚಿತ" ಎಂಬುದು ಸಾಂಪ್ರದಾಯಿಕರ ಮತ. ಎಲ್ಲ ಪುರಾಣಗಳೂ ಒಂದೇ ಮಾದರಿಯಲ್ಲಿ ರಚಿತವಾಗಿವೆ. ಮಹಾಭಾರತದಂತೆಯೇ ಪುರಾಣಗಳನ್ನೂ ನೈಮಿಶಾರಣ್ಯದಲ್ಲಿ ಋಷಿಗಳಿಗೆ ಸೂತಪುರಾಣಿಕನು ಶ್ರವಣಮಾಡಿಸುತ್ತಾನೆ. ಇಲ್ಲಿನ ಸೂತ ಲೋಮಹರ್ಷಣನ ಮಗ ಉಗ್ರಶ್ರವಸ್. ಇದೊಂದೇ ವ್ಯತ್ಯಾಸ.

ಅಮರಕೋಶದಲ್ಲಿ ಪುರಾಣದ ಲಕ್ಷಣಗಳನ್ನು ಹೀಗೆ ಹೇಳಿದೆ—

ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚಾಪಿ ಪುರಾಣಂ ಪಂಚಲಕ್ಷಣಂ ॥

ಇದರಂತೆ ಪುರಾಣವು ಸೃಷ್ಟಿ, ಪ್ರತಿಸೃಷ್ಟಿ, ವಂಶ, ಮನ್ವಂತರ, ವಂಶಾನುಚರಿತ —ಈ ಐದು ವಿಚಾರಗಳನ್ನೂ ಒಳಗೊಂಡಿರಬೇಕು. ಪುರಾಣಗಳು ಈಗಿರುವಂತೆ, ಈ ಐದು ವಿಚಾರಗಳ ಜತೆಗೆ ಇನ್ನೂ ಎಷ್ಟೋ ಹೆಚ್ಚು ವಿಭಿನ್ನ ವಿಚಾರಗಳಿಂದ ಕೂಡಿವೆ.

## ಪುರಾಣಗಳ ಪ್ರಯೋಜನ

ಮಹಾಭಾರತದಂತೆಯೇ ಪುರಾಣಗಳೂ ಅನುಷ್ಟುಪ್ ಶ್ಲೋಕದಲ್ಲಿಯೇ ಸುಲಭ ಶೈಲಿಯಲ್ಲಿ ರಚಿತವಾಗಿವೆ. ಇವುಗಳಲ್ಲಿ ಕಾವ್ಯಗುಣ ಅಷ್ಟಾಗಿಲ್ಲದಿದ್ದರೂ ನಮ್ಮ ಭಾರತೀಯ ಸಂಸ್ಕೃತಿಯ ಇತಿಹಾಸ ರಚನೆಗೆ ಇವೇ ಮೂಲಾಧಾರಗಳಾಗಿರುವುದರಿಂದ ಇವುಗಳ ಪ್ರಯೋಜನ ಅಪರಿಮಿತ. ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕವಾಗಿ ಭಾರತೀಯರ ಮನಃಪ್ರವೃತ್ತಿ ಹಿಂದಿನ ಕಾಲದಿಂದ ಇತ್ತೀಚಿನವರೆಗೆ ಹೇಗೆ ಬೆಳೆದುಬಂದಿತೆಂಬುದನ್ನು ಚಿತ್ರಿಸುವ ಆಧಾರಗ್ರಂಥಗಳು ಪುರಾಣಗಳು ಮಾತ್ರ ಎಂಬುದರಲ್ಲಿ ವಿವಾದವೇ ಇಲ್ಲ. ಕೆಲವು ಪುರಾಣಗಳಲ್ಲಿ ಕಾವ್ಯಸ್ವರೂಪದ ವಿಮರ್ಶೆ, ಶಿಲ್ಪ ಮುಂತಾದ ಅನೇಕ



ಕಲೆಗಳ ವಿವರಗಳೂ ಇವೆ. ಕೆಲವು ಪುರಾಣಗಳಲ್ಲಿನ ಉಪಾಖ್ಯಾನಗಳ ಆಧಾರದ ಮೇಲೆ ಉತ್ತಮವಾದ ಕಾವ್ಯನಾಟಕಗಳ ರಚನೆಯೂ ಹೇರಳವಾಗಿ ಆಗಿದೆ.

ದರ್ಶನ, ನೀತಿ ಮತ್ತು ಧರ್ಮಶಾಸ್ತ್ರಗ್ರಂಥಗಳ ಭಾಷ್ಯಕಾರರು ಪುರಾಣಗಳನ್ನು ಪ್ರಮಾಣವಾಗಿ ಪರಿಗಣಿಸಿ ತಮ್ಮ ಭಾಷ್ಯ ಮತ್ತು ವಾಖ್ಯಾನಗಳಲ್ಲಿ ಉದಾಹರಿಸಿದ್ದಾರೆ. ಇತಿಹಾಸಕಾರರಿಗಂತು ಚರಿತ್ರೆಯ ಯುಗಕ್ಕಿಂತ ಹಿಂದಿನ ಘಟನೆಗಳ ಮತ್ತು ಅವುಗಳ ಕಾಲದ ನಿರೂಪಣೆಗೆ ಪುರಾಣಗಳೇ ಆಧಾರ. ಧಾರ್ಮಿಕ ಪ್ರವೃತ್ತಿಯುಳ್ಳವರಿಗೆ ಪುರಾಣಗಳು ಪವಿತ್ರ ಗ್ರಂಥಗಳು; ಅವುಗಳ ಪಾರಾಯಣ ಧರ್ಮಸಾಧನ. ಆದರೆ ಎಲ್ಲ ಪುರಾಣಗಳೂ ಒಂದೇ ರೀತಿ ಪವಿತ್ರವೆಂಬ ಭಾವನೆ ಎಲ್ಲಾ ಮತಸಂಪ್ರದಾಯಸ್ಥರಿಗೂ ಇಲ್ಲವೆಂಬುದನ್ನು ನೆನಪಿನಲ್ಲಿಡಬೇಕು.

## ಪುರಾಣಗಳೂ ಅವುಗಳ ವಿಭಾಗಗಳೂ

ಹದಿನೆಂಟು ಪುರಾಣಗಳನ್ನೂ ಮೂರು ವಿಭಾಗಗಳಾಗಿ ವಿಂಗಡಿಸುವುದು ಬಳಕೆಯಲ್ಲಿದೆ—

ಅ) [38] ವೈಷ್ಣವ ಪುರಾಣಗಳು ಆರು – ೧. ವಿಷ್ಣುಪುರಾಣ ೨. ಭಾಗವತಪುರಾಣ ೩. ನಾರದೀಯಪುರಾಣ ೪. ಗರುಡಪುರಾಣ ೫. ಪಾದ್ಮಪುರಾಣ ೬. ವರಾಹಪುರಾಣ

ಆ) [38] ಬ್ರಾಹ್ಮಪುರಾಣಗಳು ಆರು — ೧. ಬ್ರಾಹ್ಮಪುರಾಣ ೨. ಬ್ರಹ್ಮಾಂಡಪುರಾಣ ೩. ಬ್ರಹ್ಮವೈವರ್ತಪುರಾಣ ೪. ಮಾರ್ಕಂಡೇಯಪುರಾಣ ೫. ಭವಿಷ್ಯಪುರಾಣ ೬. ವಾಮನಪುರಾಣ.

ಇ) [38] ಶೈವ ಪುರಾಣಗಳು ಆರು — ೧. ವಾಯುಪುರಾಣ ೨. ಲಿಂಗಪುರಾಣ ೩. ಸ್ಕಂದಪುರಾಣ ೪. ಅಗ್ನಿಪುರಾಣ ೫. ಮತ್ಸ್ಯಪುರಾಣ ೬. ಕೂರ್ಮಪುರಾಣ.

[38] ವೈಷ್ಣವ ಪುರಾಣಗಳನ್ನು ಸಾತ್ವಿಕ ಪುರಾಣಗಳೆಂದೂ ಬ್ರಾಹ್ಮಪುರಾಣಗಳನ್ನು ರಾಜಸಪುರಾಣಗಳೆಂದೂ ಶೈವಪುರಾಣಗಳನ್ನು ತಾಮಸಪುರಾಣಗಳೆಂದೂ ವ್ಯವಹರಿಸುವುದು ವಾಡಿಕೆ.

## ವೈಷ್ಣವ ಪುರಾಣಗಳು

**ವಿಷ್ಣುಪುರಾಣ**—ವಿಷ್ಣುಪುರಾಣಕ್ಕೆ ಪುರಾಣರತ್ನವೆಂಬ ಹೆಸರೂ ಇದೆ. ಪುರಾಣಲಕ್ಷಣದಲ್ಲಿ ಹೇಳಿರುವ ಐದು ವಿಚಾರಗಳೂ ಇದರಲ್ಲಿ ಬರುತ್ತವೆ. ವಿಷ್ಣುವಿನ ದಶಾವತಾರಗಳನ್ನು ಈ ಪುರಾಣದ ಆರು ಅಂಶ (ಖಂಡ) ಗಳಲ್ಲಿ ವಿವರಿಸಲಾಗಿದೆ. ಯಾವ ಒಂದು ಧರ್ಮಪಂಥದ ಆಚಾರ ಅನುಷ್ಠಾನಗಳನ್ನೂ ಇದು ವಿಶೇಷವಾಗಿ ಒತ್ತಿ ಹೇಳುವುದಿಲ್ಲವಾದ್ದರಿಂದ ಮಹಾಭಾರತದಂತೆಯೇ ಇದೂ ಸರ್ವಜನಾದರಣೀಯವಾಗಿದೆಯಲ್ಲದೆ ಪುರಾಣಗಳಲ್ಲಿ ಅತ್ಯಂತ ಪ್ರಾಚೀನವೆಂದೂ ಪರಿಗಣಿತವಾಗಿದೆ.

ಪರಾಶರರು ತಮ್ಮ ಶಿಷ್ಯ ಮೈತ್ರೇಯನಿಗೆ ಶ್ರವಣಮಾಡಿಸಿದಂತೆ ಈ ಪುರಾಣ ರಚಿತವಾಗಿದೆ. ಭಾಗವತವನ್ನು ಬಿಟ್ಟರೆ ಇದೇ ಅತ್ಯಂತ ಜನಪ್ರಿಯ ಪುರಾಣ. ಇದರಲ್ಲಿ ಮೌರ್ಯವಂಶದ ವಿವರಗಳಿರುವುದರಿಂದ ಕ್ರಿ. ಶ. ೧ ಅಥವಾ ೨ನೆಯ ಶತಮಾನದ ವೇಳೆಗೆ ಇದರ ಈಗಿನ ರೂಪ ಸಿದ್ಧವಾಗಿದ್ದಿರಬೇಕೆಂದು ನಂಬಲಾಗಿದೆ.

**ಭಾಗವತಪುರಾಣ**—[39]ಪುರಾಣಗಳಲ್ಲಿ ಭಾಗವತವೇ ಅತ್ಯಂತ ಜನಪ್ರಿಯವಾದುದು. ಜನರ ಧಾರ್ಮಿಕ ಭಾವನೆಯಮೇಲೆ ಈ ಪುರಾಣ ಪರಿಣಾಮಕಾರಿಯಾದ ಪ್ರಭಾವ ಬೀರಿದೆ. ಇದು ವಿಷ್ಣುಪುರಾಣಕ್ಕಿಂತ ಈಚಿನದು; ಪ್ರಾಯಃ ಅದರ ಆಧಾರದಮೇಲೆಯೇ ರಚಿತವಾದದ್ದು. ಭಾಗವತದಲ್ಲಿ ೧೮೦೦೦ ಶ್ಲೋಕಗಳಿದ್ದು ೧೨ ಸ್ಕಂಧಗಳಾಗಿ ವಿಭಾಗಿಸಲ್ಪಟ್ಟಿದೆ. ವಿಷ್ಣುವಿನ ಪ್ರಧಾನವಾದ ದಶಾವತಾರಗಳೂ, ಉಳಿದ ಅಂಶಾವತಾರಗಳೂ ಇದರಲ್ಲಿ ವಿಸ್ತಾರವಾಗಿ ನಿರೂಪಿತವಾಗಿವೆ. ಕೃಷ್ಣಾವತಾರವನ್ನು ವಿವರಿಸುವ ದಶಮಸ್ಕಂಧವು ಉಳಿದೆಲ್ಲ ಸ್ಕಂಧಗಳಿಗಿಂತ ಹೆಚ್ಚು ಜನಾದರಣೀಯವಾಗಿದೆ. ವೈಷ್ಣವರಲ್ಲಿ ಶ್ರೀಮದ್ಭಾಗವತವು ಪಾರಾಯಣ ಗ್ರಂಥವಾಗಿ ಪರಿಗಣಿತವಾಗಿದೆ.

---

೩೯. ಶೈವ ಸಂಪ್ರದಾಯರೀತ್ಯಾ ಈ ಭಾಗವತ ೧೮ ಪುರಾಣಗಳಲ್ಲಿ ಸೇರಿಲ್ಲ. ಅವರ ಸ್ಥಾನದಲ್ಲಿ ದೇವೀಭಾಗವತ ಸೇರಿಕೊಳ್ಳುತ್ತದೆ. ಆದರೆ (ವೈಷ್ಣವ) ಭಾಗವತವನ್ನು ಆಚಾರ್ಯರೆಲ್ಲ ಪ್ರಮಾಣಗ್ರಂಥವನ್ನಾಗಿ ಪರಿಗಣಿಸಿದ್ದಾರಲ್ಲದೆ, ಈ ಭಾಗವತಕ್ಕೆ ಅನೇಕರು ವ್ಯಾಖ್ಯಾನಗಳನ್ನೂ ಬರೆದಿದ್ದಾರೆ. ದೇಶೀಯ ಭಾಷೆಗಳಲ್ಲೆಲ್ಲ ಇದು ಪರಿವರ್ತಿತವಾಗಿ ಜನಸಾಮಾನ್ಯರಿಗೂ ಪ್ರಿಯವಾಗಿದೆ.



ಭಾಗವತಪುರಾಣವು ೧೩ನೆಯ ಶತಮಾನದ ಬೋಪದೇವನೆಂಬೊಬ್ಬ ವೈಯಾಕರಣಿಯಿಂದ ರಚಿತವಾಯಿತೆಂಬ ಸಿದ್ಧಾಂತವೊಂದು ಹೊರಟಿದ್ದು, ಈಗ ಅದು ಅಲ್ಲಗಳೆಯಲ್ಪಟ್ಟಿದೆ. ಬೋಪದೇವ ರಚಿಸಿರುವುದು ಹರಿಲೀಲಾ ಎಂಬ ಭಾಗವತ ಸಂಗ್ರಹ ಮಾತ್ರ. ೧೧ನೆಯ ಶತಮಾನದಲ್ಲಿ ಬಂಗಾಳದಲ್ಲಿದ್ದ ಬಲ್ಲಾಳಸೇನನಿಗೆ ಭಾಗವತಪುರಾಣ ಪರಿಚಿತವಾಗಿತ್ತೆಂಬುದಕ್ಕೆ ಸ್ಪಷ್ಟ ಆಧಾರಗಳಿವೆ.

ಕಾವ್ಯ ಗುಣಗಳ ದೃಷ್ಟಿಯಿಂದಲೂ ಭಾಗವತವೇ ಇತರ ಎಲ್ಲ ಪುರಾಣಗಳಿಗಿಂತ ಮೇಲೆಂಬುದರಲ್ಲಿ ಸಂಶಯವಿಲ್ಲ. ಕಪಿಲ ಮತ್ತು ಬುದ್ಧರನ್ನು ವಿಷ್ಣುವಿನ ಅವತಾರವೆಂದೇ ಈ ಪುರಾಣದಲ್ಲಿ ನಿರೂಪಿಸಲಾಗಿದೆಯೆಂಬುದೂ ಗಮನಾರ್ಹ. ಇಲ್ಲಿನ ಕೃಷ್ಣಾವತಾರದ ಕಥೆಯಲ್ಲಿ ರಾಧೆಯ ಪಾತ್ರವೇ ಇಲ್ಲ. ಈ ಪುರಾಣವನ್ನು ಪಾದ್ಮಪುರಾಣ ಕೊಂಡಾಡುತ್ತದೆ.

**ನಾರದೀಯಪುರಾಣ**—ನಾರದನು ಸನತ್ಕುಮಾರನಿಗೆ ಹೇಳಿದಂತೆ ಈ ಪುರಾಣ ರಚಿತವಾಗಿರುವುದರಿಂದ ಇದಕ್ಕೆ ನಾರದೀಯ ಪುರಾಣವೆಂಬ ಹೆಸರು ಬಂದಿದೆ. ಇದರಲ್ಲಿ ವಿಷ್ಣುಭಕ್ತಿಯನ್ನು ಅನೇಕ ಉಪಾಖ್ಯಾನಗಳೊಡನೆ ಕೊಂಡಾಡಲಾಗಿದೆ.

**ಗರುಡಪುರಾಣ**—ಈ ಪುರಾಣವನ್ನು ವಿಷ್ಣುವೇ ಗರುಡನಿಗೆ ಹೇಳಿದಂತಿದೆ. ಇದರಲ್ಲಿ ಖಗೋಳಶಾಸ್ತ್ರ, ವೈದ್ಯ ಮುಂತಾದ ಅನೇಕ ಶಾಸ್ತ್ರಗಳ ವಿಚಾರಗಳೂ ಬರುತ್ತವೆ. ವೈಷ್ಣವ ಪಂಥದವರು ಆಚರಿಸಬೇಕಾದ ಅನೇಕ ಕರ್ಮಗಳೂ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಇದೆಲ್ಲಕ್ಕಿಂತ ಮುಖ್ಯವಾಗಿ, ಈ ದೇಹವನ್ನು ಬಿಟ್ಟಮೇಲೆ ಜೀವನು ಏನಾಗುತ್ತಾನೆಂಬುದನ್ನು ವಿವರಿಸಿರುವುದೇ ಈ ಪುರಾಣದ ವೈಶಿಷ್ಟ್ಯವೆನ್ನಬಹುದು. ಸತ್ತವರಿಗೆ ಮಾಡುವ ಶ್ರಾದ್ಧಕ್ರಿಯೆಗಳ ತಾತ್ಪರ್ಯವನ್ನೂ ಆವಶ್ಯಕತೆಯನ್ನೂ ಈ ಪುರಾಣ ಪ್ರತಿಪಾದಿಸಿರುವುದರಿಂದ, ಇಂದಿಗೂ ಯಾರಾದರೂ ಸತ್ತರೆ, ಅವರ ದೇಹಸಂಸ್ಕಾರವಾದಮೇಲೆ ಹತ್ತನೆಯ ದಿನದ ಸಂಸ್ಕಾರದವರೆಗೆ, ನಿತ್ಯವೂ ಅವರ ಬಂಧುವರ್ಗದವರು ಈ ಪುರಾಣವನ್ನು ಓದಿಸಿ ಶ್ರವಣಮಾಡುವ ಪದ್ಧತಿಯಿದೆ. ಇತರ ಕಾಲಗಳಲ್ಲಿ ಇದರ ಪಠಣಮಾಡುವ ವಾಡಿಕೆಯಿಲ್ಲ.

**ಪಾದ್ಮಪುರಾಣ**—55000 ಶ್ಲೋಕಗಳುಳ್ಳ ಪಾದ್ಮಪುರಾಣ ಸೃಷ್ಟಿ

ಖಂಡ, ಭೂಮಿಖಂಡ, ಸ್ವರ್ಗಖಂಡ, ಪಾತಾಲಖಂಡ, ಉತ್ತರಖಂಡ ಮತ್ತು ಕ್ರಿಯಾಯೋಗಸಾರ ಎಂಬ ಆರು ಖಂಡಗಳಾಗಿ ವಿಭಾಗಿಸಲ್ಪಟ್ಟಿದೆ. ಒಂದೊಂದು ಖಂಡವೂ ಅದರ ಹೆಸರೇ ಸೂಚಿಸುವ ವಿಷಯಗಳನ್ನು ನಿರೂಪಿಸುತ್ತದೆ. ವರ್ಷದ ಹನ್ನೆರಡು ತಿಂಗಳ ಪಾವಿತ್ರ್ಯವನ್ನೂ, ಸೃಷ್ಟಿಗೆ ಪೂರ್ವಭಾವಿಯಾಗಿ ನಾರಾಯಣನ ನಾಭೀಕಮಲದಲ್ಲಿ ಬ್ರಹ್ಮೋತ್ಪತ್ತಿಯ ತಾತ್ಪರ್ಯವನ್ನೂ ವಿವರಿಸುವ ಉತ್ತರಖಂಡ ಈ ಪುರಾಣದ ವೈಶಿಷ್ಟ್ಯ. ಈ ಪುರಾಣದಲ್ಲೂ ಅನೇಕ ಉಪಾಖ್ಯಾನಗಳು ಬರುತ್ತವೆ. ಆ ಪೈಕಿ ಶಕುಂತಲೋಪಾಖ್ಯಾನವೂ ರಾಮೋಪಾಖ್ಯಾನವೂ ಕಾಳಿದಾಸನ ಶಾಕುಂತಲನಾಟಕ ಮತ್ತು ರಘುವಂಶ ಮಹಾಕಾವ್ಯಗಳಲ್ಲಿರುವಂತೆಯೇ ಇವೆ. ಆದ್ದರಿಂದ ಈ ಪುರಾಣ ಕಾಳಿದಾಸನಿಗಿಂತ ಈಚಿನದು ಎಂಬುದೇ ಬಹುಜನಾಭಿಪ್ರಾಯ. ಈ ಅಭಿಪ್ರಾಯಕ್ಕೇ ಪೋಷಕವಾಗಿ ಈ ಪುರಾಣದಲ್ಲಿ ಭಾಗವತ ಸಂಪ್ರದಾಯಕ್ಕೂ ಜೈನರಿಗೂ ಸಂಬಂಧಿಸಿದ ಉಲ್ಲೇಖಗಳಿವೆ. ಕೃಷ್ಣಾವತಾರದ ನಿರೂಪಣೆಯಲ್ಲಿ ರಾಧೆಗೆ ವಿಶೇಷ ಪ್ರಾಧಾನ್ಯ ಬಂದಿರುವುದು ಈ ಪುರಾಣದಲ್ಲೇ.

ವರಾಹಪುರಾಣ—ಅನೇಕ ಕ್ಷೇತ್ರಗಳ ಮಹಾತ್ಮ್ಯಗಳನ್ನೂ ಸಂಸ್ಕಾರ ಪ್ರಕಾರಗಳನ್ನೂ ಒಳಗೊಂಡಿರುವ ಈ ಪುರಾಣವನ್ನು ವರಾಹಾವತಾರರೂಪಿಯಾದ ವಿಷ್ಣುವೇ ಹೇಳಿದಂತೆ ರಚಿಸಲಾಗಿದೆ.

## ಬ್ರಾಹ್ಮಪುರಾಣಗಳು

ಬ್ರಹ್ಮಪುರಾಣ--ದಕ್ಷನಿಗೆ ಬ್ರಹ್ಮನು ಹೇಳಿದಂತೆ ರಚಿತವಾಗಿರುವ ಈ ಬ್ರಹ್ಮಪುರಾಣಕ್ಕೆ ಆದಿಪುರಾಣವೆಂಬ ಹೆಸರೂ ಇದೆ. ೧೮ ಪುರಾಣಗಳ ಹೆಸರುಗಳನ್ನು ಉಲ್ಲೇಖಿಸುವಾಗಲೂ ಬ್ರಹ್ಮಪುರಾಣದ ಹೆಸರನ್ನೇ ಮೊದಲು ಹೇಳುವುದು ವಾಡಿಕೆ. ಪುರಾಣದಲ್ಲಿರಬೇಕಾದ ಐದು ವಿಧ ವಿಷಯಗಳ ಜತೆಯಲ್ಲಿ ಉತ್ಕಲ (Orissa) ದೇಶದ ತೀರ್ಥಕ್ಷೇತ್ರಗಳ ವಿವರಗಳೂ ಈ ಪುರಾಣದಲ್ಲಿವೆ. ಬ್ರಹ್ಮಪುರಾಣಕ್ಕೆ ಸೌರಪುರಾಣವೆಂಬ ಅನುಬಂಧವಿದೆ. ಇದರಲ್ಲಿ ಸೂರ್ಯನನ್ನು ಶಿವನೆಂದೇ ಪ್ರತಿಪಾದಿಸಿರುವುದಲ್ಲದೆ, ಪುರಿಯಬಳಿ ಕೋಣಾರ್ಕ ಎಂಬಲ್ಲಿ ಕ್ರಿ.ಶ. ೧೩ಲಗರಲ್ಲಿ ಕಟ್ಟಿದ ಸೂರ್ಯದೇವಾಲಯದ ಉಲ್ಲೇಖವೂ ಇದೆ.

ಬ್ರಹ್ಮಾಂಡಪುರಾಣ—ಲೋಕಸೃಷ್ಟಿಗೆ ಮೂಲವಾದ ಬ್ರಹ್ಮಾಂಡದ



ವರ್ಣನೆ ಈ ಪುರಾಣದಲ್ಲಿರುವುದರಿಂದ ಇದಕ್ಕೆ ಬ್ರಹ್ಮಾಂಡಪುರಾಣವೆಂಬ ಹೆಸರು ಬಂದಿದೆ. ಇದರಲ್ಲಿ ಉಪಾಖ್ಯಾನಗಳೇ ಹೆಚ್ಚು. ಅಧ್ಯಾತ್ಮರಾಮಾಯಣ ಈ ಪುರಾಣದ ಒಂದು ಭಾಗ. ಹೊರನೋಟಕ್ಕೆ ಪುರಾಣದಂತೆ ಕಂಡರೂ ಬ್ರಹ್ಮಾಂಡಪುರಾಣವು ಶಿವಪಾರ್ವತಿಯರ ಸಂವಾದರೂಪದಲ್ಲಿ ಅದ್ವೈತ ಸಿದ್ಧಾಂತವನ್ನೂ ರಾಮಭಕ್ತಿಯೊಂದೇ ಮೋಕ್ಷಸಾಧನವೆಂದೂ ಪ್ರಧಾನವಾಗಿ ಬೋಧಿಸುತ್ತದೆ. ಪರಶುರಾಮಾವತಾರದ ವಿವರಗಳೂ ಈ ಪುರಾಣದಲ್ಲಿವೆ.

ಬ್ರಹ್ಮವೈವರ್ತಪುರಾಣ—ಈ ಲೋಕವನ್ನೊಳಗೊಂಡಂತೆ ಎಲ್ಲ ಸೃಷ್ಟಿಯೂ 'ಬ್ರಹ್ಮದ' ವಿವರ್ತವೆಂದು ಬೋಧಿಸುವುದರಿಂದ ಈ ಪುರಾಣಕ್ಕೆ ಬ್ರಹ್ಮವೈವರ್ತ ಪುರಾಣವೆಂಬ ಹೆಸರು ಅನ್ವರ್ಥವಾಗಿದೆ. ಇದೂ ಅದ್ವೈತಬೋಧಕಪುರಾಣ. ಇದರಲ್ಲಿ ಬ್ರಹ್ಮಖಂಡ, ಪ್ರಕೃತಿಖಂಡ, ಗಣೇಶಖಂಡ, ಕೃಷ್ಣಜನ್ಮಖಂಡ ಎಂಬ ನಾಲ್ಕು ಖಂಡಗಳಿವೆ. ಕೃಷ್ಣನ ಅಜ್ಞೆಯಮೇಲೆ ಪ್ರಕೃತಿಯು ದುರ್ಗೆ, ಲಕ್ಷ್ಮಿ, ಸರಸ್ವತಿ, ಸಾವಿತ್ರಿ ಮತ್ತು ರಾಧೆಯಾಗಿ ಪರಿವರ್ತಿತವಾದುದಾಗಿಯೂ ಗಣೇಶನು ಕೃಷ್ಣನ ಒಂದು ಅವತಾರವೆಂದೂ ಈ ಪುರಾಣ ನಿರೂಪಿಸುತ್ತದೆ. ಕೃಷ್ಣನ ವಲ್ಲಭೆಯಾಗಿ ರಾಧೆ ಈ ಪುರಾಣದಲ್ಲಿ ವಿಶಿಷ್ಟರೀತಿಯಲ್ಲಿ ನಿರೂಪಿಸಲ್ಪಟ್ಟಿದ್ದಾಳೆ.

ಮಾರ್ಕಂಡೇಯಪುರಾಣ—ಯಾವ ಮತಪಂಥದ ಪಕ್ಷಪಾತವೂ ಇಲ್ಲದ ಪ್ರಾಚೀನ ಪುರಾಣಗಳಲ್ಲಿ ಮಾರ್ಕಂಡೇಯಪುರಾಣವೂ ಒಂದು. ಇದರಲ್ಲಿ ಮಹಾಭಾರತದ ವೀರರ ವಿಚಾರದಲ್ಲಿ ಕೆಲ ಆಕ್ಷೇಪಣೆಗಳಿಗೆ ಸಮಾಧಾನಗಳಿವೆ. ಆದ್ದರಿಂದ ಇದು ಮಹಾಭಾರತಕ್ಕಿಂತ ಈಚಿನದು ಎಂಬುದರಲ್ಲಿ ಸಂಶಯವಿಲ್ಲ. ಸೂರ್ಯ, ಅಗ್ನಿ, ಇಂದ್ರ, ಬ್ರಹ್ಮ ಮುಂತಾದ ದೇವತೆಗಳಿಗೆ ಸಂಬಂಧಿಸಿದ ಉಪಾಖ್ಯಾನಗಳೂ ಸೃಷ್ಟಿಪ್ರಳಯಗಳ ವಿಸ್ತಾರವಾದ ವಿವರಣೆಯೂ ಈ ಪ್ರಕರಣದಲ್ಲಿ ಬರುತ್ತವೆ. ಇದರಲ್ಲಿ ಬರುವ ಉಪಾಖ್ಯಾನಗಳಲ್ಲಿ ಹರಿಶ್ಚಂದ್ರೋಪಾಖ್ಯಾನ ತುಂಬ ಚೆನ್ನಾಗಿದೆ. ದೇವೀಮಾಹಾತ್ಮ್ಯ ಇದೇ ಪುರಾಣದ ಒಂದು ಭಾಗ.

ಭವಿಷ್ಯಪುರಾಣ—ಭವಿಷ್ಯತ್ಕಾಲಗಳಲ್ಲಿ ಸಂಭವಿಸುವಂತೆ ಕೆಲ ಘಟನೆಗಳನ್ನು ವಿವರಿಸುವ ಈ ಪುರಾಣಕ್ಕೆ ಭವಿಷ್ಯಪುರಾಣವೆಂಬ ಹೆಸರು ಅನ್ವರ್ಥವಾಗಿದೆ. ವರ್ಣಾಶ್ರಮ ಧರ್ಮಗಳು, ಸೂರ್ಯ ಅಗ್ನಿ ನಾಗರ ಪೂಜೆ, ಶಾಂತಿಕರ್ಮಗಳು ಮುಂತಾದುವುಗಳ ವಿವರಗಳು ಈ ಪುರಾಣದಲ್ಲಿ ಹೇರಳವಾಗಿವೆ. ಭವಿಷ್ಯೋತ್ತರಪುರಾಣವು ಈ ಭವಿಷ್ಯಪುರಾಣದ ಅನುಬಂಧ.

ವಾಮನಪುರಾಣ—ವಿಷ್ಣುವಿನ ವಾಮನಾವತಾರದ ಕತೆಯಿಂದ ಈ ಪುರಾಣ ಪ್ರಾರಂಭವಾಗುತ್ತದೆ. ಇದರಲ್ಲಿ ವಿಷ್ಣುವಿನ ಇತರ ಅವತಾರಗಳ ವರ್ಣನೆಯೂ, ಲಿಂಗಪೂಜೆ, ಶೈವಕ್ಷೇತ್ರಗಳ ವಿವರಗಳು, ಪಾರ್ವತೀಪರಿಣಯದ ಕತೆ ಮುಂತಾದುವುಗಳೂ ಬರುತ್ತವೆ.

### ಶೈವಪುರಾಣಗಳು

ವಾಯುಪುರಾಣ—ವಾಯುವೇ ಹೇಳಿದಂತೆ ರಚಿತವಾಗಿರುವ ಈ ಪುರಾಣಕ್ಕೆ ವಾಯುಪುರಾಣ ಎಂಬ ಹೆಸರು ಅನ್ವರ್ಥವಾಗಿದೆ. ಹಿಂದೆ ಹೇಳಿರುವಂತೆ ಏಳನೆಯ ಶತಮಾನದ ಬಾಣಕವಿಯು ಈ ಪುರಾಣವನ್ನು ಉಲ್ಲೇಖಿಸಿದ್ದಾನೆ. ನಾಲ್ಕನೆಯ ಶತಮಾನದ ಗುಪ್ತವಂಶದ ರಾಜರ ವಿಷಯವನ್ನು ವಾಯುಪುರಾಣ ಪ್ರತಿಪಾದಿಸುವುದರಿಂದ ಇದು ಐದು ಅಥವಾ ಆರನೆಯ ಶತಮಾನದಲ್ಲಿ ರಚಿತವಾಯಿತೆಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ. ಶಿವನನ್ನೂ ಶೈವಪಂಥದ ಪೂಜಾಕರ್ಮವಿಧಾನಗಳನ್ನೂ ಈ ಪುರಾಣ ವಿಶೇಷವಾಗಿ ನಿರೂಪಿಸುತ್ತದೆ. ಕೆಲವರು ಈ ಪುರಾಣವನ್ನು ಹದಿನೆಂಟು ಪುರಾಣಗಳಲ್ಲಿ ಒಂದೆಂದು ಭಾವಿಸುವುದಿಲ್ಲ. ಇದರ ಜಾಗದಲ್ಲಿ ಶಿವಪುರಾಣದ ಹೆಸರನ್ನು ಸೇರಿಸುತ್ತಾರೆ. ಆದರೆ ಈ ಶಿವಪುರಾಣ ವಾಯುಪುರಾಣದ ಒಂದು ಭಾಗವೆಂದೇ ಪರಿಗಣಿತವಾಗುವುದು ವಾಡಿಕೆಯಾಗಿದೆ.

ಲಿಂಗಪುರಾಣ—ಲಿಂಗರೂಪಿಯಾದ ಶಿವನೇ ಹೇಳಿದಂತಿರುವ ಪುರಾಣ ಇದು. ಇದರಲ್ಲಿ ಶಿವನ ೨೮ ಅವತಾರಗಳ ಕತೆಗಳೂ ವಿಸ್ತಾರವಾಗಿ ವರ್ಣಿತವಾಗಿವೆ.

ಸ್ಕಂದಪುರಾಣ—ಈ ಪುರಾಣದಲ್ಲಿ ಕುಮಾರಸ್ವಾಮಿಯಾದ ಸ್ಕಂದನ ಕತೆಯೂ ತಾರಕಾಸುರ ಸಂಹಾರದ ವಿವರಗಳೂ ಇವೆ. ಕಾಳಿದಾಸನ ಕುಮಾರಸಂಭವದಲ್ಲಿ ಬರುವ ವಿವರಗಳಿಗೂ ಈ ಪುರಾಣದಲ್ಲಿರುವ ನಿರೂಪಣೆಗೂ ಬಹಳ ಸಾಮ್ಯವಿದೆ.

ಈ ಪುರಾಣದಲ್ಲಿ ೮೦೦೦೦ ಶ್ಲೋಕಗಳಿದ್ದು ಅವು ಸನತ್ಕುಮಾರೀಯ, ಬ್ರಾಹ್ಮೀ, ವೈಷ್ಣವೀ, ಶಂಕರ (ಅಥವಾ ಅಗಸ್ತ್ಯ), ಸೂತ ಮತ್ತು ಸೌರ ಎಂಬ ಆರು ಸಂಹಿತೆಗಳಾಗಿ ವಿಂಗಡಿಸಲ್ಪಟ್ಟಿವೆ. ಇದರಲ್ಲಿ ಶೈವಕ್ಷೇತ್ರಗಳ ವಿವರವಿರುವುದಲ್ಲದೆ "ಕಾಶೀಖಂಡ"ದಲ್ಲಿ ವಾರಣಾಸಿಯ ಸುತ್ತಮುತ್ತಣ ಶಿವದೇವಾಲಯ



ಗಳ ವರ್ಣನೆಯಿದೆ. ಇದರ ಸೂತಸಂಹಿತಾಭಾಗದಲ್ಲಿ ಶಿವಪೂಜಾವಿಧಾನದ ನಿರೂಪಣೆಯಿದೆ.

ಅಗ್ನಿಪುರಾಣ—ವಸಿಷ್ಠನಿಗೆ ಅಗ್ನಿಯು ಹೇಳಿದಂತೆ ಈ ಪುರಾಣ ರಚಿತವಾಗಿದೆ. ಇದು ಪ್ರಧಾನವಾಗಿ ಶೈವಪುರಾಣವಾದರೂ ರಾಮಕೃಷ್ಣಾದ್ಯವತಾರಗಳನ್ನೂ ವಿವರಿಸುತ್ತದೆ. ಈ ಪುರಾಣದಲ್ಲಿ ವಿಮರ್ಶೆಯಾಗದ ವಿಚಾರವೇ ಇಲ್ಲ. ಕಾವ್ಯಲಕ್ಷಣದಿಂದ ಹಿಡಿದು ಜ್ಯೋತಿಷ, ಶಿಲ್ಪ ಮುಂತಾದ ಎಲ್ಲ ವಿಭಿನ್ನಶಾಸ್ತ್ರಗಳ ವಿವರಗಳನ್ನೊಳಗೊಂಡಿರುವುದೇ ಈ ಪುರಾಣದ ವೈಶಿಷ್ಟ್ಯ.

ಮತ್ಸ್ಯಪುರಾಣ—ಶೈವ ಮತ್ತು ವೈಷ್ಣವ ಹಬ್ಬಗಳು, ಕ್ಷೇತ್ರಗಳು, ಶಕುನಗಳು, ಆಚಾರಗಳು ಮುಂತಾದುವನ್ನು ಮತ್ಸ್ಯಪುರಾಣ ಪ್ರಧಾನವಾಗಿ ವಿವರಿಸುತ್ತದೆ. ಇದರಲ್ಲಿ ಆಲಯನಿರ್ಮಾಣ, ವಾಸ್ತುಶಿಲ್ಪ, ವಿಗ್ರಹ ಮತ್ತು ಪ್ರತಿಮೆಗಳ ನಿರ್ಮಾಣದ ವಿಧಾನಗಳೂ ಉಕ್ತವಾಗಿವೆ. ಆಂಧ್ರವಂಶದ ಉಲ್ಲೇಖವೂ ದಕ್ಷಿಣದೇಶದ ಪ್ರಧಾನಕ್ಷೇತ್ರಗಳಾದ ಶ್ರೀರಂಗ ರಾಮೇಶ್ವರಗಳ ಪ್ರಸ್ತಾಪವೂ ಈ ಪುರಾಣದಲ್ಲಿ ಬರುತ್ತದೆ.

ಕೂರ್ಮಪುರಾಣ—ಈ ಪುರಾಣದಲ್ಲಿ ಹಿಂದೆ ನಾಲ್ಕು ಸಂಹಿತೆಗಳಿದ್ದುದಾಗಿ ಪ್ರಸಿದ್ಧಿಯಿದೆ. ಆದರೆ ಈಗಿರುವುದು ಬ್ರಾಹ್ಮೀಸಂಹಿತೆಯೊಂದೇ. ಶಿವನ ವೈಶಿಷ್ಟ್ಯವನ್ನು ಕೊಂಡಾಡುತ್ತಾ, ಶಿವನಲ್ಲಿ ಭಕ್ತಿಯಿಡಬೇಕಾದುದರ ಆವಶ್ಯಕತೆಯನ್ನು ಈ ಪುರಾಣ ಒತ್ತಿಹೇಳುತ್ತದೆ. ಈ ಪುರಾಣದಲ್ಲೇ ಈಶ್ವರಗೀತೆ ಮತ್ತು ವ್ಯಾಸಗೀತೆ ಎಂಬ ಭಾಗಗಳಿವೆ. ಅವು ಅನುಕ್ರಮವಾಗಿ ಧ್ಯಾನ ಮತ್ತು ಕರ್ಮಗಳನ್ನು ಜ್ಞಾನಸಾಧನೆಯ ಮಾರ್ಗಗಳನ್ನಾಗಿ ನಿರೂಪಿಸುತ್ತವೆ. ವಿಷ್ಣುವಿನ ಹತ್ತು ಅವತಾರಗಳನ್ನು ಈ ಪುರಾಣ ವಿವರಿಸುತ್ತದೆಯಲ್ಲದೆ, ಈ ಲೋಕವನ್ನು ಸಪ್ತಸಮುದ್ರಗಳ ಮಧ್ಯೆ ಇರುವ ಸಪ್ತದ್ವೀಪಗಳನ್ನಾಗಿಯೂ ಆ ಪೈಕಿ ಮಧ್ಯದಲ್ಲಿರುವ ದ್ವೀಪವೇ ಮೇರುಪರ್ವತವನ್ನೊಳಗೊಂಡಿರುವ ಜಂಬೂದ್ವೀಪವೆಂದೂ ಅದರಲ್ಲೇ ಭರತವರ್ಷ (ಭರತಖಂಡ = ಇಂಡಿಯಾದೇಶ) ವಿರುವುದಾಗಿಯೂ ನಿರೂಪಿಸುತ್ತದೆ.

### ಇತರ ಪುರಾಣಗಳು

ಈ ಹದಿನೆಂಟು ಪುರಾಣಗಳಲ್ಲದೆ ಹದಿನೆಂಟು ಉಪಪುರಾಣಗಳೂ ಅನೇಕ ಸ್ಥಲಪುರಾಣಗಳೂ ಇವೆ.

## ೩. ರಾಮಾಯಣ

[ಮಹಾಭಾರತ ಮತ್ತು ರಾಮಾಯಣ ಎರಡೂ [40]ಆಖ್ಯಾನಗಳೇ ಆದರೂ ಮಹಾಭಾರತ ಕಾವ್ಯವೆನಿಸಿಕೊಳ್ಳುವುದಿಲ್ಲ; ರಾಮಾಯಣದಲ್ಲಿ ಕಾವ್ಯಲಕ್ಷಣಗಳೆಲ್ಲ ಸಂಪೂರ್ಣವಾಗಿದ್ದು ಅದು ಆದಿಕಾವ್ಯವೆಂಬ ಪ್ರಸಿದ್ಧಿ ಗಳಿಸಿದೆ. ಆದ್ದರಿಂದಲೇ ಈ ಅಧ್ಯಾಯದ ಆದಿಯಲ್ಲಿ ಮಹಾಭಾರತದ ವಿವೇಚನೆ ಮಾಡಿ, ರಾಮಾಯಣವನ್ನು ಮಹಾಕಾವ್ಯಗಳ ಸಮಾಲೋಚನೆಗೆ ಪೂರ್ವಭಾವಿಯಾಗಿ, ಈಗ ವಿಮರ್ಶಿಸಲು ತೆಗೆದುಕೊಳ್ಳಲಾಗಿದೆ.]

ರಾಮಾಯಣ ಆದಿಕಾವ್ಯ; ರಾಮಾಯಣವನ್ನು ಬರೆದ ವಾಲ್ಮೀಕಿ ಋಷಿ ಆದಿಕವಿ. ಕಾವ್ಯಶೈಲಿಯಲ್ಲಿ ಮೊಟ್ಟಮೊದಲು ರಚಿತವಾದ ಕಾವ್ಯ ರಾಮಾಯಣವೇ ಎಂಬುದರಲ್ಲಿ ಈವರೆಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ರಾಮಾಯಣ ಒಂದು ಇತಿಹಾಸವೂ ಹೌದು; ಆಖ್ಯಾನವೂ ಹೌದು. ಮಹಾಭಾರತ ರಾಮಾಯಣ ಎರಡಕ್ಕೂ ಈ ವೈಶಿಷ್ಟ್ಯವಿದೆ. 'ಪುರಾವೃತ್ತ'ವೆಂದು ಈ ಎರಡನ್ನೂ ಆಯಾ ಕವಿಗಳೇ ವಾಚ್ಯವಾಗಿ ಕರೆದಿದ್ದಾರೆ. ಆದ್ದರಿಂದಲೇ ರಾಮಾಯಣವಾಗಲಿ ಮಹಾಭಾರತವಾಗಲಿ ಕಟ್ಟುಕತೆಯಲ್ಲ. ನಡೆದುದನ್ನು, ನಡೆಯುತ್ತಿದ್ದುದನ್ನು ಆ ಕವಿಗಳು ಕಣ್ಣಾರ ಕಂಡು, ಕಂಡದ್ದನ್ನು ಕಂಡಂತೆ ಈ 'ಪುರಾವೃತ್ತ'ಗಳ ರೂಪದಲ್ಲಿ ಬರೆದಿಟ್ಟಿದ್ದಾರೆ.

ರಾಮಾಯಣವನ್ನು ಬರೆದ ವಾಲ್ಮೀಕಿ ಗಂಗಾತೀರದಲ್ಲೂ ರಾಮಾಯಣದ ನಾಯಕನಾದ ರಾಮ ಸರಯೂ ತೀರದಲ್ಲಿದ್ದ ಅಯೋಧ್ಯೆಯಲ್ಲೂ ವಾಸಿಸುತ್ತಿದ್ದರು. ಇಬ್ಬರೂ ಸಮಕಾಲೀನರು. ರಾಮನು ಸೀತಾಲಕ್ಷ್ಮಣರೊಡನೆ ವನವಾಸಕ್ಕೆ ತೆರಳಿದಾಗ ಚಿತ್ರಕೂಟದ ತಪ್ಪಲಿನಲ್ಲಿದ್ದ ವಾಲ್ಮೀಕ್ಯಾಶ್ರಮಕ್ಕೆ ಹೋಗಿ ಆ ಮುನಿವರ್ಯರನ್ನು [41]ನಮಸ್ಕರಿಸಿದಂತೆಯೂ, ಆ ಆಶ್ರಮದ ಸಮೀಪದಲ್ಲೇ ತಮಗೂ ಯೋಗ್ಯವಾದಂತಹ ಒಂದು ಆಶ್ರಮವನ್ನು ನಿರ್ಮಿಸಿಕೊಂಡು ಅಲ್ಲೇ ನೆಲಸಿದಂತೆಯೂ[41] ರಾಮಾಯಣದಲ್ಲೇ ಹೇಳಿದೆ.

40. ಸ್ವಯಂ ದೃಷ್ಟಾರ್ಥಕಥನಂ ಪ್ರಾಹುರಾಖ್ಯಾನಕಂ ಬುಧಾಃ। ಶ್ರುತಸ್ಯಾರ್ಥಸ್ಯ ಕಥನಮುಪಾಖ್ಯಾನಂ ಪ್ರಚಕ್ಷತೇ ॥ ತಾನೇ ಕಣ್ಣಾರ ಕಂಡದ್ದನ್ನು ಕಂಡಂತೆ ಹೇಳಿರುವುದು ಆಖ್ಯಾನ; ಕೇಳಿದ್ದನ್ನು ಕೇಳಿದ್ದಂತೆ ಹೇಳಿರುವುದು ಉಪಾಖ್ಯಾನ. ವಾಲ್ಮೀಕಿ ರಾಮ ಇಬ್ಬರೂ ಸಮಕಾಲೀನರು. ವ್ಯಾಸ ಮತ್ತು ಕೌರವಪಾಂಡವರೂ ಸಮಕಾಲೀನರು. ಇಬ್ಬರು ಕವಿಗಳೂ ತಾವು ಬರೆದಿರುವುದನ್ನು ಕಣ್ಣಾರ ಕಂಡಿದ್ದವರು.

41. ತತಸ್ತೌ ಪಾದಚಾರೇಣ ಗಚ್ಛಂತೌ ಸಹ ಸೀತಯಾ। ರಮ್ಯಮಾಸೇದತುಃ ಶೈಲಂ ಚಿತ್ರಕೂಟಂ ಮನೋರಮಂ ॥೧೨॥...... ಇತಿ ಸೀತಾ ಚ ರಾಮಶ್ಚ ಲಕ್ಷ್ಮಣಶ್ಚ ಕೃತಾಂಜಲಿಃ। ಅಭಿಗಮ್ಯಾಶ್ರಮಂ ಸರ್ವೇ ವಾಲ್ಮೀಕಿಮಭ್ಯವಾದಯನ್ ॥ ೧೬ ॥........ ಲಕ್ಷ್ಮಣಾನಯ ದಾರೂಣಿ ದೃಢಾನಿ ಚ ವರಾಣಿ ಚ। ಕುರುಷ್ವಾವಸಥಂ ಸೌಮ್ಯ ವಾಸೇ ಮೇಽಭಿರತಂ ಮನಃ ॥ ೧೯ ॥—ಅಯೋಧ್ಯಾಕಾಂಡ, ಸರ್ಗ–೫೬.



ಇಷ್ಟು ಸಮೀಪದಲ್ಲಿ ವಾಲ್ಮೀಕಿ ಋಷಿಯೂ ರಾಮಾದಿಗಳೂ ಕೆಲಕಾಲ ವಾಸ ಮಾಡಿದವರು. ಮುಂದೆ ಸೀತೆ ಪರಿತ್ಯಕ್ತಳಾದಮೇಲೆ ಇದೇ ವಾಲ್ಮೀಕಿ ಋಷಿಗಳ ಆಶ್ರಮದಲ್ಲೇ ಆಶ್ರಯ ಪಡೆದು ಅಲ್ಲೇ ಲವಕುಶರನ್ನು ಪ್ರಸವಿಸಿದಳು. ಪರಿತ್ಯಕ್ತಳಾದ ಸೀತೆಯನ್ನು ವಾಲ್ಮೀಕಿ ತಮ್ಮ ಆಶ್ರಮಕ್ಕೆ ಸ್ವಾಗತಿಸುತ್ತಾ ಹೇಳುವ ಹಾರ್ದವಾದ ಮಾತು ಇದು—(ಉತ್ತರಕಾಂಡ ೪೯ನೇ ಸರ್ಗ)

> ಸ್ನುಷಾ ದಶರಥಸ್ಯ ತ್ವಂ ರಾಮಸ್ಯ ಮಹಿಷೀ ಪ್ರಿಯಾ।
> ಜನಕಸ್ಯ ಸುತಾ ರಾಜ್ಞಃ ಸ್ವಾಗತಂ ತೇ ಪತಿವ್ರತೇ ॥ ೮ ॥........
> ಯಥಾ ಸ್ವಗೃಹಮಭ್ಯೇತ್ಯ ವಿಷಾದಂ ಚೈವ ಮಾ ಕೃಥಾಃ ॥ ೧೨ ॥

ಲವಕುಶರ ಜಾತಕರ್ಮಾದಿಗಳನ್ನು ಮಾಡಿ, ಮುಂದೆ ಅವರಿಗೆ ವಿದ್ಯಾಭ್ಯಾಸ ಮಾಡಿಸಿದವರೂ ವಾಲ್ಮೀಕಿ ಋಷಿಗಳೇ. ಭಗವಾನ್ ವಾಲ್ಮೀಕಿಗೂ ಸೀತಾರಾಮಾದಿಗಳಿಗೂ ಇದ್ದ ಆತ್ಮೀಯತೆ ಅಂತಹುದು.

ಇಷ್ಟೇ ಅಲ್ಲದೆ, ರಾಮನ ಗುಣಗಳಿಗೂ ಧರ್ಮನಿಷ್ಠೆಗೂ ವಾಲ್ಮೀಕಿಋಷಿ ಮಾರುಹೋಗಿದ್ದರು; ರಾಮನನ್ನು ಆದರ್ಶಪುರುಷನೆಂದೇ ಭಾವಿಸಿದ್ದರು. ಆದ್ದರಿಂದಲೇ, ಯಾವನೋ ಒಬ್ಬನ ಆಡುಮಾತಿಗಾಗಿ ರಾಮ ಸೀತೆಯನ್ನು ತ್ಯಾಗ ಮಾಡಿಬಿಟ್ಟನೆಂದು ಕೇಳಿದಾಗ ವಾಲ್ಮೀಕಿಗೆ ಆದ ದುಃಖ[42] ಅಪಾರ. ರಾಮನ ಆದರ್ಶದ ವಿಷಯದಲ್ಲಿ ಅವರಿಗೆ ದೃಢವಿಶ್ವಾಸವಿದ್ದರೂ ಮನಸ್ಸು ವಿಚಲಿತವಾಯಿತು. ಇಂತಹ ಪರಿಸ್ಥಿತಿಯಲ್ಲಿದ್ದಾಗ ವಾಲ್ಮೀಕಿ ಮಹರ್ಷಿಗಳ ಬಳಿಗೆ ನಾರದರು ಆಗಮಿಸಿದರು. ತ್ರಿಲೋಕ ಸಂಚಾರಿಯಾದ ನಾರದರಿಗೆ ತಿಳಿಯದ ವಿಷಯವಿಲ್ಲ. ಆದ್ದರಿಂದಲೇ ವಾಲ್ಮೀಕಿ ಅವರನ್ನು ಕಂಡಾಗ

> ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚ ವೀರ್ಯವಾನ್।
> ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥........

ಎಂದು ಮುಂತಾಗಿ ಪ್ರಶ್ನಿಸಿದುದು; ರಾಮನ ಮಹಿಮೆಯ ಅರಿವಿಲ್ಲದೆ ಅಲ್ಲ.

42 ಸೀತಾಪರಿತ್ಯಾಗದಿಂದ ವಾಲ್ಮೀಕಿಗೆ ರಾಮನಮೇಲೆ ಕೋಪವೇ ಉಂಟಾಗಿತ್ತೆಂದು ಕಾಳಿದಾಸ ರಘುವಂಶ ಸರ್ಗ ೧೪, ಶ್ಲೋಕ ೭೩ರಲ್ಲಿ ಹೇಳುತ್ತಾನೆ.

> ಉತ್ಖಾತಲೋಕತ್ರಯಕಂಟಕೇಽಪಿ ಸತ್ಯಪ್ರತಿಜ್ಞೇಽಪ್ಯವಿಕತ್ಥನೇಽಪಿ।
> ತ್ವಾಂ ಪ್ರತ್ಯಕಸ್ಮಾತ್ಕಲುಷಪ್ರವೃತ್ತಾವಸ್ತ್ಯೇವ ಮನ್ಯುರ್ಭರತಾಗ್ರಜೇ ಮೇ ॥

[43]ಇಕ್ಷ್ವಾಕುವಂಶದ ರಾಮನೇ ಅಂತಹವನು—ಎಂಬ ನಾರದರ ಉತ್ತರ ವಾಲ್ಮೀಗೆ ತುಂಬಾ ಸಮಾಧಾನವುಂಟುಮಾಡಿರಬೇಕು.[44]

---

43 ಬಹವೋ ದುರ್ಲಭಾಶ್ಚೈವ ಯೇ ತ್ವಯಾ ಕೀರ್ತಿತಾ ಗುಣಾಃ ।
ಮುನೇ ವಕ್ಷ್ಯಾಮ್ಯಹಂ ಬುದ್ಧ್ವಾ ತೈರ್ಯುಕ್ತಃ ಶ್ರೂಯತಾಂ ನರಃ ॥
ಇಕ್ಷ್ವಾಕುವಂಶಪ್ರಭವೋ ರಾಮೋ ನಾಮ ಜನೈಃ ಶ್ರುತಃ ।
ನಿಯತಾತ್ಮಾ ಮಹಾವೀರ್ಯೋ ದ್ಯುತಿಮಾನ್ ಧೃತಿಮಾನ್ ವಶೀ ॥
ರಾಮಾಯಣ 1–1–7 ಇತ್ಯಾದಿ.

44 'ರಾಮ' ಎಂಬ ಎರಡಕ್ಷರ ವಾಲ್ಮೀಕಿಗೆ ಉತ್ತಾರಕವಾದ ಮಂತ್ರ. ವಾಲ್ಮೀಕಿಯು ಜನ್ಮತಃ ವರುಣನ ಹತ್ತನೆಯ ಮಗ. ಆದರೆ ಸಹವಾಸದೋಷದಿಂದ ಅನೇಕ ವರ್ಷಗಳ ಕಾಲ ಕಳ್ಳರೊಡನೆ ಕಳ್ಳನಾಗಿ ಸಾಧುಸಂತರನ್ನೂ ಪೀಡಿಸುತ್ತಿದ್ದ. ಒಂದಾನೊಂದು ದಿವಸ ಸಪ್ತರ್ಷಿಗಳು ಅವನಿಗೆ ತನ್ನ ಕೃತ್ಯದ ಬಗ್ಗೆ ಪಶ್ಚಾತ್ತಾಪವುಂಟಾಗುವಂತೆ ಮಾಡಿ, 'ರಾಮ' ತಾರಕಮಂತ್ರವನ್ನು ಜಪಿಸಿ ಪಾಪವಿಮುಕ್ತನಾಗುವಂತೆ ಉಪದೇಶಿಸುತ್ತಾರೆ. ಅದರಂತೆಯೇ ಅವನು 'ರಾಮ' 'ರಾಮ' ಎಂದು ಅನೇಕ ಸಹಸ್ರ ವರ್ಷಗಳ ಕಾಲ ಜಪಿಸುತ್ತಿರಲಾಗಿ ಅವನಮೇಲೆ ಹುತ್ತ (ವಲ್ಮೀಕ) ಬೆಳೆದು, ತಪಸ್ಸು ಮುಗಿಸಿದಮೇಲೆ ಅವನು ಆ ವಲ್ಮೀಕದಿಂದಲೇ ಹೊರಕ್ಕೆ ಬರುತ್ತಾನಾದ್ದರಿಂದ ಅವನಿಗೆ ವಾಲ್ಮೀಕಿ ಎಂಬ ಹೆಸರು ಬಂತು. ಅವನ ಮೊದಲ ಹೆಸರು ಪ್ರಾಚೇತಸ (ಅಂದರೆ ಪ್ರಚೇತಸ (=ವರುಣ)ನ ಮಗ). ತಪಸ್ಸಿದ್ಧಿ ಪಡೆದಮೇಲೆ ವಾಲ್ಮೀಕಿ ಋಷಿಯಾಗಿ ಚಿತ್ರಕೂಟದಲ್ಲಿ ಆಶ್ರಮವಾಸಿಯಾಗಿ ನೆಲಸಿದ. 'ರಾಮ' ಎಂಬ ಹೆಸರಿನ ಮೇಲೆಯೇ ವಾಲ್ಮೀಕಿಗಿದ್ದ ವಿಶೇಷ ಅಭಿಮಾನಕ್ಕೆ ಕಾರಣ ಈ ಪೂರ್ವವೃತ್ತದ ಹಿನ್ನೆಲೆಯನ್ನು ಗಮನಿಸಿದರೆ ಮನವರಿಕೆಯಾಗಬಹುದು.

ವಾಲ್ಮೀಕಿಯ ಉದ್ಧಾರಕ್ಕೆ ಕಾರಣವಾದ ತಾರಕ ಮಂತ್ರದ 'ರಾಮ' ನಾಮಕ್ಕೂ ದಶರಥನ ಮಗ ರಾಮನಿಗೂ ಇರುವ ಸಂಬಂಧವನ್ನು ಬೇರೆಕಡೆ ವಿವೇಚಿಸಲಾಗುವುದು. ಪ್ರಸಂಗವಶಾತ್ ಒಂದು ಮಾತನ್ನು ಮಾತ್ರ ಇಲ್ಲಿ ಹೇಳುತ್ತೇವೆ. ವಾಲ್ಮೀಕಿ ರಾಮನಾಮ ಜಪಿಸಿ ಪುನೀತನಾದುದು ದಶರಥನ ಮಗ ರಾಮ ಹುಟ್ಟುವುದಕ್ಕೆ ಎಷ್ಟೋ ಸಹಸ್ರ ವರ್ಷಗಳ ಹಿಂದೆ. ರಮಯತೀತಿ ರಾಮಃ—(ಎಲ್ಲರ ಕಣ್ಮನಗಳನ್ನೂ) ತಣಿಸುವವನು ರಾಮ; ಅಂದರೆ, ಎಲ್ಲರ ಕಣ್ಮನಗಳಿಗೆ ಸಂತೋಷವುಂಟುಮಾಡುವ ವಿಷ್ಣುವಿದ ರೂಪ. ಅಂತಹ ವಿಷ್ಣುವಿನ ರೂಪವನ್ನು ವಾಲ್ಮೀಕಿ ಧ್ಯಾನಿಸಿ, ನಾಮವನ್ನು ಜಪಿಸಿ ಕೃತಾರ್ಥನಾದ. ಇದಲ್ಲದೆ ಈ ಮಂತ್ರಕ್ಕೆ ಧ್ಯಾನಶ್ಲೋಕವಾದ

ವೈದೇಹೀಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಂ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಂ ॥

ಎಂಬಲ್ಲಿ ನಿರೂಪಿತವಾಗಿರುವ, ಕಲ್ಪವೃಕ್ಷದ ತಳದಲ್ಲಿ ಸುವರ್ಣಮಯ ಮಹಾಮಂಟಪದಲ್ಲಿ



ಸೀತಾಪರಿತ್ಯಾಗ ಮಾಡಿದ್ದರೂ ರಾಮನೇ ಪ್ರಪಂಚದಲ್ಲಿ ಅತ್ಯಂತ ಶ್ರೇಷ್ಠನಾದ ಪುರುಷನೆಂದು ನಾರದರಿಂದಲೂ ಕೇಳಿದಮೇಲೆ, ರಾಮನ ಮಹಿಮೆಯನ್ನೂ, ಸೀತೆಯ ನಿಷ್ಕಳಂಕ ಚಾರಿತ್ರವನ್ನೂ, ವಿವೇಕ ಶೂನ್ಯನಾದ ರಾವಣನ ವಧೆಯನ್ನೂ, ವಿಸ್ತಾರವಾಗಿ ನಿರೂಪಿಸುವಂತಹ[45] ರಾಮಾಯಣ ಕಾವ್ಯರಚನೆಯ ಬಗ್ಗೆ ಚಿಂತಿಸುತ್ತಾ ವಾಲ್ಮೀಕಿಋಷಿ ಮಾಧ್ಯಾಹ್ನಿಕಾನುಷ್ಠಾನಕ್ಕಾಗಿ ಶಿಷ್ಯರೊಡನೆ ತಮಸಾ ನದಿಗೆ ಹೋದರು. ಅದೇ ವೇಳೆಗೆ ಅಲ್ಲಿ ಪ್ರೇಮದಿಂದ ರಮಿಸುತ್ತಿದ್ದ ಕ್ರೌಂಚ(ಪಕ್ಷಿ) ದಂಪತಿಗಳಲ್ಲಿ ಗಂಡುಹಕ್ಕಿಯನ್ನು ಬೇಡನೊಬ್ಬನು ಬಾಣಪ್ರಯೋಗಮಾಡಿ ಕೊಲ್ಲಲಾಗಿ ಹೆಣ್ಣುಹಕ್ಕಿ ವಿಲಪಿಸುವುದನ್ನು ಕೇಳಿದ ವಾಲ್ಮೀಕಿಯ ಶೋಕ, ಸಹಾನುಭೂತಿಯಿಂದ ಉತ್ತಪ್ತವಾದ ಹೃದಯದಿಂದ ಹೊರಹೊಮ್ಮಿವಾಗ, ಈ ರೀತಿ ಆ ಬೇಡನನ್ನು ಶಪಿಸುವಂತಹ ಶ್ಲೋಕರೂಪ ತಾಳಿತ್ತು—

ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।
ಯತ್ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ॥ ರಾಮಾ. 1-2-15

ವಾಲ್ಮೀಕಿ ನಿರ್ವಿಣ್ಣರಾಗಿಯೇ ಅನುಷ್ಠಾನ ಮುಗಿಸಿಕೊಂಡು ಆಶ್ರಮಕ್ಕೆ ಹಿಂದಿರುಗಿ, ಸರ್ವಶ್ಲಾಘ್ಯವಾದ ರೀತಿಯಲ್ಲಿ ರಾಮಾಯಣ ಕಾವ್ಯವನ್ನು ರಚಿಸುವ ಆಲೋಚನೆಯಲ್ಲಿರುವಾಗ ಇಂತಹ ಶಾಪವಾಕ್ಯ ಮೊದಲಶ್ಲೋಕವಾಗಿ ತಮ್ಮ ಬಾಯಿಂದ ಹೊರಬಂದುಬಿಟ್ಟಿತಲ್ಲಾ ಎಂದು ಪರಿತಪಿಸುತ್ತಿದ್ದರು. ಅಷ್ಟರಲ್ಲಿ ಬ್ರಹ್ಮನೇ ಪ್ರತ್ಯಕ್ಷನಾಗಿ ಆ ಶ್ಲೋಕವೇ ಸರಿಯಾಗಿ ಅರ್ಥಮಾಡಿದರೆ ರಾಮಾಯಣಕ್ಕೆ ಮಂಗಳ ಶ್ಲೋಕವಾಗುತ್ತದೆಯೆಂದು ನಿರೂಪಿಸಿ, ರಾಮನ ಜೀವನದಲ್ಲಿ ಹಿಂದೆ ನಡೆದಿದ್ದ ಮತ್ತು ಮುಂದೆ ನಡೆಯುವುದಾಗಿದ್ದ [46]ರಹಸ್ಯ-

---

ಪುಷ್ಪಕವಿಮಾನದ ಮಧ್ಯೆ ಮಣಿಮಯವಾದ ಆಸನದಲ್ಲಿ ವೀರಾಸನ ಹಾಕಿಕೊಂಡು ರಾಮ ಸೀತಾಸಮೇತನಾಗಿಯೂ ಭರತಾದಿಗಳಿಂದ ಪರಿವೃತವಾಗಿಯೂ ಕುಳಿತು, ಮುಂಭಾಗದಲ್ಲಿ ಆಂಜನೇಯನು ಮುನಿಗಳಿಂದ ಪರತತ್ತ್ವ (ವಿಚಾರ)ವನ್ನು ವಾಚನಮಾಡಿಸುತ್ತಿರಲಾಗಿ ಅದಕ್ಕೆ (ರಾಮನೇ) ವ್ಯಾಖ್ಯಾನ ಮಾಡುತ್ತಿರುವ ಸನ್ನಿವೇಶ ವಾಲ್ಮೀಕಿಯ ರಾಮಾಯಣದಲ್ಲಿ ಮಾತ್ರವಲ್ಲ, ಬೇರೆಲ್ಲೂ ಕೂಡ ಬರುವುದಿಲ್ಲವೆಂಬುದೂ ಗಮನಾರ್ಹ.

45 ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್ ।
ಪೌಲಸ್ತ್ಯವಧಮಿತ್ಯೇವ ಚಕಾರ ಚರಿತವ್ರತಃ ॥ ರಾಮಾ—1-4-7

46 ರಾಮಸ್ಯ ಚರಿತಂ ಕೃತ್ಸ್ನಂ ಕುರು ತ್ವಂ ಋಷಿಸತ್ತಮ ।....
ವೃತ್ತಂ ಕಥಯ ವೀರಸ್ಯ ಯಥಾ ತೇ ನಾರದಾಚ್ಛ್ರುತಂ ।

ಪ್ರಕಾಶರೂಪವಾದ ಎಲ್ಲವೂ ಸ್ಪಷ್ಟವಾಗಿ ಗೋಚರಿಸುವಂತೆ ವರವನ್ನು ಅನುಗ್ರಹಿಸಿ, ರಾಮಾಯಣ ಕಾವ್ಯವನ್ನು ರಚಿಸುವಂತೆ ವಾಲ್ಮೀಕಿ ಋಷಿಯನ್ನು ಹುರಿದುಂಬಿಸಿದನು. ಅದೇ ಪ್ರಕಾರ ವಾಲ್ಮೀಕಿಋಷಿಗಳು ೨೪೦೦೦ ಶ್ಲೋಕಗಳ[47] ರಾಮಾಯಣವನ್ನು ಬಾಲ, ಅಯೋಧ್ಯಾ, ಅರಣ್ಯ, ಕಿಷ್ಕಿಂಧಾ. ಸುಂದರ, ಯುದ್ಧ ಮತ್ತು ಉತ್ತರಕಾಂಡಗಳೆಂಬ ಏಳು ಕಾಂಡಗಳಲ್ಲಿ ವಿಭಕ್ತವಾದ ೫೦೦ ಸರ್ಗಗಳಲ್ಲಿ ರಚಿಸಿದರು ಮತ್ತು ಲವಕುಶರಿಗೆ (ಮೊದಲ ಆರು ಕಾಂಡಗಳನ್ನೂ) ಉಪದೇಶಿಸಿ, ಅವರು ಅದನ್ನು ಮಧುರವಾಗಿ ಲಯಬದ್ಧವಾಗಿ ಹಾಡಲೂ ಕಲಿಸಿದರು.[48]

ರಾಮಾಯಣದ ಮೊದಲನೆಯ ಸರ್ಗಕ್ಕೆ ಸಂಕ್ಷೇಪರಾಮಾಯಣವೆಂದು ಹೆಸರು; ಅದರಲ್ಲಿ ನಾರದರು ವಾಲ್ಮೀಕಿಗೆ ಸಂಕ್ಷೇಪವಾಗಿ ಹೇಳಿದ ರಾಮನ ಕಥೆಯಿದೆ. ಮೂರನೆಯ ಸರ್ಗದಲ್ಲಿ ವಾಲ್ಮೀಕಿ ರಚಿಸಿರುವ ರಾಮಾಯಣದ ಕಥೆಯ ಸಂಗ್ರಹವಿದೆ.

ಸಮಗ್ರರಾಮಾಯಣವನ್ನೂ ವಾಲ್ಮೀಕಿಗಳೇ ರಚಿಸಿದರೆಂದು ಸಾಂಪ್ರದಾಯಿಕವಾಗಿ ಹೇಳಲಾಗುತ್ತಿದ್ದರೂ ಆಧುನಿಕ ವಿಮರ್ಶಕರ ಅಭಿಪ್ರಾಯದಲ್ಲಿ ಬಾಲಕಾಂಡದ ಒಂದು ಭಾಗವೂ ಸಮಗ್ರ ಉತ್ತರಕಾಂಡವೂ ವಾಲ್ಮೀಕಿ ರಚಿತವಲ್ಲ. ಅದಕ್ಕೆ ಈ ಕಾರಣಗಳನ್ನು ಮುಂದಿಡಲಾಗುತ್ತಿದೆ.—

೧. ರಾಮಾಯಣದ ವಿಷಯಸೂಚಿಕೆಗಳಂತಿರುವ ಮೊದಲನೆಯ ಮತ್ತು ಮೂರನೆಯ ಸರ್ಗಗಳಲ್ಲಿರುವ ವಿಷಯಗಳು ವಿಭಿನ್ನವಾಗಿವೆ. ಬಾಲಕಾಂಡದಲ್ಲಿನ ಉಪಾಖ್ಯಾನಗಳ ಮತ್ತು ಉತ್ತರಕಾಂಡದ ಕಥೆಯ ಪ್ರಸ್ತಾಪ ಒಂದು ಸೂಚಿಕೆಯಲ್ಲಿಲ್ಲವೇ ಇಲ್ಲ. ಇದರಿಂದ ಈ ಹೊಸ ಭಾಗಗಳನ್ನು ಸೇರಿಸಿದ ಮೇಲೆ ಎರಡನೆಯ ವಿಷಯಸೂಚಿಕೆಯನ್ನು ರಚಿಸಿರಬೇಕೆಂದು ಹೇಳಬೇಕಾಗುತ್ತದೆ.

೨. ರಾಮ ವಿಷ್ಣುವಿನ ಅವತಾರವೆಂಬುದು ಬಾಲಕಾಂಡ, ಯುದ್ಧಕಾಂಡದ ಕೊನೆಯಭಾಗ ಮತ್ತು ಉತ್ತರಕಾಂಡಗಳಲ್ಲಿ ಮಾತ್ರ ವಿಶೇಷವಾಗಿ ನಿರೂಪಿತವಾಗಿದೆ.

೩. ಈಗಲೂ ಮೊದಲನೆಯ ಆರು ಕಾಂಡಗಳನ್ನು ಮಾತ್ರ ಪಾರಾಯಣಕ್ಕೆ ಬಳಸಲಾಗುತ್ತಿದೆ. ಉತ್ತರಕಾಂಡದ ಪಠಣ ಶ್ರೇಯಸ್ಕರವಲ್ಲವೆಂಬ ಪ್ರತೀತಿ ರೂಢಮೂಲವಾಗಿದೆ.

೪. ರಾಮಾಯಣವನ್ನು ರಚಿಸಿ ಅದನ್ನು ವಾಲ್ಮೀಕಿಯು ಲವಕುಶರಿಗೆ ಹೇಳಿಕೊಟ್ಟಂತೆಯೂ, ಅವರು ಅದನ್ನು ಸಮಗ್ರವಾಗಿ ರಾಮನ ಮುಂದೆ ಗಾನ ಮಾಡಿದುದಾಗಿಯೂ ಬಾಲಕಾಂಡದ ಆದಿಭಾಗದಲ್ಲೇ ಹೇಳಿದೆ. ಲವಕುಶರು ತಮ್ಮದೇ ಆದ ಜನ್ಮವೃತ್ತಾಂತವನ್ನೂ ಉತ್ತರಕಾಂಡದ ಮುಂದಿನ ಕಥೆಗಳನ್ನೂ (ರಾಮಾದಿಗಳ ದೇಹತ್ಯಾಗವನ್ನೂ ಸೇರಿಸಿದಂತೆ) ರಾಮನ ಮುಂದೆಯೇ ಗಾನ ಮಾಡಿದರೆಂಬುದು ಅಸಂಗತವಾದೀತು. ಬಾಲಕಾಂಡದ ಮೊದಲ ಎರಡು ಸರ್ಗಗಳ ವಿಷಯದಲ್ಲೂ ಇದೇ ಮಾತು ಹೇಳಬಹುದು. ಅಲ್ಲದೆ ಬಾಲಕಾಂಡದ ಐದನೆಯ ಸರ್ಗದ ಐದನೆಯ [49]ಶ್ಲೋಕದಿಂದ ರಾಮಾಯಣದ ಕಥಾಭಾಗ ಸಕ್ರಮವಾಗಿ ಆರಂಭವಾಗುತ್ತದೆ.

—ಈ ಮುಂತಾದ ಕಾರಣಗಳಿಂದಾಗಿ ವಾಲ್ಮೀಕಿರಚಿತ ರಾಮಾಯಣ ಕೇವಲ ಷಟ್ಕಾಂಡಗಳಿಗೇ ಸೀಮಿತವಾಗಿತ್ತೆಂದೂ, ಅದರಲ್ಲೂ ಬಾಲಕಾಂಡದ ಬಹುಭಾಗವೂ ಯುದ್ಧಕಾಂಡದ ಕೊನೆಯಲ್ಲಿ ಕೆಲವು ಸರ್ಗಭಾಗಗಳೂ ಈಚೆಗೆ ಸೇರಿಸಲ್ಪಟ್ಟವೆಂದೂ ಹೇಳಲಾಗುತ್ತಿದೆ.

---

ರಹಸ್ಯಂ ಚ ಪ್ರಕಾಶಂ ಚ ಯದ್ವೃತ್ತಂ ತಸ್ಯ ಧೀಮತಃ ||
ರಾಮಸ್ಯ ಸಹ ಸೌಮಿತ್ರೇಃ ರಾಕ್ಷಸಾನಾಂ ಚ ಸರ್ವಶಃ |
ವೈದೇಹ್ಯಾಶ್ಚೈವ ಯದ್ವೃತ್ತಂ ಪ್ರಕಾಶಂ ಯದಿ ವಾ ರಹಃ |
ಯಚ್ಚಾಪ್ಯವಿದಿತಂ ಸರ್ವಂ ವಿದಿತಂ ತೇ ಭವಿಷ್ಯತಿ |
ನ ತೇ ವಾಗನೃತಾ ಕಾವ್ಯೇ ಕಾಚಿದತ್ರ ಭವಿಷ್ಯತಿ ||......

ರಾಮಾಯಣ 1-2-32ರಿಂದ 35.

47 ಚತುರ್ವಿಂಶತ್ಸಹಸ್ರಾಣಿ ಶ್ಲೋಕಾನಾಮುಕ್ತವಾನ್ ಋಷಿಃ |
ತಥಾ ಸರ್ಗಶತಾನ್ ಪಂಚ ಷಟ್ಕಾಂಡಾನಿ ತಥೋತ್ತರಂ || ರಾಮಾ. 1-4-2
ಆದರೆ ಈಗ ಪ್ರಚಲಿತವಾಗಿರುವ ರಾಮಾಯಣಗಳಲ್ಲಿ 645 ಸರ್ಗಗಳೂ 24000ಕ್ಕಿಂತ ಸ್ವಲ್ಪ ಹೆಚ್ಚು ಶ್ಲೋಕಗಳೂ ಇವೆ. ಬಹಳ ದೀರ್ಘವಾಗಿದ್ದ ಸರ್ಗಗಳನ್ನು ಸೌಕರ್ಯಕ್ಕಾಗಿ ಈಚಿನವರು ಎರಡೆರಡಾಗಿ ಒಡೆದುದೇ ಸರ್ಗಸಂಖ್ಯೆ ಹೆಚ್ಚಲು ಕಾರಣವಿರಬಹುದು.

48 ರಾಮನು ಅಶ್ವಮೇಧಯಾಗ ಮಾಡಿದಾಗ ಲವಕುಶರು ರಾಮನ ಮುಂದೆ ಈ ರಾಮಾಯಣದ ಗಾನ ಮಾಡಿದಂತೆ ಹೇಳಿದೆ.



49 ಕೋಸಲೋ ನಾಮ ಮುದಿತಃ ಸ್ಫೀತೋ ಜನಪದೋ ಮಹಾನ್ |
ನಿವಿಷ್ಟಃ ಸರಯೂತೀರೇ ಪ್ರಭೂತಧನಧಾನ್ಯವಾನ್ ||
ಐದನೆಯ ಸರ್ಗದ ಮೊದಲನೆಯ ಶ್ಲೋಕದಿಂದಲೇ ರಾಮಾಯಣ ಪ್ರಾರಂಭಿಸುತ್ತದೆಂದೂ ಕೆಲವರು ಹೇಳುತ್ತಾರೆ.

## ರಾಮಾಯಣ ರಚಿತವಾದ ಕಾಲ

ಶ್ರೀರಾಮನು ತ್ರೇತಾಯುಗದ ಕೊನೆಯಲ್ಲಿ ಅಯೋಧ್ಯೆಯಲ್ಲಿ ರಾಜ್ಯವಾಳುತ್ತಿದ್ದನೆಂಬುದು ಭಾರತೀಯರ ಪರಂಪರಾಗತವಾದ ನಿಃಸಂಶಯವಾದ ವಿಶ್ವಾಸ. ತ್ರೇತಾಯುಗವು ಕ್ರಿ. ಪೂ. 867100ರಲ್ಲಿ ಕೊನೆಗೊಂಡಿತು. ಶ್ರೀರಾಮನು 40 ವರ್ಷದವನಾಗಿದ್ದಾಗ ಪಟ್ಟಾಭಿಷಿಕ್ತನಾಗಿ 11000 ವರ್ಷ ಕಾಲ ರಾಜ್ಯವಾಳಿದಂತೆ ರಾಮಾಯಣದಲ್ಲೇ ಹೇಳಿದೆ. ರಾಮನು ಸೀತಾಪರಿತ್ಯಾಗಮಾಡಿದಮೇಲೆ ಲವಕುಶರೂ ಜನಿಸಿ ಗಾನಪಟುಗಳಾಗಿದ್ದಾಗ ವಾಲ್ಮೀಕಿಯು ರಾಮಾಯಣವನ್ನು ರಚಿಸಿ ಲವಕುಶರಿಂದ ಹಾಡಿಸಿದನೆಂದೂ ಉಕ್ತವಾಗಿದೆ. ಇದರಿಂದ ಕ್ರಿ.ಪೂ. 878000ದ ವೇಳೆಗೆ ರಾಮಾಯಣ ರಚಿತವಾಯಿತೆಂದು ಹೇಳಬಹುದು. ಆದರೆ ಜಾಕೊಬಿ ಮುಂತಾದ ಆಧುನಿಕ ವಿಮರ್ಶಕರ ವಿಚಾರಸರಣಿಯೇ ಬೇರೆ—

ರಾಮಾಯಣದಲ್ಲಿಲ್ಲದ ಆರ್ಷಪ್ರಯೋಗಗಳು ಮಹಾಭಾರತದಲ್ಲಿ ಕಂಡುಬರುತ್ತವೆ. ಆದ್ದರಿಂದ ಮೂಲ ಮಹಾಭಾರತವು ರಾಮಾಯಣದ ಮೂಲರೂಪಕ್ಕಿಂತ ಹಿಂದೆಯೇ ರಚಿತವಾಗಿದ್ದಿರಬೇಕು. 'ಕರ್ಣ ಉವಾಚ' ಮುಂತಾದ ಗದ್ಯವಾಕ್ಯಗಳನ್ನೂ ಮಹಾಭಾರತ ಮಧ್ಯೆ ಮಧ್ಯೆ ಬಳಸಿಕೊಂಡಿದೆಯಾದರೂ ರಾಮಾಯಣದಲ್ಲಿ ಇಂತಹ ವಾಕ್ಯಗಳು ಶ್ಲೋಕಗಳ ಭಾಗಗಳಾಗಿಯೇ ಇವೆ. ರಾಮಾಯಣವು ಕಾವ್ಯಶೈಲಿಯಲ್ಲೇ ರಚಿತವಾಗಿ ಮಹಾಕಾವ್ಯಗಳಿಗೆ ಸನ್ನಿಹಿತವಾಗಿಯೇ ಇದ್ದರೂ ಮಹಾಭಾರತವು ತನ್ನ ಪ್ರಥಮವಾದ 'ಜಯಾಖ್ಯಾನ' ರೂಪ ತಾಳುವುದಕ್ಕಿಂತ ಮುಂಚಿತವಾಗಿಯೇ, ಅಂದರೆ ಕ್ರಿ.ಪೂ. 500ರ ವೇಳೆಗೆ, ಸಿದ್ಧವಾಗಿತ್ತೆಂದು ಹೇಳಬೇಕಾಗುತ್ತದೆ. ಇದಕ್ಕೆ ಕಾರಣಗಳನ್ನು ಈ ರೀತಿ ಸಂಗ್ರಹಿಸಬಹುದು—

೧. ರಾಮಾಯಣವೇ ಮಹಾಭಾರತಕ್ಕಿಂತ ಪ್ರಾಚೀನ ಎಂಬುದು ರೂಢಮೂಲವೂ ಪರಂಪರಾಗತವೂ ಆದ ಭಾರತೀಯ ಮತ.

೨ ಮಹಾಭಾರತದ ವೀರರ ವಿಚಾರ ರಾಮಾಯಣದಲ್ಲಿ ಬರುವುದಿಲ್ಲ. ಆದರೆ ರಾಮಾಯಣದ ಕಥೆ ಮಹಾಭಾರತದಲ್ಲಿ ಉಪಾಖ್ಯಾನವಾಗಿ ಬಂದಿದೆ.

೩. ಬೌದ್ಧ ಜಾತಕಗಳಲ್ಲಿ ಬರುವ ರಾಮನ ಕಥೆಗಳನ್ನು ಪರಿಶೀಲಿಸಿದರೆ ಅವುಗಳನ್ನು ರಚಿಸಿದವರಿಗೆ ವಾಲ್ಮೀಕಿರಾಮಾಯಣದ ಪರಿಚಯವಿತ್ತೆಂದು ಧಾರಾಳವಾಗಿ ಹೇಳಬಹುದು.



೪. ಕ್ರಿ. ಪೂ. 380ರಲ್ಲಿ ನಿರ್ಮಿತವಾದ ಪಾಟಲೀಪುತ್ರ ನಗರದ ಪ್ರದೇಶದಲ್ಲೇ ರಾಮ ಸಂಚರಿಸಿದ್ದರೂ ರಾಮಾಯಣದಲ್ಲಿ ಆ ಪಟ್ಟಣದ ಉಲ್ಲೇಖವಿಲ್ಲ. ತುಂಬ ಪ್ರಾಚೀನವಾದ ಕೌಶಾಂಬಿ ಮುಂತಾದ ನಗರಗಳ ಉಲ್ಲೇಖವಿದೆ.

೫. ರಾಮಾಯಣ ರಚಿತವಾಯಿತೆಂದು ಹೇಳಲಾಗುತ್ತಿರುವ ಪ್ರದೇಶದಲ್ಲಿ ಅಶೋಕಚಕ್ರವರ್ತಿಯ ಕಾಲದಲ್ಲಿ ಪ್ರಾಕೃತವೇ ಜನಸಾಮಾನ್ಯರ ಭಾಷೆಯಾಗಿತ್ತು. ಆದ್ದರಿಂದ ಪ್ರಾಕೃತಕ್ಕೆ ಇಷ್ಟು ಪ್ರಾಶಸ್ತ್ಯ ಬರುವುದಕ್ಕೆ ಹಿಂದೆಯೇ ಸಂಸ್ಕೃತ ರಾಮಾಯಣ ರಚಿತವಾಗಿದ್ದಿರಬೇಕು.

ಎ. ಬಿ. ಕೀತ್‌ರವರು ಕ್ರಿ. ಪೂ. 300 ರಲ್ಲಿ ರಾಮಾಯಣ ರಚಿತವಾಯಿತೆಂದು ಅಭಿಪ್ರಾಯಪಡುತ್ತಾರೆ.[50]

## ರಾಮಾಯಣದ ಪಾಠಭೇದಗಳು

ರಾಮಾಯಣದ ಮೂರು ವಿಭಿನ್ನ ಪಾಠಗಳು ಪ್ರಚಲಿತವಾಗಿವೆ— ೧. ಬೊಂಬಾಯಿ ಅಥವಾ ದಾಕ್ಷಿಣಾತ್ಯ ಪಾಠ ೨. ಬಂಗಾಳೀ ಪಾಠ ೩. ಕಾಶ್ಮೀರಿ ಪಾಠ. ಒಟ್ಟು ಗ್ರಂಥದಲ್ಲಿ ಮೂರನೆಯ ಒಂದು ಭಾಗದಷ್ಟು ಗಾತ್ರದಲ್ಲಿ ಈ ಪಾಠಬೇಧ ವ್ಯಾಪಿಸಿಕೊಂಡಿದೆ. ಸಾಮಾನ್ಯವಾಗಿ ಸರಿಹೋಗುವ ಭಾಗಗಳಲ್ಲೂ ಅಲ್ಪಸ್ವಲ್ಪ ವ್ಯತ್ಯಾಸವಿದ್ದೇ ಇದೆ. ಈ ಪಾಠಭೇದ ಬರಲು ಕಾರಣವನ್ನು ಆಧುನಿಕ ವಿಮರ್ಶಕರು ಹೀಗೆ ನಿರೂಪಿಸುತ್ತಾರೆ.—'ಮೊದಲು ರಾಮಾಯಣ ವಾಲ್ಮೀಕಿಯಿಂದ ಪ್ರಾಕೃತದಲ್ಲೇ ರಚಿತವಾಯಿತು. ಕಾಲಕ್ರಮದಲ್ಲಿ ಅದರ ಸಂಸ್ಕೃತಾನುವಾದ ಬೇರೆ ಬೇರೆ ಪ್ರಾಂತಗಳಲ್ಲಿ ರಚಿತವಾಗಿ ಬಳಕೆಗೆ ಬಂದುದರಿಂದ, ಅನುವಾದಕರ ಕೈವಾಡದ ಪರಿಣಾಮವಾಗಿ ರಾಮಾಯಣದ ಬೇರೆ ಬೇರೆ ಪಾಠಗಳು ರೂಢಿಗೆ ಬಂದಿರಬೇಕು.' ಇದು ಬರೀ ಊಹೆ. ಈ ವಾದಕ್ಕೆ ಆಧಾರವೇ ಇಲ್ಲ. ಹಿಂದೆ ಬರವಣಿಗೆ ರೂಢಿಯಲ್ಲಿಲ್ಲದ ಕಾಲದಲ್ಲಿ ರಾಮಾಯಣ ರಚಿತವಾಗಿ ಬಹಳ ವರ್ಷಗಳವರೆಗೆ ಪೌರಾಣಿಕರುಗಳಿಂದಲೇ ಕಂಠಪಾಠಪೂರ್ವಕವಾಗಿ ಪ್ರಚಲಿತವಾಗಿದ್ದುದರಿಂದ ಬೇರೆ ಬೇರೆ ದೇಶಗಳಲ್ಲಿ ಪಾಠಾಂತರಗೊಳ್ಳಲವಕಾಶವಾಯಿತೆಂದು ಹೇಳುವುದು ಸಾಧುವಾಗಬಹುದು.

---

50 ಬಿ. ಸಿ. ಜೋನ್ಸ್–ಕ್ರಿ. ಪೂ. 2022; ಹಾಮಿಲ್ಟನ್–950; ಟಾಡ್–1110.

## ರಾಮಾಯಣವೂ ಮಹಾಭಾರತವೂ

ರಾಮಾಯಣವು ಭರತಖಂಡದ ಪೂರ್ವಭಾಗದಲ್ಲಿ ಆಳಿದ ಸೂರ್ಯವಂಶದ ರಾಜರ ಹಿರಿಮೆಯನ್ನು ಎತ್ತಿಹಿಡಿಯುತ್ತದೆ ಇದು ವಾಲ್ಮೀಕಿಯೊಬ್ಬರಿಂದಲೇ ರಚಿತವಾದುದು. ಇದರಲ್ಲಿ ಪ್ರತಿಪಾದಿತವಾಗಿರುವುದು ಸರಣಿಬದ್ಧವಾದ ರಾಮನ ಆಖ್ಯಾನ; ವರ್ಣಿತವಾಗಿರುವ ಯುದ್ಧದಲ್ಲಿ ಹೊಡೆದಾಡುವವರು, ರಾಮಲಕ್ಷ್ಮಣರಿಬ್ಬರು ಮನುಷ್ಯರನ್ನು ಬಿಟ್ಟರೆ, ಒಂದು ಕಡೆ ವಾನರಾದಿ ಮೃಗಗಳು, ಮತ್ತೊಂದು ಕಡೆ ಬರೀ ರಾಕ್ಷಸರು. ಮಹಾಭಾರತವಾದರೋ ಮಧ್ಯದೇಶದಲ್ಲಿ ಆಳಿದ ಚಂದ್ರವಂಶದ ಅರಸರಿಗೆ ಸಂಬಂಧಿಸಿದ ಇತಿಹಾಸ. ಮೂಲಭಾರತವನ್ನು ವ್ಯಾಸರೇ ರಚಿಸಿದರಾದರೂ ಮುಂದೆ ಎರಡು ಬೇರೆ ಬೇರೆ ಘಟ್ಟಗಳಲ್ಲಿ ಅದು ಇತರರ ಕೈವಾಡಕ್ಕೊಳಗಾಗಿ ಬೆಳೆದು ನಿಂತಿರುವ ಬಲು ದೊಡ್ಡ ಗ್ರಂಥ. ಪ್ರಧಾನವಾಗಿ ಪಾಂಡವಕೌರವರ ಕಥೆಯೇ ಅದರಲ್ಲಿ ಪ್ರತಿಪಾದಿತವಾಗಿದ್ದರೂ ಅಸಂಖ್ಯಾತವಾದ ಉಪಾಖ್ಯಾನಗಳು ಸೇರಿಕೊಂಡು ಸರಣಿಬದ್ಧವಾಗಿಲ್ಲ.

ಶೈಲಿಯಲ್ಲೂ ಅಷ್ಟೇ. ರಾಮಾಯಣ ಇತಿಹಾಸವೇ ಆದರೂ ಕಾವ್ಯ ಶೈಲಿಯಲ್ಲಿ ರಚಿತವಾಗಿ ಆದಿಕಾವ್ಯವೆಂದು ಪ್ರಸಿದ್ಧಿ ಗಳಿಸಿದೆ. ಮಹಾಭಾರತವು ಪುರಾಣಗಳ ಶೈಲಿಯಲ್ಲಿ ರಚಿತವಾದ ಕಥಾಪ್ರಧಾನವಾದ ಇತಿಹಾಸ ಮಾತ್ರ. ರಾಮಾಯಣ ಮಹಾಭಾರತಗಳೆರಡೂ ಮುಂದಿನ ಕವಿಗಳಿಗೆ ಉಪಜೀವ್ಯಗಳಾಗಿದ್ದರೂ ರಾಮಾಯಣದ ಕಾವ್ಯಶೈಲಿಗೆ ಕಾಳಿದಾಸಾದಿ ಕವಿಗಳು ಮಾರುಹೋಗಿ ಅದರ ಅನುಕರಣವನ್ನೇ ತಮ್ಮ ಕಾವ್ಯಗಳಲ್ಲೂ ಮಾಡಿದ್ದಾರೆ. ಎರಡು ಗ್ರಂಥಗಳ ವಿಚಾರದಲ್ಲೂ ಜನಸಾಮಾನ್ಯರಿಗೆ ಪವಿತ್ರಭಾವನೆಯಿದ್ದು ಆಸೇತು ಹಿಮಾಚಲದವರೆಗೆ ಅವುಗಳ ಪಾರಾಯಣ ಪ್ರವಚನಗಳು ಇಂದಿಗೂ ನಡೆಯುತ್ತಿವೆ. ಅವುಗಳಲ್ಲಿ ಬರುವ ವೀರರು ಆದರ್ಶಪುರುಷರೆಂದು ಪರಿಗಣಿತರಾಗಿದ್ದಾರೆ. ರಾಮಕೃಷ್ಣಾದಿಗಳ ಲೋಕೋತ್ತರ ಚರಿತಗಳು ಅವರು ಅವತಾರ ಪುರುಷರು ಎಂಬ ಭಾವನೆ ರೂಢಮೂಲವಾಗುವಂತೆ ಮಾಡಿವೆ. ಈ ಎರಡೂ ಗ್ರಂಥಗಳ ಪ್ರಭಾವ ಜನಜೀವನದಮೇಲೆ ಎಷ್ಟರಮಟ್ಟಿಗೆ ಈಗಲೂ ಇದೆ ಎಂಬುದನ್ನು ವರ್ಣಿಸಿ ಹೇಳಲು ಪ್ರಾಯಃ ಯಾರಿಗೂ ಸಾಧ್ಯವಾಗಲಾರದು.

ರಾಮಾಯಣ ಸುಂದರವಾದ, ಲಲಿತವಾದ, ರಸಭಾವಭರಿತವಾದ, ಅಮೋಘವಾದ ಕಾವ್ಯ. ಮಹಾಭಾರತ ಸ್ವಾರಸ್ಯವಾದ, ನೀತಿಬೋಧಕವಾದ



ಅನೇಕಬಗೆಯ ಉಪಾಖ್ಯಾನಗಳಿಂದ ವಿಸ್ತಾರವಾಗಿ ಬೆಳೆದುಬಂದಿರುವ ಪ್ರಭಾವಶಾಲಿಯಾದ ಇತಿಹಾಸ. ಆದರೂ ಎರಡೂ ನಮ್ಮ[51] ಧರ್ಮಗ್ರಂಥಗಳೇ ಎಂದು ಸರ್ವತ್ರ ಪರಿಗಣಿತವಾಗಿವೆ. ರಾಮಾಯಣ ಮಹಾಭಾರತ ಎರಡೂ ನಮ್ಮ ನಾಡಿನ ವಿಭಿನ್ನ ಜನರಲ್ಲಿ ಏಕೀಭಾವವನ್ನು ಮೂಡಿಸುವ ರಾಷ್ಟ್ರೀಯ ಗ್ರಂಥಗಳು. ಎರಡರಲ್ಲೂ ಆಸೇತು ಹಿಮಾಚಲದವರೆಗಿನ ಎಲ್ಲ ಪ್ರಾಂತಗಳ ಎಲ್ಲ ಬಗೆಯ ಜನರ ಪ್ರಸ್ತಾಪವಿದೆ. ಅನೇಕ ರೀತಿಯಲ್ಲಿ ಭಾರತವು ಹಿಂದಿನಿಂದಲೂ ಸುಸಂಘಟಿತವಾಗಿದ್ದ ಬೃಹದ್‌ರಾಷ್ಟ್ರವೇ ಎಂಬ ಭಾವನೆ ಈ ಗ್ರಂಥಗಳನ್ನು ಓದಿದವರೆಲ್ಲರ ಮನಸ್ಸಿನಲ್ಲೂ ಬಂದೇಬರುತ್ತದೆ. ಈಗಲೂ ಎಲ್ಲಿದ್ದರೂ ನಾವೆಲ್ಲ ಒಂದೇ ರಾಷ್ಟ್ರದ ಪ್ರಜೆಗಳೇ ಎಂಬುದನ್ನು ನಮ್ಮ ಸ್ಮೃತಿಪಥದಲ್ಲಿ ಅಚ್ಚಳಿಯದಂತೆ ಉಳಿಸಲು ಸಮರ್ಥವಾಗಿರುವ ಗ್ರಂಥಗಳೂ ಇವೇ. ಆದ್ದರಿಂದಲೇ ಇವುಗಳನ್ನು ರಚಿಸಿದ ವ್ಯಾಸವಾಲ್ಮೀಕಿಗಳು ಭಾರತದ ರಾಷ್ಟ್ರೀಯ ಕವಿಗಳ ಪಂಕ್ತಿಯಲ್ಲಿ ಅಗ್ರಸ್ಥಾನವನ್ನು ಪಡೆದಿದ್ದಾರೆ.

ಮಹಾಭಾರತದಂತೆಯೇ ರಾಮಾಯಣವೂ ಭಾರತೀಯ ಭಾಷೆಗಳಿಗೂ ಮತ್ತು ಅನ್ಯದೇಶೀಯ ಭಾಷೆಗಳಿಗೂ ಪರಿವರ್ತಿತವಾಗಿದೆ. ರಾಮಾಯಣದ ಕಥೆಯ ಆಧಾರದಮೇಲೆ ಕಾವ್ಯನಾಟಕಗಳು ಅಸಂಖ್ಯಾತವಾಗಿ ರಚಿತವಾಗಿವೆ. ರಾಮಾಯಣದ ಪಾರಾಯಣ ಪ್ರವಚನಗಳು ನಮ್ಮ ನಾಡಿನ ಎಲ್ಲಕಡೆಯೂ ಇಂದಿಗೂ ಅವಿಚ್ಛಿನ್ನವಾಗಿ ನಡೆಯುತ್ತಲೇ ಇವೆ.

'ಭೂಮಿಯಮೇಲೆ ಬೆಟ್ಟಗಳೂ ನದಿಗಳೂ ಎಲ್ಲಿಯವರೆಗೆ ಇರುತ್ತವೋ ಅಲ್ಲಿಯವರೆಗೂ ಲೋಕದಲ್ಲಿ ರಾಮಾಯಣದ ಕಥೆ ಪ್ರಚರಿತವಾಗಿರುತ್ತದೆ'[52] —ಎಂಬ ಬ್ರಹ್ಮನ ಭವಿಷ್ಯವಾಣಿ ಅಂದಿನಿಂದ ಇಂದಿನವರೆಗೆ ಎಂಟು ಒಂಭತ್ತು

---

51 ಈ ಗ್ರಂಥದಲ್ಲಿ ಧರ್ಮವನ್ನು ಪ್ರತಿಪಾದಿಸಿರುವ ಸರಣಿ ಗಮನಾರ್ಹ—

ಊರ್ಧ್ವಬಾಹುರ್ವಿರೌಮ್ಯೇಷ ನ ಚ ಕಶ್ಚಿಚ್ಛೃಣೋತಿ ಮೇ।
ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನ ಸೇವ್ಯತೇ॥
ನ ಜಾತು ಕಾಮಾನ್ನ ಭಯಾನ್ನ ಲೋಭಾತ್ ಧರ್ಮಂ ತ್ಯಜೇಜ್ಜೀವಿತಸ್ಯಾಪಿ ಹೇತೋಃ।
ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ॥
— ಮಹಾಭಾರತ, ಸ್ವರ್ಗಾರೋಹಣಪರ್ವ, ಅ. ೫, ಶ್ಲೋಕ ೭೫-೭೬

ಧರ್ಮಾದರ್ಥಃ ಪ್ರಭವತಿ ಧರ್ಮಾತ್ಪ್ರಭವತೇ ಸುಖಂ।
ಧರ್ಮೇಣ ಲಭತೇ ಸರ್ವಂ ಧರ್ಮಸಾರಮಿದಂ ಜಗತ್॥–ರಾಮಾಯಣ–iii 9-30.

52 ಯಾವತ್‌ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ।
ತಾವದ್ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ॥—ರಾಮಾ. 1-2-36.

## ಅಧ್ಯಾಯ ೩

### ಮಹಾಕಾವ್ಯಗಳು

ರಾಮಾಯಣ ಮಹಾಭಾರತಾದಿಗಳೇನೋ ಜನಸಾಮಾನ್ಯಕ್ಕೇ ಆದರಣೀಯವಾಗಿವೆ. ಆದರೆ ರಾಮಾಯಣವು ಆದಿಕಾವ್ಯವಾಗಿ ರಚಿತವಾದ ಮೇಲೆ ಮುಂದೆ ಯಾವರೀತಿಯ ಕಾವ್ಯಗಳು ರಚಿತವಾದುವೋ ಹೇಳಲಾಗುವುದಿಲ್ಲವಾದರೂ ಕಾಲಕ್ರಮದಲ್ಲಿ ಕಾವ್ಯಶೈಲಿ ಕೇವಲ ಪಂಡಿತರಿಗೆ ಮಾತ್ರ ವಿಷಯಲಾಗಿಬಿಟ್ಟಂತೆ ಕಾಣುತ್ತದೆ. ಈಗ ಉಪಲಬ್ಧವಾಗಿರುವ ಕಾವ್ಯಗಳಲ್ಲಿ ಪ್ರಾಯಃ ಕಾಳಿದಾಸನ ಕಾವ್ಯಗಳೇ ಅತ್ಯಂತ ಪ್ರಾಚೀನ. ಅವುಗಳನ್ನೂ ಅಲ್ಲಿಂದೀಚಿನ ಕಾವ್ಯಗಳನ್ನೂ ಪರಿಶೀಲಿಸಿದರೆ ಕಾವ್ಯರಚನೆಯಲ್ಲಿ ಕಥೆಗೆ ಪ್ರಾಧಾನ್ಯವಿಲ್ಲ; ನಿಯಮಬದ್ಧ ರಚನೆಗೆ, ವರ್ಣನೆಗೆ, ಪ್ರತಿಭಾ ಪ್ರದರ್ಶನಕ್ಕೆ ವಿಶೇಷ ಮಹತ್ವ ಎಂಬುದನ್ನು ಮನಗಾಣಬಹುದು. ಕ್ರಮೇಣ ಅನುಷ್ಟುಪ್ ಶ್ಲೋಕದ ಬಳಕೆ ತಪ್ಪಿಹೋಗಿ ಬೇರೆ ಬೇರೆ ವೃತ್ತಗಳಲ್ಲೇ ಕಾವ್ಯರಚನೆಯಾಗತೊಡಗಿದ್ದಲ್ಲದೆ, ಪಾಂಡಿತ್ಯ ಮತ್ತು ಶಬ್ದಪ್ರಯೋಗದ ಚಮತ್ಕಾರಗಳ ಪ್ರದರ್ಶನವೇ ಅದರ ಮುಖ್ಯೋದ್ದೇಶವಾಗಿಬಿಟ್ಟಿತು.

ಕವೇಃ ಕರ್ಮ ಕಾವ್ಯಂ; ಕವಿಯು ರಚಿಸಿದುದು ಕಾವ್ಯ. ಇಂತಹ ರಚನೆ 'ಶ್ರವ್ಯ'ವಾಗಿರಬಹುದು, 'ದೃಶ್ಯ'ವಾಗಿಯೂ ಇರಬಹುದು. ದೃಶ್ಯಕಾವ್ಯಗಳು ನಾಟಕಾದಿ ರೂಪಕಗಳು. ಶ್ರವ್ಯಕಾವ್ಯಗಳು ಪದ್ಯದಲ್ಲೂ, ಗದ್ಯದಲ್ಲೂ, ಪದ್ಯಮಿಶ್ರಿತವಾದ ಗದ್ಯದಲ್ಲೂ ರಚಿತವಾದ ಪ್ರಬಂಧಗಳು. ಪದ್ಯಕಾವ್ಯಗಳಲ್ಲಿ ಅವುಗಳ ದೈರ್ಘ್ಯಕ್ಕನುಗುಣವಾಗಿ ಮಹಾಕಾವ್ಯ, ಖಂಡಕಾವ್ಯ ಎಂಬ ಪ್ರಭೇದಗಳಿವೆ. ಪದ್ಯಕಾವ್ಯಗಳೆಲ್ಲಾ ಪ್ರಾಯಃ ರಾಮಾಯಣದ ಕಾವ್ಯಶೈಲಿಯಲ್ಲೇ ರಚಿತವಾದುವು.

### ೧. ಕಾಳಿದಾಸನಿಗಿಂತ ಹಿಂದಿನ ಕವಿಗಳು

ಸಂಸ್ಕೃತ ಕಾವ್ಯಸಾಹಿತ್ಯ ಕಾಳಿದಾಸನಿಗಿಂತ ಎಷ್ಟೋ ಹಿಂದಿನಕಾಲದಿಂದ ಬೆಳೆದುಬಂದಿತ್ತೆಂಬುದರಲ್ಲಿ ಸಂದೇಹವಿಲ್ಲ. ಆದರೆ ಅಂತಹ ಪ್ರಾಚೀನ ಕಾವ್ಯಗಳು ಯಾವುವೂ ಈಗ ಉಪಲಬ್ಧವಾಗಿಲ್ಲದಿರುವುದು ನಮ್ಮ ದುರ್ದೈವ. ಯಾಸ್ಕರು ತಮ್ಮ ನಿರುಕ್ತದಲ್ಲಿ ಉಪಮೆ ಮತ್ತು ಅದರ ಪ್ರಭೇದಗಳ ಪ್ರಸ್ತಾಪ



ಮಾಡಿ ಗಾರ್ಗ್ಯರ ಉಪಮಾಲಕ್ಷಣವನ್ನು ಉದಹರಿಸುತ್ತಾರೆ. ಯಾಸ್ಕರಿಗಿಂತ ಈಚಿನವರು ಪಾಣಿನಿ. ಇವರ ಕಾಲವನ್ನು ಕ್ರಿ.ಪೂ. ೪ನೆಯ ಶತಮಾನವೆಂದು ಸ್ಥೂಲವಾಗಿ ಹೇಳಲಾಗುತ್ತಿದೆ. ಇವರು **ಅಷ್ಟಾಧ್ಯಾಯಿ** ಎಂಬ ವ್ಯಾಕರಣವನ್ನು ರಚಿಸಿದ ಮೇಲೆ **ಪಾತಾಳವಿಜಯಂ** ಅಥವಾ **ಜಾಂಬವತೀಜಯಂ**[1] ಎಂಬ ಕಾವ್ಯ ರಚಿಸಿರುವುದಾಗಿ ಸುಭಾಷಿತಗ್ರಂಥಗಳಿಂದ ತಿಳಿದುಬರುತ್ತದೆ. ಪಾಣಿನಿಯ ಸಮಕಾಲೀನರೂ ಪಾಣಿನಿಯ ಅಷ್ಟಾಧ್ಯಾಯಿಗೆ ವಾರ್ತಿಕಗಳನ್ನು ಬರೆದು ಪ್ರಸಿದ್ಧಿಪಡೆದಿರುವವರೂ 'ಕಾತ್ಯಾಯನ' ಎಂಬ ಮತ್ತೊಂದು ಹೆಸರುಳ್ಳವರೂ ಆದ ವರರುಚಿಯೂ **ವಾರರುಚಂ ಕಾವ್ಯಂ** ಎಂಬ ಒಂದು ಮಹಾಕಾವ್ಯವನ್ನೂ, **ಚಾರುಮತೀ** ಎಂಬ ಒಂದು (ಗದ್ಯ) ಆಖ್ಯಾಯಿಕೆಯನ್ನೂ ಸೂಕ್ತಿಗ್ರಂಥಗಳಲ್ಲಿ ಉದ್ಧೃತವಾಗಿರುವ ಅನೇಕ ಬಿಡಿ ಶ್ಲೋಕಗಳನ್ನೂ ಬರೆದಿದ್ದಾರೆ. ಇವರಿಗಿಂತ ಅರ್ವಾಚೀನರು ಪತಂಜಲಿ. ಇವರು ರಚಿಸಿರುವ ವ್ಯಾಕರಣಮಹಾಭಾಷ್ಯದಲ್ಲಿ ಅನೇಕ ಕಾವ್ಯಗಳ, ಆಖ್ಯಾಯಿಕೆಗಳ, ಮತ್ತು [2]ಕಂಸವಧ, ಬಲಿಬಂಧ ಮುಂತಾದ ನಾಟಕಗಳ ಉಲ್ಲೇಖವಿದೆ. ಕಾವ್ಯಶೈಲಿಯೇ ಪ್ರವರ್ಧಮಾನವಾಗಿ ಬೆಳೆದು ನಾಟಕರಚನೆಗೆ ದಾರಿಮಾಡಿಕೊಟ್ಟಿತೆಂಬುದರಲ್ಲಿ ಸಂದೇಹವಿಲ್ಲ. ಕಾಳಿದಾಸನೂ ತನಗಿಂತ ಪ್ರಾಚೀನರಾಗಿದ್ದ ಭಾಸ, ಸೌಮಿಲ್ಲ, ಕವಿಪುತ್ರಾದಿ ನಾಟಕಕರ್ತರನ್ನು ಕೊಂಡಾಡಿದ್ದಾನೆ. ಇದನ್ನೆಲ್ಲ ಗಮನಿಸಿದರೆ ಸಂಸ್ಕೃತದಲ್ಲಿ ಕಾವ್ಯಗಳ ರಚನೆ ಕಾಳಿದಾಸನಿಗಿಂತ ತುಂಬ ಪ್ರಾಚೀನ ಕಾಲದಿಂದ ಬಳಕೆಯಲ್ಲಿತ್ತೆಂಬುದು ಸಿದ್ಧವಾಗುತ್ತದೆ. ಕಾಳಿದಾಸನ ಅತ್ಯುತ್ತಮ ಕಾವ್ಯಗಳು ಹೊರಬಂದಮೇಲೆ, ಇವೆಲ್ಲಾ ಹಿಂದೆಬಿದ್ದು ಲುಪ್ತವಾಗಿಬಿಟ್ಟಿರಬೇಕು. ಕಾಳಿದಾಸನಿಗಿಂತ ಬಹಳ ಪ್ರಾಚೀನವಾದ ವಾತ್ಸಾಯನರಚಿತ ಕಾಮಸೂತ್ರಗಳ ಪ್ರಭಾವ ಸಂಸ್ಕೃತದಲ್ಲಿ ರಚಿತವಾಗಿ ಉಪಲಬ್ಧವಾಗಿರುವ ಎಲ್ಲ ಶೃಂಗಾರ ಕಾವ್ಯಗಳ ಮೇಲೂ ಸ್ಪಷ್ಟವಾಗಿ ಗೋಚರಿ

---

1 ಸ್ವಸ್ತಿ ಪಾಣಿನಯೇ ತಸ್ಮೈ ಯಸ್ಯ ರುದ್ರಪ್ರಸಾದತಃ ।
ಆದೌ ವ್ಯಾಕರಣಂ ಕಾವ್ಯಂ ಅನು ಜಾಂಬವತೀಜಯಂ ॥— ರಾಜಶೇಖರ.

ಇದಕ್ಕೆ ಜಾಂಬವತೀಹರಣಂ, ಜಾಂಬವತೀವಿಜಯಂ ಎಂಬ ಬೇರೆ ಬೇರೆ ಹೆಸರುಗಳಿದ್ದುವೆಂದು ತಿಳಿದುಬರುತ್ತದೆ. ಕೆಲವು ವಿದ್ವಾಂಸರು ಪಾತಾಳವಿಜಯಂ ಮತ್ತು ಜಾಂಬವತೀಜಯಂ ಎರಡೂ ಒಂದೇ ಕಾವ್ಯವಲ್ಲ. ಬೇರೆ ಬೇರೆ ಎಂದು ಅಭಿಪ್ರಾಯಪಡುತ್ತಾರೆ.

2 ಈ ಕಂಸವಧ, ಬಲಿಬಂಧ ನಾಟಕಗಳು ಪಾಣಿನಿರಚಿತವೆಂಬ ಪ್ರಸಿದ್ಧಿಯಿದೆ.

ಸುತ್ತಿರುವುದೂ ಸಂಸ್ಕೃತದಲ್ಲಿ ಕಾವ್ಯರಚನೆ ತುಂಬ ಹಿಂದಿನದು ಎಂಬುದನ್ನೇ ಸಮರ್ಥಿಸುತ್ತದೆ.

### ಶಾಸನಗಳು

ಹಿಂದಿನ ಕಾಲದ ಶಾಸನಗಳೂ ಶುದ್ಧವಾದ ಕಾವ್ಯಶೈಲಿಯಲ್ಲೇ ರಚಿತವಾಗಿರುವುದು ಗಮನಾರ್ಹ. ಕಾಳಿದಾಸನ ಕಾಲನಿರ್ಣಯಕ್ಕೆ ಈ ಶಾಸನಗಳ ಆಧಾರವೂ ಬೇಕಾಗಿರುವುದರಿಂದ ಇಲ್ಲಿ ಕೆಲವು ಶಾಸನಗಳ ವಿಚಾರ ಮಾಡಲಾಗಿದೆ.

**ಗಿರ್ನಾರ್ ಶಾಸನ**—ಕ್ರಿ.ಶ. ೧೫೦ರಲ್ಲಿ ಆದ ಸುದರ್ಶನ ತಟಾಕದ ಜೀರ್ಣೋದ್ಧಾರವನ್ನು ಈ ಗಿರ್ನಾರ್ ಶಾಸನ ಉಲ್ಲೇಖಿಸುತ್ತದೆ; ಇದು ಮಹಾಕ್ಷತ್ರಪ ರುದ್ರದಾಮನ ಪ್ರಶಸ್ತಿ. ಗದ್ಯದಲ್ಲಿರುವ ಈ ಶಾಸನವು ಪುರಾಣೇತಿಹಾಸಗಳ ಶೈಲಿಯೇ ಕಾವ್ಯಶೈಲಿಯಾಗಿ ಹೇಗೆ ಕ್ರಮಕ್ರಮವಾಗಿ ಮಾರ್ಪಟ್ಟಿರಬೇಕೆಂಬುದನ್ನು ಸೂಚಿಸುತ್ತದೆ. ಇದರಲ್ಲಿ ಬರುವ ವರ್ಣನೆಗಳು ಸ್ತುತ್ಯರೀತಿಯಲ್ಲಿವೆ. ಸುದೀರ್ಘವಾದ ಸಮಸ್ತ ಪದಗಳೂ ಶಬ್ದಾಲಂಕಾರಗಳೂ ಅರ್ಥಾಲಂಕಾರಗಳೂ ಹೇರಳವಾಗಿವೆ. ಇದನ್ನೆಲ್ಲಾ ಪರಿಶೀಲಿಸಿದರೆ ಈ ಶಾಸನ ಬರೆದ ಕವಿಗೆ ಅಲಂಕಾರಶಾಸ್ತ್ರದ ನಿಯಮಗಳ ಪರಿಚಯ ಚೆನ್ನಾಗಿದ್ದು, ಅವುಗಳನ್ನು ಚಾಚೂ ತಪ್ಪದೆ ಅವನು ಪಾಲಿಸುತ್ತಿದ್ದನೆಂಬುದನ್ನು ಮನಗಾಣಬಹುದು.

**ನಾಸಿಕ್ ಶಾಸನ**—ನಾಸಿಕ್ ಶಾಸನವು ಪ್ರಾಕೃತಗದ್ಯದಲ್ಲಿದ್ದರೂ ಅದನ್ನು ಬರೆದ ಕವಿಗೆ ಸಂಸ್ಕೃತದ ಪರಿಚಯ ಚೆನ್ನಾಗಿತ್ತೆಂದು ಧಾರಾಳವಾಗಿ ಹೇಳಬಹುದು. ಸೂಕ್ಷ್ಮವಾಗಿ ನೋಡಿದರೆ ಅದು ಸಂಸ್ಕೃತದಲ್ಲಿ ಮೊದಲು ಬರೆದಿದ್ದುದರ ಪ್ರಾಕೃತಾನುವಾದವೇ ಎಂಬುದು ಸ್ಪಷ್ಟವಾಗುತ್ತದೆ. ಅದು ಗೋದಾವರೀ ತೀರದಲ್ಲಿರುವ ಪ್ರತಿಷ್ಠಾನದ ಸಿರಿ ಪುಲುಮಾಯಿಯ ಸ್ತೋತ್ರಾತ್ಮಕವಾಗಿದೆ. ಇದೂ ಗಿರ್ನಾರ್ ಶಾಸನವೂ ಒಂದೇ ಕಾಲದಲ್ಲೇ ಬರೆದುದು. ಈ ಶಾಸನದ ಮೊದಲವಾಕ್ಯವೇ ಎಂಟೂವರೆ ಪಂಕ್ತಿಯಷ್ಟು ಉದ್ದವಾಗಿದ್ದು ಸಮಸ್ತ ಪದಗಳಿಂದ ತುಂಬಿದೆ. ಈಚಿನ ಕಾವ್ಯಶೈಲಿಯ ಎಲ್ಲ ಚಾಳಿಗಳೂ ಈ ಶಾಸನಗಳಲ್ಲಿ ಕಂಡುಬರುತ್ತವೆ. ಇದನ್ನು ಗಮನಿಸಿದರೆ ಇದರ ರಚನೆಗಿಂತ ಬಹಳ ಹಿಂದೆಯೇ ಸಾಹಿತ್ಯ (ಅಲಂಕಾರ) ಶಾಸ್ತ್ರ ನಿಯಮಗಳು ಬಳಕೆಯಲ್ಲಿದ್ದಿರಬೇಕೆಂಬುದು ಸಿದ್ಧವಾಗುತ್ತದೆ.



**ಹರಿಷೇಣ ಅಥವಾ ಅಲಹಾಬಾದ್ ಶಾಸನ**—ಈ ಅಲಹಾಬಾದ್ ಶಾಸನವು ಅಲಹಾಬಾದಿನಲ್ಲಿರುವ ಒಂದು ಸ್ತೂಪದಮೇಲೆ ಕೆತ್ತಲ್ಪಟ್ಟಿದೆ. ಇದನ್ನು ರಚಿಸಿದ ಹರಿಷೇಣನು ಸಮುದ್ರಗುಪ್ತನ (ಕ್ರಿ.ಶ. ೩೫೦)ಆಸ್ಥಾನ ಕವಿ; ತನ್ನ ಆಶ್ರಯದಾತನಾದ ಸಮುದ್ರಗುಪ್ತನನ್ನು ಈ ಶಾಸನದಲ್ಲಿ ಕೊಂಡಾಡಿದ್ದಾನೆ. ಸಮುದ್ರಗುಪ್ತನು ಸ್ವತಃ ಕವಿಯಾಗಿದ್ದನೆಂದೂ ಅವನಿಗೆ ಕವಿರಾಜನೆಂಬ ಬಿರುದಿತ್ತೆಂದೂ ಇದರಿಂದ ತಿಳಿಯುತ್ತದೆ. ಈ ಶಾಸನದಲ್ಲಿ ಒಟ್ಟು ೩೦ ಪಾದಗಳ ೯ ಪದ್ಯಗಳೂ ೩೦ ಗದ್ಯ ಪಂಕ್ತಿಗಳೂ ಇವೆ. ಪದ್ಯಗಳ ಶೈಲಿ ಕಾಳಿದಾಸನ ಕಾವ್ಯಶೈಲಿಯನ್ನು ಸರಿಗಟ್ಟುತ್ತದೆ. ಗದ್ಯ ಸಮಸ್ತಪದಗಳಿಂದ ತುಂಬಿದೆ.

**ವತ್ಸಭಟ್ಟಿಯ ಮಂಡಸಾರ್ ಶಾಸನ**--ದಶಪುರ ಅಂದರೆ ಈಗಿನ ಮಂಡಸಾರ್‌ನಲ್ಲಿ ಕ್ರಿ. ಶ. ೪೭೩ ರಲ್ಲಿ ಸೂರ್ಯದೇವಾಲಯ ನಿರ್ಮಿತವಾದ ಸಂದರ್ಭದಲ್ಲಿ ವತ್ಸಭಟ್ಟಿಯಿಂದ ರಚಿತವಾದ ಈ ಶಾಸನದಲ್ಲಿ ೪೪ ಪದ್ಯಗಳಿವೆ. ಎಲ್ಲ ಪದ್ಯಗಳೂ ಸೊಗಸಾದ ಕಾವ್ಯಶೈಲಿಯಲ್ಲಿವೆ; ಕಾಳಿದಾಸನ ಮೇಘದೂತ ಋತುಸಂಹಾರಗಳ ಪದ್ಯಗಳನ್ನು ಅನೇಕ ಬಗೆಯಲ್ಲಿ ಹೋಲುತ್ತವೆ. ಆದ್ದರಿಂದಲೇ ಕೆಲ ವಿದ್ವಾಂಸರು ವತ್ಸಭಟ್ಟಿಯು ಕಾಳಿದಾಸನ ಕಾವ್ಯಗಳ ಅನುಕರಣ ಮಾಡಿರುವುದೇ ಖಚಿತವೆಂದೂ ಕಾಳಿದಾಸನೂ ವತ್ಸಭಟ್ಟಿಗಿಂತ ಪ್ರಾಚೀನನೆಂಬುದರಲ್ಲಿ ಸಂಶಯವಿಲ್ಲವೆಂದೂ ಅಭಿಪ್ರಾಯಪಡುತ್ತಾರೆ.

ಕ್ರಿ.ಶ. ೪೭೭ರ ಮಹಾನಾಮನ **ಬುದ್ಧಗಯಾ** ಶಾಸನವೂ ಕ್ರಿ.ಶ. ೬೩೪ರ ನೆಯ ಪುಲಿಕೇಶಿಯ **ಐಹೊಳೆ** ಶಾಸನವೂ ಕಾಳಿದಾಸನ ಹೆಸರನ್ನು ವಾಚ್ಯವಾಗಿಯೇ ಉಲ್ಲೇಖಿಸುತ್ತವೆ.

## ೨. ಕಾಳಿದಾಸ

[ಕಾಲ—ಕ್ರಿ.ಪೂ. ೧ನೇ ಶತಮಾನ?—ಕ್ರಿ.ಶ. ೫ನೇ ಶತಮಾನ? ಗ್ರಂಥಗಳು: ಮಹಾಕಾವ್ಯಗಳು ಎರಡು—ರಘುವಂಶ, ಕುಮಾರಸಂಭವ. ಖಂಡಕಾವ್ಯಗಳು ಎರಡು — ಮೇಘದೂತ, ಋತುಸಂಹಾರ. ನಾಟಕಗಳು ಮೂರು — ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನಶಾಕುಂತಲ]

### ಕಾಳಿದಾಸನ ಕಾಲ

ಕಾಳಿದಾಸನ ಕಾಲದ ವಿಚಾರದಲ್ಲಿ ಈವರೆಗೆ ಬೇಕಾದಷ್ಟು ಸಂಶೋಧನೆ ನಡೆದಿದ್ದರೂ ಖಚಿತವಾದ ತೀರ್ಮಾನಕ್ಕೆ ಬರಲು ಸಾಧ್ಯವಾಗಿಲ್ಲ.

ಕ್ರಿ ಪೂ. ೮ನೆಯ ಶತಮಾನದಿಂದ ಕ್ರಿ ಶ. ೧೧ನೆಯ ಶತಮಾನದವರೆಗೆ ಬೇರೆ ಬೇರೆ ಕಾಲಗಳಲ್ಲಿ ಕಾಳಿದಾಸನಿದ್ದಿರಬೇಕೆಂದೂ ಒಬ್ಬೊಬ್ಬರೂ ತಮ್ಮತಮ್ಮ ಅಭಿಪ್ರಾಯವನ್ನೇ ಸಮರ್ಥಿಸಿ ವಾದಮಾಡಿದ್ದಾರೆ. ಆ ಪೈಕಿ ಮುಖ್ಯವಾದ ಕೆಲವನ್ನು ಇಲ್ಲಿ ನಿರೂಪಿಸಲಾಗಿದೆ.—

೧) **ಕ್ರಿ.ಪೂ. ೮ನೆಯ ಶತಮಾನ**—ಅಗ್ನಿವರ್ಣನ ಮರಣಾನಂತರ ಜನಿಸುವ ಅವನ ಮಗನ ಪ್ರಸ್ತಾಪದೊಡನೆ ರಘುವಂಶ ಮುಗಿದಿರುವುದರಿಂದ ಕಾಳಿದಾಸನು ಕ್ರಿ ಪೂ. ೮ ನೆಯ ಶತಮಾನದ ಅಗ್ನಿವರ್ಣನ ಸಮಕಾಲೀನನೆಂಬುದು ಹಿಪ್ಪೊಲೈಟ್ ಫಾಂಷೆಯ ಮತ.

೨) **ಕ್ರಿ.ಪೂ. ೨ನೆಯ ಶತಮಾನ**—ಮಾಳವಿಕಾಗ್ನಿಮಿತ್ರ ನಾಟಕವು ಶುಂಗವಂಶದ ಅಗ್ನಿಮಿತ್ರನನ್ನೇ ನಾಯಕನನ್ನಾಗಿಟ್ಟು ರಚಿತವಾಗಿರುವುದರಿಂದಲೂ ಮತ್ತು ಪುಷ್ಯಮಿತ್ರನ ಅಶ್ವಮೇಧಯಾಗದ ಪ್ರಸ್ತಾಪವೂ ಆ ನಾಟಕದಲ್ಲಿ ಬರುವುದರಿಂದಲೂ ಕಾಳಿದಾಸನು ಶುಂಗವಂಶದ ಅಗ್ನಿಮಿತ್ರನ (೨ನೆಯ ಶತಮಾನ) ಸಮಕಾಲೀನನೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

೩) **ಕ್ರಿ.ಪೂ. ೧ನೆಯ ಶತಮಾನ**—ಭಾರತೀಯ ಸಾಂಪ್ರದಾಯಿಕ ಮತದ ಪ್ರಕಾರ ಕಾಳಿದಾಸ ಶಕಪುರುಷ ವಿಕ್ರಮಾದಿತ್ಯನ ಆಸ್ಥಾನದ[3] ನವಮಣಿಗಳಲ್ಲೊಬ್ಬ. ವಿಕ್ರಮಶಕೆ ಕ್ರಿ.ಪೂ. ೫೭ರಲ್ಲಿ ಆರಂಭವಾಯಿತು. ಆದ್ದರಿಂದ ಕಾಳಿದಾಸನೂ ಕ್ರಿ ಪೂ. ೧ನೆಯ ಶತಮಾನದವನಾಗಿರಬೇಕು ಎಂದೇ ಕೆಲವು ಆಧುನಿಕ ವಿದ್ವಾಂಸರೂ ಅನೇಕ ಇತರ ಕಾರಣಗಳೊಡನೆ ಸಮರ್ಥಿಸುತ್ತಾರೆ.

೪) **ಕ್ರಿ.ಶ. ೫ನೆಯ ಶತಮಾನ** (ಗುಪ್ತರ ಕಾಲದವನು)—ಕಾಳಿದಾಸನು ಉಜ್ಜಯಿನಿಯ ಎರಡನೇ ಚಂದ್ರಗುಪ್ತನ ಕಾಲದವನೆಂದೂ ಈ ಚಂದ್ರಗುಪ್ತನು ಕ್ರಿ ಶ. ೩೯೫ ರಲ್ಲಿ ಶಕರನ್ನು ಜಯಿಸಿ ವಿಕ್ರಮಾದಿತ್ಯ ಎಂಬ ಬಿರುದನ್ನು ಪಡೆದಿದ್ದನೆಂದೂ ವಿಕ್ರಮೋರ್ವಶೀಯ ನಾಟಕದ ಹೆಸರಿನಲ್ಲಿನ 'ವಿಕ್ರಮ'ನು ಈ ಚಂದ್ರಗುಪ್ತ 'ವಿಕ್ರಮಾದಿತ್ಯ'ನೇ ಎಂದೂ ಈ ರಾಜನಿಗೆ

3 ಧನ್ವಂತರಿ ಕ್ಷಪಣಕ+ಅಮರಸಿಂಹ ಶಂಕು ವೇತಾಲಭಟ್ಟ ಘಟಕರ್ಪರ ಕಾಲಿದಾಸಾಃ।
ಖ್ಯಾತೋ ವರಾಹಮಿಹಿರೋನೃಪತೇಃ ಸಭಾಯಾಂ ರತ್ನಾನಿ ವೈವರರುಚಿರ್ನವ ವಿಕ್ರಮಸ್ಯ॥



ಕುಮಾರಗುಪ್ತನೆಂಬ ಕುಮಾರನು ಜನಿಸಿದುದನ್ನೇ ಅಧಿಕರಿಸಿ ಕುಮಾರಸಂಭವ ರಚಿತವಾಗಿರಬೇಕೆಂದೂ ಈ ಕಾರಣಗಳಿಂದ ಕಾಳಿದಾಸನು ಕ್ರಿ ಶ. ೪೦೦ಕ್ಕಿಂತ ಈಚಿನವನೆಂದೂ ಡಾ॥ ಕೀತ್‌ರವರು ಅಭಿಪ್ರಾಯಪಡುತ್ತಾರೆ.

೫) **ಕ್ರಿ. ಶ. ೬ನೆಯ ಶತಮಾನ**—ಕಾಳಿದಾಸನು ಆರನೆಯ ಶತಮಾನದವನೆಂದು ಸಮರ್ಥಿಸುವವರ ಮೂರು ಬೇರೆ ಬೇರೆ ವಿಚಾರಸರಣಿಗಳಿವೆ

೧. ಫರ್ಗ್ಯುಸನ್‌ನ 'ಕೊರೂರು ವಾದ'—ಕ್ರಿ.ಶ. ೫೪೪ರಲ್ಲಿ ವಿಕ್ರಮಾದಿತ್ಯನೆಂಬ ಒಬ್ಬ ರಾಜನು ಕೊರೂರು ಯುದ್ಧದಲ್ಲಿ ಮ್ಲೇಚ್ಛರನ್ನು ಸೋಲಿಸಿದನು. ಈ ವಿಶೇಷ ಘಟನೆಯು ಎಲ್ಲರ ನೆನಪಿನಲ್ಲೂ ಶಾಶ್ವತವಾಗಿ ಉಳಿಯುವಂತೆ ಮಾಡುವುದಕ್ಕಾಗಿ ಆ ವಿಕ್ರಮಾದಿತ್ಯನು ತನ್ನ ಹೆಸರಿನಲ್ಲಿ ಒಂದು ಹೊಸ ಶಕೆಯನ್ನು, ಆ ಘಟನೆಯಿಂದ ೬೦೦ ವರ್ಷ ಹಿಂದಕ್ಕೆ ಹಾಕಿ, ಆರಂಭಿಸಿದನೆಂದೂ, ಕಾಳಿದಾಸ ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲೊಬ್ಬನಾದುದರಿಂದ ಅವನೂ ಕ್ರಿ.ಶ. ೬ನೆಯ ಶತಮಾನದವನಾಗಿ ಸುಮಾರು ೫೪೪ರಲ್ಲಿದ್ದಿರಬೇಕೆಂದೂ ಫರ್ಗ್ಯುಸನ್ ಎಂಬ ವಿದ್ವಾಂಸನ ಮತ.

೨. ಮಾಕ್ಸ್‌ಮೂಲರನ 'ಕಾವ್ಯಪುನರುತ್ಥಾನ ವಾದ'—ಸಂಸ್ಕೃತ ಸಾಹಿತ್ಯರಚನೆಯ ಮೊದಲ ಘಟ್ಟವು ಕ್ರಿ.ಪೂ. ೧ನೆಯ ಶತಮಾನಕ್ಕೇ ಸೀಮಿತವಾಗುತ್ತದೆಂದೂ, ಅಲ್ಲಿಂದೀಚೆಗೆ ವಿದೇಶೀಯರ ದಾಳಿಗಳ ಒತ್ತಡದಿಂದ ಜನರ ಬೌದ್ಧಿಕ ಮತ್ತು ಲೇಖನ ಕಾರ್ಯಗಳು ಕುಂಠಿತವಾಗಿ ನಾಲ್ಕೈದು ಶತಮಾನಗಳ ಕಾಲ ಭಾರತೀಯ ಸಾಹಿತ್ಯಕ್ಕೆ 'ಕತ್ತಲೆಯ ಯುಗ' ಪ್ರಾಪ್ತವಾಗಿತ್ತೆಂದೂ, ಫರ್ಗ್ಯುಸನ್ ಹೇಳಿರುವ ೬ನೆಯ ಶತಮಾನದ ವಿಕ್ರಮಾದಿತ್ಯನ ಕಾಲದಲ್ಲಿ ಭಾರತದಲ್ಲಿ ವಿದ್ಯೆಯ ವಿಕಾಸ ಮತ್ತು ಸಾಹಿತ್ಯಸೃಷ್ಟಿ ಪುನಃ ಆರಂಭವಾದುವೆಂದೂ, ಕಾಳಿದಾಸನೇ ಈ ಕಾವ್ಯಪುನರುತ್ಥಾನದ ಮುಂದಾಳೆಂದೂ ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸನಾದ ಮಾಕ್ಸ್‌ಮೂಲರನ ಅಭಿಪ್ರಾಯ.

೩. ಕರ್ನ್‌ನ 'ನವಮಣಿ ವಾದ'—ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದ ನವಮಣಿಗಳ ಪೈಕಿ ಕಾಳಿದಾಸನ ಜತೆಯಲ್ಲಿ ಅಮರಸಿಂಹ ವರಾಹಮಿಹಿರ ಮುಂತಾದವರಿದ್ದರೆಂದು ಹೇಳಲಾಗುತ್ತಿದೆಯಷ್ಟೆ. ಈ ಅಮರಸಿಂಹನು

ಲಕ್ಷ ವರ್ಷಗಳಕಾಲ ಸುಳ್ಳಾಗಿಲ್ಲ; ಮುಂದೆಯೂ ಸುಳ್ಳಾಗಲಾರದು.

### ರಾಮಾಯಣದ ಕಾಂಡಗಳ ಕಥಾವಿಷಯ

೧. **ಬಾಲಕಾಂಡ** — ದಶರಥನ ಪುತ್ರಕಾಮೇಷ್ಟಿಯಾಗ; ರಾಮಾದಿಗಳ ಜನನ; ವಿಶ್ವಾಮಿತ್ರರ ಯಜ್ಞಸಂರಕ್ಷಣೆ; ಶಿವಧನುರ್ಭಂಗ; ಸೀತಾಕಲ್ಯಾಣ.

೨. **ಅಯೋಧ್ಯಾಕಾಂಡ** — ರಾಮನ ಯೌವರಾಜ್ಯಾಭಿಷೇಕ ಸಿದ್ಧತೆ; ರಾಮ ಸೀತಾ ಲಕ್ಷ್ಮಣರ ವನಗಮನ; ದಶರಥನ ಮರಣ; ಅರಣ್ಯದಲ್ಲಿ ಭರತರಾಮರ ಸಮಾಗಮ; ರಾಮ ಪಾದುಕಾಪಟ್ಟಾಭಿಷೇಕ.

೩. **ಅರಣ್ಯಕಾಂಡ** — ಶೂರ್ಪಣಖಾ ವಿರೂಪಕರಣ; ಖರದೂಷಣಾದಿಗಳ ವಧೆ; ಸೀತಾಪಹರಣ.

೪. **ಕಿಷ್ಕಿಂಧಾಕಾಂಡ** — ಸುಗ್ರೀವಸಖ್ಯ; ಸುಗ್ರೀವ ಪಟ್ಟಾಭಿಷೇಕ; ಸೀತೆಯನ್ನು ಹುಡುಕಲು ವಾನರ ಸೇನೆಗಳ ನಿರ್ಗಮನ.

೫. **ಸುಂದರಕಾಂಡ** — ಅಂಜನೇಯನಿಂದ ಸಮುದ್ರೋಲ್ಲಂಘನ; ಸೀತಾಸಮಾಗಮ; ಲಂಕಾದಹನ; ಪುನರಾಗಮನ.

೬. **ಯುದ್ಧಕಾಂಡ**— ವಿಭೀಷಣ ಪಟ್ಟಾಭಿಷೇಕ; ರಾವಣವಧೆ; ಸೀತೆಯ ಅಗ್ನಿಪ್ರವೇಶ; ಅಗ್ನಿಶುದ್ಧಳಾದ ಸೀತೆಯೊಡನೆ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ರಾಮಾದಿಗಳ ಆಗಮನ; ಶ್ರೀರಾಮ ಪಟ್ಟಾಭಿಷೇಕ.

೭. **ಉತ್ತರಕಾಂಡ** — ಸೀತಾಪರಿತ್ಯಾಗ; ಲವಕುಶರ ಜನನ; ಅಶ್ವಮೇಧಯಾಗ; ರಾಮಾದಿಗಳ ದೇಹತ್ಯಾಗ.

### ಇತರ ರಾಮಾಯಣಗಳು

ವಾಲ್ಮೀಕಿ ರಾಮಾಯಣದ ಕಥೆಯ ಆಧಾರದಮೇಲೆಯೇ, ಅಲ್ಪಸ್ವಲ್ಪ ಬದಲಾವಣೆಯೊಡನೆ, ಅಲ್ಲಿಂದೀಚೆಗೆ ರಚಿತವಾದ ಹಲಕೆಲವು ರಾಮಾಯಣಗಳಿವೆ. ಇವುಗಳಲ್ಲಿ **ವಾಸಿಷ್ಠರಾಮಾಯಣ** ತುಂಬ ಪ್ರಸಿದ್ಧವಾದುದು. ಈ ರಾಮಾಯಣಕ್ಕೆ ಜ್ಞಾನವಾಸಿಷ್ಠ, ಯೋಗವಾಸಿಷ್ಠ ಎಂಬ ಹೆಸರುಗಳೂ ರೂಢಿಯಲ್ಲಿವೆ. ಇದನ್ನು ರಾಮಾಯಣಕ್ಕೆ ಅನುಬಂಧರೂಪವಾಗಿ ವಾಲ್ಮೀಕಿಗಳೇ ರಚಿಸಿದರೆಂಬುದು ಅದ್ವೈತಸಂಪ್ರದಾಯಸ್ಥರ ಮತ. ಇದರಲ್ಲಿ ವೈರಾಗ್ಯ, ಮುಮುಕ್ಷುತ್ವ, ಉತ್ಪತ್ತಿ, ಸ್ಥಿತಿ, ಉಪಾಸನಾ ಮತ್ತು ನಿರ್ವಾಣ—ಎಂಬ ಆರು ಅಧ್ಯಾಯಗಳಿವೆ. ದೃಷ್ಟಾಂತರೂಪವಾದ ಅನೇಕ ಉಪಾಖ್ಯಾನಗಳ ಮೂಲಕ ಯೋಗ ಮತ್ತು ಅದ್ವೈತ ತತ್ವಗಳು ಇಲ್ಲಿ ನಿರೂಪಿತವಾಗಿವೆ.

**ವಸಿಷ್ಠೋತ್ತರರಾಮಾಯಣ** ಎಂಬುದು ಮತ್ತೊಂದು ರಾಮಾಯಣ. ಇದಕ್ಕೆ ಸೀತಾವಿಜಯಂ ಎಂಬ ಹೆಸರೂ ಇದೆ. ಇದರಲ್ಲಿ ರಾವಣ ಶತಕಂಠನೆಂದೂ ಅವನನ್ನು ಸೀತೆಯೇ ಜಯಿಸಿದಂತೆಯೂ ನಿರೂಪಿತವಾಗಿದೆ.



**ಅದ್ಭುತರಾಮಾಯಣ** ಅಥವಾ ಅದ್ಭುತೋತ್ತರ ರಾಮಾಯಣವೂ ವಾಲ್ಮೀಕಿರಚಿತವೆಂದೇ ಪ್ರಸಿದ್ಧಿಯಿದೆ. ಇದರಲ್ಲಿ ೨೭ ಸರ್ಗಗಳಿದ್ದು ಸೀತೆಯ ಪೂರ್ವವೃತ್ತಾಂತ ವರ್ಣಿತವಾಗಿದೆ. ಇದರಲ್ಲೂ ರಾವಣ ಶತಕಂಠನೆಂದೂ, ಅವನನ್ನು ರಾಮ ಜಯಿಸಲಾಗದೆ ಸೀತೆಯೇ ಜಯಿಸಿದಳೆಂದೂ ಹೇಳಿದೆ.

**ಅಧ್ಯಾತ್ಮರಾಮಾಯಣವು** ಬ್ರಹ್ಮಾಂಡಪುರಾಣದ (ಪುಟ ೨೯ ನೋಡಿ) ಒಂದು ಭಾಗ. ಇದು ಉಮೆಗೂ ಶಿವನಿಗೂ ನಡೆದ ಸಂವಾದರೂಪದಲ್ಲಿ ಏಳು ಕಾಂಡಗಳಲ್ಲಿದೆ. ಇದರ ಏಳನೆಯ ಕಾಂಡದ ಐದನೆಯ ಅಧ್ಯಾಯದಲ್ಲಿ 'ರಾಮಗೀತೆ' ಇದೆ. ಇದರಲ್ಲಿ ರಾಮ ವಿಷ್ಣುವೇ ಎಂದೂ ಅವನೇ ಪರಬ್ರಹ್ಮನೆಂದೂ ಪ್ರತಿಪಾದಿತವಾಗಿದೆ.

ಆನಂದ ಮತ್ತು **ಮೂಲರಾಮಾಯಣ**ಗಳು ಹನುಮಂತನ ಮಹಿಮೆಯನ್ನು ವಿವರಿಸುತ್ತವೆ.

### ರಾಮಾಯಣದ ವ್ಯಾಖ್ಯಾನಗಳು

ರಾಮಾಯಣಕ್ಕೆ ಹಲವಾರು ವ್ಯಾಖ್ಯಾನಗಳಿವೆ. ಅವುಗಳಲ್ಲಿ ಗೋವಿಂದರಾಜವಿರಚಿತ **ಭೂಷಣವ್ಯಾಖ್ಯಾ** ಅತ್ಯಂತ ಪ್ರಸಿದ್ಧವಾದುದು. ಓದುಗರು ಅಪೇಕ್ಷಿಸಬಹುದಾದ ಎಲ್ಲ ಅಂಶಗಳ ವಿಚಾರವೂ ಈ ವ್ಯಾಖ್ಯಾನದಲ್ಲಿರುವುದಲ್ಲದೆ ರಾಮಾಯಣದ ಕಾವ್ಯಸೌಂದರ್ಯವನ್ನೂ ವೈಶಿಷ್ಟ್ಯವನ್ನೂ ಗ್ರಹಿಸಲು ತುಂಬ ಉಪಯುಕ್ತವಾಗಿದೆ. ಗೋವಿಂದರಾಜರ ಸಮಕಾಲೀನರಾದ ಕಾಂಚೀಪುರದ ನಿವಾಸಿ ಅಹೋಬಿಲ ಎಂಬುವರ **ವಾಲ್ಮೀಕಿಹೃದಯಂ** ಎಂಬ ವ್ಯಾಖ್ಯಾನ ವಿದ್ವತ್ಪೂರ್ಣವಾಗಿದೆ. ಈ ಇಬ್ಬರು ವ್ಯಾಖ್ಯಾನಕಾರರೂ ಶ್ರೀ ಅಹೋಬಿಲಮಠದ ಆರನೆಯ ಆಸ್ಥಾನಪತಿಗಳಾಗಿದ್ದ (ಷಷ್ಠ) ಪರಾಂಕುಶ ಯತಿಗಳ ಶಿಷ್ಯರು. ವಿಜಯನಗರದ ಸಾರ್ವಭೌಮ ರಾಮರಾಯನ (೧೬ನೆಯ ಶತಮಾನ) ಕಾಲದವರು. ರಾಮನ ಕಥೆಯ ದೃಷ್ಟಾಂತಗಳಿಂದ ಧರ್ಮನಿರೂಪಣೆಯನ್ನು ಆಕರ್ಷಕ ರೀತಿಯಲ್ಲಿ ಮಾಡಿರುವ **ಧರ್ಮಾಕೂತ**ವೆಂಬ ರಾಮಾಯಣದ ವ್ಯಾಖ್ಯಾನ ೧೭ನೆಯ ಶತಮಾನದ ತ್ರ್ಯಂಬಕಮುಖಿಯಿಂದ ವಿರಚಿತವಾದುದು. ಇವುಗಳಲ್ಲದೆ ರಂಗಾಚಾರ್ಯವಿರಚಿತ ರಾಮಾಯಣಾನ್ವಯಿ, ಮಹೇಶತೀರ್ಥರ ರಾಮಾಯಣತತ್ವದೀಪಿಕಾ, ವೈದ್ಯನಾಥದೀಕ್ಷಿತರ ರಾಮಾಯಣದೀಪಿಕಾ, ಅಜ್ಞಾತರೊಬ್ಬರ ಚತುರರ್ಥೀ, ವರದರಾಜರ ರಾಮಾಯಣಸಾರಸಂಗ್ರಹ, ವೆಂಕಟರಚಿತ ರಾಮಾಯಣಾರ್ಥಪ್ರಕಾಶಿಕಾ ಮುಂತಾದ ವ್ಯಾಖ್ಯಾನಗಳೂ ಇವೆ.

ಗಯೆಯಲ್ಲಿರುವ ಬೌದ್ಧಾಲಯವನ್ನು ಕಟ್ಟಿಸಿದ ಅಮರದೇವನೆಂದೂ, ಈ ಆಲಯವನ್ನು ಕ್ರಿ. ಶ. ೬೪೨ರಲ್ಲಿ ಭಾರತದಲ್ಲಿ ಸಂಚರಿಸಿದ ಹ್ಯೂನತ್ಸಾಂಗನು ಮಾತ್ರ ಉಲ್ಲೇಖಿಸಿ ಕ್ರಿ. ಶ. ೪೧೧ರಲ್ಲಿ ಬಂದಿದ್ದ ಫಾಹಿಯಾನನು ಆ ಬಗ್ಗೆ ಪ್ರಸ್ತಾಪವನ್ನೇನೂ ಮಾಡಿಲ್ಲದಿರುವುದರಿಂದ ಈ ಎರಡು ಇಸವಿಗಳ ಮಧ್ಯೆ ಅಮರದೇವನಿದ್ದಿರಬೇಕೆಂದೂ ಕರ್ನ್‌ನ ಅಭಿಪ್ರಾಯ. ಅಲ್ಲದೆ ಜ್ಯೋತಿಃಶಾಸ್ತ್ರದ ಗಣಿತದ ಆಧಾರದಮೇಲೆ ವರಾಹಮಿಹಿರರು ಕ್ರಿ.ಶ. ೫೬೭ರಲ್ಲಿ ಗತಿಸಿಹೋಗಿರಬೇಕೆಂದು ನಂಬಲಾಗಿದೆ. ಈ ಕಾರಣದಿಂದಲೂ ಇವರಿಬ್ಬರ ಸಮಕಾಲೀನನಾದ ಕಾಳಿದಾಸನು ೬ನೆಯ ಶತಮಾನದವನೆಂದೇ ಹೇಳಬೇಕು.

೬) **ಕ್ರಿ.ಶ. ೧೧ನೆಯ ಶತಮಾನ**—ಕಾಳಿದಾಸನು ಧಾರಾ ನಗರದ ಭೋಜರಾಜನ ಆಸ್ಥಾನದಲ್ಲಿದ್ದುದಾಗಿ ಭೋಜಚರಿತದಲ್ಲಿ ವರ್ಣಿತವಾಗಿದೆ. ಭೋಜರಾಜನ ಕಾಲ ೧೧ನೆಯ ಶತಮಾನ. ಆದ್ದರಿಂದ ಕಾಳಿದಾಸನೂ ಕ್ರಿ.ಶ. ೧೧ನೆಯ ಶತಮಾನದವನು ಎಂಬುದು ಬೆಂಟ್ಲೆಯ ಮತ. ಭೋಜಚರಿತದಲ್ಲಿ ಎಲ್ಲ ಉದ್ದಾಮ ಕವಿಗಳನ್ನೂ ಸಮಕಾಲೀನರನ್ನಾಗಿ ನಿರೂಪಿಸಿರುವುದರಿಂದ ಈ ವಾದಕ್ಕೆ ಬೆಲೆಯಿಲ್ಲವಾದರೂ ರಘುವಂಶದ ನಾಲ್ಕನೇ ಸರ್ಗ ೬೧ನೇ ಶ್ಲೋಕದಲ್ಲಿ 'ಯವನೀಮುಖಪದ್ಮಾನಾಂ' ಎಂಬಲ್ಲಿ ಬರುವ ಯವನ ಶಬ್ದಕ್ಕೆ ಮಹಮ್ಮದ್ದೀಯ ಎಂಬ ಅರ್ಥವಿಟ್ಟರೆ, ಮಹಮ್ಮದೀಯರು ೭ನೇ ಶತಮಾನದಲ್ಲಿ ಭಾರತಕ್ಕೆ ಬಂದುದರಿಂದ ಕಾಳಿದಾಸ ಅದಕ್ಕಿಂತ ಈಚಿನವನೆಂದು ಹೇಳುವ ವಾದಕ್ಕೆ ಪೋಷಕವಾಗುತ್ತದೆ.

ಈ ಎಲ್ಲ ವಿಚಾರಸರಣಿಗಳನ್ನೂ ಪರಿಶೀಲಿಸಿದರೆ ಯಾವ ವಾದಕ್ಕೂ ಪ್ರಬಲವಾದ ಪ್ರಾಮಾಣಿಕವಾದ ಆಧಾರಗಳಿಲ್ಲವೆಂಬುದು ಸ್ಪಷ್ಟಪಡುತ್ತದೆ. ಕ್ರಿ.ಪೂ. ೮ನೆಯ ಅಥವಾ ಕ್ರಿ.ಶ. ೧೧ನೆಯ ಶತಮಾನಗಳಲ್ಲಿ ಕಾಳಿದಾಸನಿದ್ದನೆನ್ನಲು ಶಾಸನಪ್ರಮಾಣಗಳು ವಿರುದ್ಧವಾಗಿವೆ. ೨ನೆಯ ಶತಮಾನದ ವಾದಕ್ಕೆ ಪರಂಪರಾಗತ ಸಂಪ್ರದಾಯ ಅನುಕೂಲವಾಗಿಲ್ಲ. ೬ನೆಯ ಶತಮಾನದ ವಾದಕ್ಕೆ ಕ್ರಿ.ಶ. ೪೬೩ರ ಮಂಡಸಾರ್ (ಮಂದೇಶ್ವರ) ಶಾಸನವೂ ೪೭೨ರ ಬುದ್ಧಗಯಾ ಶಾಸನವೂ ವಿರುದ್ಧವಾಗಿವೆ.[4]

---

[4] ಕ್ರಿ.ಪೂ. 56 ರಿಂದ ಆರಂಭವಾದ ವಿಕ್ರಮಶಕೆ ಫರ್ಗ್ಯುಸನ್ ಹೇಳಿರುವಂತೆ ಕ್ರಿ.ಶ. 544ರಲ್ಲಿ ಬಳಕೆಗೆ ಬಂತೆಂಬುದು (ಪು. ೪೯ ನೋಡಿ) ನಿರಾಧಾರವಾದುದೆಂದೂ



ಕಾಳಿದಾಸನು ಗುಪ್ತರ ಕಾಲದಲ್ಲಿದ್ದನೆಂಬ (ಕ್ರಿ.ಶ. ೫ನೆಯ ಶತಮಾನ) ಡಾ॥ ಕೀತ್‌ರ ಅಭಿಪ್ರಾಯಕ್ಕೆ ಬಹುಜನರ ಸಮ್ಮತಿಯಿದೆ. ಕಾಳಿದಾಸನ ರಘುವಂಶ(೪ನೇ ಸರ್ಗ)ದಲ್ಲಿ ರಘುವು ಹೂಣರನ್ನು ಜಯಿಸಿದಂತೆ ಉಕ್ತವಾಗಿದೆ. ಹೂಣರು ಭಾರತಕ್ಕೆ ಮೊಟ್ಟಮೊದಲು ಬಂದುದು ಸುಮಾರು ಕ್ರಿ.ಶ. ೪೫೪ರಲ್ಲಿ. ಗುಪ್ತರ ಕಾಲದಲ್ಲಿ ಆದ ಹೂಣರ ಸೋಲನ್ನೇ ಕಾಳಿದಾಸನು ಇಲ್ಲಿ ಪರ್ಯಾಯವಾಗಿ ವರ್ಣಿಸಿದ್ದಾನೆಂದು ರಘು ದಿಗ್ವಿಜಯ ಮತ್ತು ಅಶ್ವಮೇಧದ ಆಧಾರದ ಮೇಲೆ ಹೇಳಿದರೆ ಸಮುದ್ರಗುಪ್ತನನ್ನೇ ರಘುವನ್ನಾಗಿಯೂ, ಅವನ ತಂದೆ ೧ನೆಯ ಚಂದ್ರಗುಪ್ತನನ್ನೇ ದಿಲೀಪನನ್ನಾಗಿಯೂ, ಮಗನಾದ ೨ನೆಯ ಚಂದ್ರಗುಪ್ತ (ವಿಕ್ರಮಾದಿತ್ಯ) ನನ್ನೇ ಅಜನನ್ನಾಗಿಯೂ ಇಟ್ಟುಕೊಂಡು ಕಾವ್ಯ ರಚಿಸಿದ್ದಾನೆಂದೂ ಸಾಮಾನ್ಯವಾಗಿ ಹೇಳಲಾಗುತ್ತಿದೆ. ಮೇಲೆ ಹೇಳಿರುವ ಹೂಣರ ಸೋಲು ಭಾರತದ ವಾಯುವ್ಯ ಸರಹದ್ದಿನಲ್ಲಾದಂತೆ ವರ್ಣಿತವಾಗಿರುವುದರಿಂದ ಇದು ಕ್ರಿ.ಶ. ೪೫೫ಕ್ಕೂ ಹಿಂದೆಯೇ ಆಗಿರಬೇಕು. ವತ್ಸಭಟ್ಟಿ ಮತ್ತು ಬುದ್ಧಗಯಾ ಶಾಸನಗಳ ದೃಷ್ಟಿಯಿಂದಲೂ ಹೂಣರನ್ನು ಜಯಿಸಿದ ಉಲ್ಲೇಖದ ಅಂತಃಪ್ರಮಾಣದಿಂದಲೂ ಕಾಳಿದಾಸ ೨ನೆಯ ಚಂದ್ರಗುಪ್ತ (ವಿಕ್ರಮಾದಿತ್ಯ)ನ (ಕ್ರಿ.ಶ. ೩೭೫ರಿಂದ ೪೩೦) ಕಾಲದವನೆಂದು ಹೇಳಬೇಕಾಗುತ್ತದೆ.

ಈ ಎಲ್ಲ ವಾದಗಳಲ್ಲೂ ಮುಖ್ಯವಾದ ಒಂದು ಸಮಾನಾಂಶವಿದೆ. ಕಾಳಿದಾಸನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದವನೆಂಬುದನ್ನು ಎಲ್ಲರೂ ಅಂಗೀಕರಿಸಿ, ಆ ವಿಕ್ರಮಾದಿತ್ಯ ಯಾರು ಎಂಬಲ್ಲಿ ಬೇರೆ ಬೇರೆ ನಿರ್ಣಯ ಮಾಡಹೊರಟಿದ್ದಾರೆ. ವಿಕ್ರಮೋರ್ವಶೀಯ ನಾಟಕದ ಹೆಸರಿನಲ್ಲಿ 'ವಿಕ್ರಮ' ಪದವು ಕಾಳಿದಾಸನ ಆಶ್ರಯದಾತೃವಾದ ವಿಕ್ರಮಾದಿತ್ಯನನ್ನೇ ಸೂಚಿಸುತ್ತದೆಂಬುದರಲ್ಲೂ ಸತ್ಯಾಂಶವಿರಬಹುದು. ಆದರೆ ನಮ್ಮ ದೇಶದ ಚರಿತ್ರೆಯಲ್ಲಿ ಅನೇಕ ವಿಕ್ರಮಾದಿತ್ಯರಿರುವುದು ಹಗರಣಕ್ಕೆ ಕಾರಣವಾಗಿದೆ. ಕ್ರಿ.ಪೂ. ೫೬ರಲ್ಲಿ ಶಕಪುರುಷ ವಿಕ್ರಮಾದಿತ್ಯನ ಆಸ್ಥಾನದಲ್ಲೇ ಕಾಳಿದಾಸನಿದ್ದನೆಂಬುದೇ ಭಾರತೀ

---

ಅದು ಮೊದಲಿನಿಂದಲೂ ಮಾಳವಶಕೆ ಎಂಬ ಹೆಸರಿನಿಂದ ರೂಢಿಯಲ್ಲಿತ್ತೆಂದೂ ಕ್ರಿ. ಶ. ೮೦೦ರ ವೇಳೆಗೆ ಅದು ವಿಕ್ರಮಶಕೆಯಾಗಿ ಪರಿವರ್ತಿತವಾಯಿತೆಂದೂ ಎ. ಎ. ಮ್ಯಾಕ್ಡೊನೆಲ್‌ರವರ ಮತ.

ಯರು ಹಿಂದಿನಿಂದಲೂ ನಂಬಿ ಹೇಳುತ್ತ ಬಂದಿರುವ ಸಾಂಪ್ರದಾಯಿಕ ಮತ. ಕಾಳಿದಾಸನು ಈ ರೀತಿ ಕ್ರಿ.ಪೂ. ೧ನೆಯ ಶತಮಾನದವನೇ ಏಕಾಗಿರಬಾರದು ಎಂಬುದನ್ನು ಮಾತ್ರ ಯಾರೂ ತೋರಿಸುವ ಯತ್ನಮಾಡಿಲ್ಲ. ಶಾಕುಂತಲ ನಾಟಕದಲ್ಲಿ ಬರುವ ಮಕ್ಕಳಿಲ್ಲದವನ ಆಸ್ತಿ ರಾಜ್ಯಕ್ಕೇ ಸೇರತಕ್ಕದ್ದೆಂಬ ನಿಯಮ ಕ್ರಿ.ಪೂ. ೧ನೆಯ ಶತಮಾನದಲ್ಲಿ ರೂಢಿಯಲ್ಲಿತ್ತು. ಕ್ರಿ.ಶ. ೨ನೆಯ ಶತಮಾನದ ಅಶ್ವಘೋಷನೂ ಕಾಳಿದಾಸನ ಕಾವ್ಯಗಳಿಂದ ಸ್ಫೂರ್ತಿ ಹೊಂದಿದ್ದಾನೆಂದು ಅವನ ಕಾವ್ಯಗಳ ಪರಿಶೀಲನೆಯಿಂದ ತಿಳಿಯುತ್ತದೆ. ಈ ಕಾರಣಗಳಿಂದ ಕಾಳಿದಾಸ ಕ್ರಿ.ಪೂ. ೧ನೆಯ ಶತಮಾನದಲ್ಲಿ ಶಕಪುರುಷ ವಿಕ್ರಮಾದಿತ್ಯನ ಆಸ್ಥಾನಕವಿಯಾಗಿದ್ದನೆಂಬುದನ್ನು ಸುಲಭವಾಗಿ ಅಲ್ಲಗಳೆಯುವುದಕ್ಕಾಗುವುದಿಲ್ಲ.

ಇಷ್ಟೆಲ್ಲ ಪರಿಶೀಲಿಸಿದರೂ ಯಾವ ಸಿದ್ಧಾಂತಕ್ಕೂ ಬರುವುದು ಅಸಾಧ್ಯವಾಗಿದೆ. ಕಾಳಿದಾಸ ಕ್ರಿ.ಪೂ. ೫೭ಕ್ಕಿಂತ ಹಿಂದಿನವನು ಎಂದು ಹೇಳಲು ಸರಿಯಾದ ಆಧಾರವಿಲ್ಲ. ಬುದ್ಧಗಯಾ ಮತ್ತು ಐಹೊಳೆ ಶಾಸನಗಳಲ್ಲಿ ಕಾಳಿದಾಸನ ಹೆಸರಿನ ಸ್ಪಷ್ಟ ಉಲ್ಲೇಖವಿರುವುದರಿಂದ ಅವನು ಅಲ್ಲಿಂದ ಈಚಿನವನೂ ಅಲ್ಲ. ಕ್ರಿ.ಶ. ಸುಮಾರು ೬೦೦ ರವನೆಂದು ನಿರ್ವಿವಾದವಾಗಿ ಹೇಳಬಹುದಾದ ಬಾಣನು ತನ್ನ ಹರ್ಷಚರಿತೆಯ ಪ್ರಾರಂಭಿಕ ಶ್ಲೋಕ ೧೬ರಲ್ಲಿ[5] ಕಾಳಿದಾಸನನ್ನು ಪ್ರಶಂಸಿಸಿದ್ದಾನೆ. ಆದ್ದರಿಂದ ಸದ್ಯಕ್ಕೆ ಕಾಳಿದಾಸನು ಕ್ರಿ.ಪೂ. ೫೭ರಿಂದ ಈಚೆಗೆ ಕ್ರಿ.ಶ. ೫ನೆಯ ಶತಮಾನಕ್ಕೆ ಹಿಂದೆ ಇದ್ದಿರಬೇಕೆಂದು ಸ್ಥೂಲವಾಗಿ ಹೇಳುವುದೇ ಯುಕ್ತ.

### ಕಾಳಿದಾಸನ ಜೀವನ

ಕಾಳಿದಾಸನ ಜೀವನದ ವಿಚಾರವಾಗಿ ಅನೇಕ ಕಥೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ಕೆಲವಂತು ಐತಿಹಾಸಿಕ ಸೋಗಿನಲ್ಲಿವೆ. ಕಾಳಿದಾಸನು ಸಿಂಹಳದ ಕುಮಾರದಾಸನ (ಕ್ರಿ.ಶ. ೫೦೦) ಆಸ್ಥಾನದಲ್ಲಿದ್ದನೆಂಬುದೂ, ಕಾಶ್ಮೀರದ ಮಾತೃಗುಪ್ತರಾಜನೇ (ಕ್ರಿ.ಶ. ೩೦೦) ಅವನೆಂಬುದೂ, ಧಾರಾನಗರದ ಭೋಜರಾಜನ (ಕ್ರಿ.ಶ. ೧೦೦೫-೧೦೫೪) ಆಸ್ಥಾನ ಕವಿಯಾಗಿದ್ದನೆಂಬುದೂ

5 ನಿರ್ಗತಾಸು ನ ವಾ ಕಸ್ಯ ಕಾಳಿದಾಸಸ್ಯ ಸೂಕ್ತಿಷು ।
ಪ್ರೀತಿರ್ಮಧುರಸಾರ್ದ್ರಾಸು ಮಂಜರೀಷ್ವಿವ ಜಾಯತೇ ॥



ಉಲ್ಲೇಖನೀಯವಾದ ಚಾರಿತ್ರಿಕ ಸೋಗಿನ ಕಥೆಗಳೇ ಆದರೂ ಸತ್ಯ ದೂರವಾದುವು. ಅವನ ಕಾಳಿ-ದಾಸ ಎಂಬ ಹೆಸರನ್ನು ಸಮರ್ಥಿಸುವ[6] ಕಥೆಗಳಂತು ಹೇರಳವಾಗಿವೆ.

ಕಾಳಿದಾಸನು ಕಾಶ್ಮೀರದವನೆಂದೂ, ಬಂಗಾಳದವನೆಂದೂ, ಮಾಳವ ದೇಶದವನೆಂದೂ ಸಕಾರಣವಾಗಿ ವಾದಿಸುವವರಿದ್ದಾರೆ. ಕಾಳಿದಾಸನು ಉಜ್ಜಯಿನಿಯಲ್ಲೇ ವಾಸವಾಗಿದ್ದನೆಂದೂ ಭಾರತ ದೇಶದ ಎಲ್ಲ ಭಾಗಗಳಲ್ಲೂ ವಿಶೇಷವಾಗಿ ಸಂಚರಿಸಿದ್ದನೆಂದೂ ಅವನ ಕಾವ್ಯನಾಟಕಗಳಲ್ಲಿನ ಅಂತಃ ಪ್ರಮಾಣಗಳ ಆಧಾರದಮೇಲೆ ಒಂದು ಬಗೆಯಾಗಿ ಸಿದ್ಧಾಂತವಾಗಿದೆಯೆನ್ನಬಹುದು. ಅವನಿಗೆ ಎಲ್ಲ ಶಾಸ್ತ್ರಗಳ ಪರಿಚಯವಿದ್ದಿತೆಂಬುದು ಅವನ ಗ್ರಂಥಗಳಿಂದಲೇ ಸ್ಪಷ್ಟವಾಗುತ್ತದೆ.

### ಕಾಳಿದಾಸರಚಿತ ಮಹಾಕಾವ್ಯಗಳು

ರಘುವಂಶ, ಕುಮಾರಸಂಭವ—ಇವೆರಡೂ[7] ಕಾಳಿದಾಸನಿಂದ ರಚಿತವಾಗಿ ಆಸೇತು ಹಿಮಾಚಲದವರೆಗೆ ಸುಪ್ರಸಿದ್ಧವಾಗಿರುವ ಮಹಾಕಾವ್ಯಗಳು.

6 ಕಾಳಿದಾಸನು ಮೊದಲು ಒಬ್ಬ ಶುಂಠನಾಗಿದ್ದನೆಂದೂ, ಕಾರಣಾಂತರಗಳಿಂದ ರಾಜಕುಮಾರಿಯೊಬ್ಬಳನ್ನು ವಿವಾಹವಾದನೆಂದೂ, ಅವನ ಅಜ್ಞತೆಯನ್ನು ಮನಗಂಡ ಆ ರಾಜಕುಮಾರಿಯು ಅವನು ವಿದ್ಯಾವಂತನಾಗುವವರೆಗೆ ಅವನೊಡನೆ ಸಂಸಾರಮಾಡಲು ಒಪ್ಪದಿರಲು ಅವನು 'ಕಾಳಿ'ಯನ್ನು ಭಜಿಸಿ ಅವಳ ವರಪ್ರಸಾದದಿಂದ ವರಕವಿಯಾಗಿ ಹೆಂಡತಿಯಲ್ಲಿಗೆ ಹಿಂತಿರುಗಿದಾಗ ಅವಳು ಅವನನ್ನು 'ಅಸ್ತಿ ಕಶ್ಚಿತ್ ವಾಗರ್ಥಃ ? ' ಎಂದು ಪ್ರಶ್ನಿಸಿದಳೆಂದೂ ಅದಕ್ಕೆ ಉತ್ತರವಾಗಿ ಅದೇ ವಾಕ್ಯವನ್ನೇ ಹೇಳಿ ಬಳಿಕ ಆ ಮೂರು ಪದಗಳಿಂದ ಆರಂಭವಾಗುವ ಕುಮಾರಸಂಭವ, ಮೇಘದೂತ, ರಘುವಂಶ ಕಾವ್ಯಗಳನ್ನು ಕಾಳಿದಾಸನೆಂಬ ಹೆಸರಿನಿಂದ ರಚಿಸಿದನೆಂದೂ ಒಂದು ಕಥೆಯಿದೆ. ಈ ಕಥೆಯಲ್ಲಿ ಸತ್ಯಾಂಶವಿರುವುದಾದರೆ ಅವನು ಉಜ್ಜಯಿನಿಯ ಮಹಾಕಾಲನನ್ನು ಆರಾಧಿಸಿ ಅವನ ಅನುಗ್ರಹದಿಂದ ಬೇಗ ವಿದ್ಯಾಭ್ಯಾಸ ಮುಗಿಸಿ ಕಾಲ-ದಾಸನಾಗಿ ಹಿಂದಿರುಗಿ ಕಾವ್ಯ ನಾಟಕಾದಿಗಳ ರಚನೆ ಮಾಡಿದನೆಂದರೆ ಸಮಂಜಸವಾದೀತು. ಮೇಘಸಂದೇಶದಲ್ಲಿ ಅವನು ಮಹಾಕಾಲನನ್ನು ಅತಿಶಯವಾಗಿ ಕೊಂಡಾಡಿದ್ದಾನೆ. ಪ್ರಾಯಃ 'ಕಾಲದಾಸ'ನೆಂಬ ಹೆಸರು, ಕಾಲ (ಮಹಾಕಾಲ)ನ ಹೆಸರು ಅಷ್ಟು ಪ್ರಸಿದ್ಧವಾಗಿಲ್ಲವಾದಕಾರಣ, ಕಾಲಕ್ರಮದಲ್ಲಿ 'ಕಾಳಿ-ದಾಸ'ನಾಗಿ ಮಾರ್ಪಟ್ಟಿದ್ದರೂ ಇರಬಹುದು. (ನಮ್ಮ ವಿಕ್ರಮೋರ್ವಶೀಯ ನಾಟಕದ ಪೀಠಿಕೆ ಪು. ೨೦, ರಘುವಂಶ ಸರ್ಗ ೧೪ ಪೀಠಿಕೆ ಪು. ೬ ನೋಡಿ).

7 ಕುಂತೇಶ್ವರದೌತ್ಯವೆಂಬ ಇನ್ನೊಂದು ಕಾವ್ಯವನ್ನು ಕಾಳಿದಾಸ ರಚಿಸಿದ್ದನೆಂಬುದು ಕ್ಷೇಮೇಂದ್ರನ 'ಔಚಿತ್ಯವಿಚಾರಚರ್ಚಾ' ದಿಂದ ತಿಳಿದುಬರುತ್ತದಾದರೂ, ಅದು ಈಗ ಉಪಲಬ್ಧವಾಗಿಲ್ಲ.

**ರಘುವಂಶ**— ಈಗ ಪ್ರಚಲಿತವಾಗಿರುವ ಸ್ಥಿತಿಯಲ್ಲಿ ರಘುವಂಶ ೧೯ ಸರ್ಗಗಳ ಅಸಮಗ್ರವಾದ ಮಹಾಕಾವ್ಯ. ಇದರಲ್ಲಿ ೨೪ ಸರ್ಗಗಳಿದ್ದುವೆಂದೂ ಕೊನೆಯ ಐದಾರು ಸರ್ಗಗಳು ಲುಪ್ತವಾಗಿ ಹೋಗಿವೆಯೆಂದೂ ಹೇಳುತ್ತಾರೆ. ತಾನು ಸಂಪಾದಿಸಿದ ಸರ್ವಸ್ವವನ್ನೂ ವಿಶ್ವಜಿದ್ಯಾಗದಲ್ಲಿ ದಾನಮಾಡಿಬಿಟ್ಟು ಆಕಿಂಚನನಾಗಿದ್ದರೂ, ಆರ್ಥಿಯಾಗಿ ಬಂದ ಕೌತ್ಸನಿಗೆ ಅವನ ಅಪೇಕ್ಷೆಗಿಂತ ವಿಶೇಷವಾಗಿ ಹಣವನ್ನು ಕುಬೇರನಿಂದಲೇ ದೊರಕಿಸಿಕೊಟ್ಟು ವಿಶ್ವವಿಖ್ಯಾತ ನಾದ ರಘುಮಹಾರಾಜನನ್ನು ಮತ್ತು ಅವನ ವಂಶದ ಸುಪ್ರಸಿದ್ಧ ರಾಜರನ್ನು ಕುರಿತು ರಚಿತವಾಗಿರುವುದರಿಂದ 'ರಘುವಂಶ' ಎಂಬ ಇದರ ಹೆಸರು ಅನ್ವರ್ಥ ವಾಗಿದೆ. ಇದರ ೧೫ ನೆಯ ಸರ್ಗದಲ್ಲಿ ಕಾಳಿದಾಸನು ವಾಲ್ಮೀಕಿಯನ್ನು 'ಆದಿಕವಿ' ಯೆಂದು ನಿರ್ದೇಶಿಸಿದ್ದಾನೆ. 'ರಘುವಂಶದ' ಮೂರನೆಯ ಒಂದು ಭಾಗ, ಅಂದರೆ ಆರು ಸರ್ಗ, ರಾಮನ ವೃತ್ತಾಂತಕ್ಕಾಗಿಯೇ ಮೀಸಲಾಗಿದೆ. ಈ ಕಾವ್ಯವನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ರಾಮನನ್ನು ವಿಶೇಷವಾಗಿ 'ರಾಘವ' 'ರಘುಶ್ರೇಷ್ಠ' ಎಂದೇ ಎಲ್ಲೆಲ್ಲೂ ಕರೆದಿರುವುದನ್ನು ಸಮರ್ಥಿಸುವು ದಕ್ಕಾಗಿಯೇ ರಘುವಿನ ಮಹಿಮೆಯನ್ನು ಮೊದಲು ಹೇಳಿ, ಬಳಿಕ ಪ್ರಧಾನ ವಾಗಿ ರಾಮನ ವೃತ್ತಾಂತವನ್ನು ಕಾಳಿದಾಸನು ಇಲ್ಲಿ ವಿವರಿಸಿದ್ದಾನೆಂದು ತೋರುತ್ತದೆ. ರಘುವಂಶ ಕಾವ್ಯವು ಸುಂದರವಾದ ಉಪಮಾನಗಳಿಂದ ತುಂಬಿಹೋಗಿದೆ. ಶೈಲಿ ಲಲಿತವಾಗಿದೆ; ಭಾಷೆ ಸುಲಭವಾಗಿದೆ; ವಿಷಯ ನಿರೂಪಣೆ ಮನೋಹರವಾಗಿದೆ; ವರ್ಣನೆಗಳು ಸೊಗಸಾಗಿವೆ; ಸಮಸ್ತ ಪದಗಳು ಮಿತವಾಗಿ ಕಿರಿದಾಗಿವೆ. ಆದ್ದರಿಂದಲೇ ಅಂದಿನಿಂದ ಇಂದಿನವರೆಗೆ ರಘುವಂಶವನ್ನೇ, ಸಂಸ್ಕೃತ ಕಲಿಯುವ ವಿದ್ಯಾರ್ಥಿಗಳಿಗೆ ಮೊದಲು ಓದಿಸುವ ಉಪಯುಕ್ತವಾದ ಪದ್ಧತಿ ಆಸೇತು ಹಿಮಾಚಲದವರೆಗೆ ಸರ್ವತ್ರ ರೂಢಿಯಲ್ಲಿದೆ.

**ರಘುವಂಶದ ಕಥಾವಿಷಯ**— ರಘುವಂಶದಲ್ಲಿ ಕಥೆ ಆರಂಭವಾಗುವುದು ಸೂರ್ಯ ವಂಶದ ದಿಲೀಪರಾಜನ ವೃತ್ತಾಂತದಿಂದ. ಅವನೂ ಅವನ ಧರ್ಮಪತ್ನಿ ಸುದಕ್ಷಿಣಾ ದೇವಿಯೂ ಸಂತಾನಪ್ರಾಪ್ತಿಗಾಗಿ ಕಾಮಧೇನುವಿನ ಮಗಳಾದ ನಂದಿನೀಧೇನುವನ್ನು ಪೂಜಿಸಿ ಸಫಲರಾದುದು ಮೊದಲ ಎರಡು ಸರ್ಗಗಳಲ್ಲೂ ದಿಲೀಪನ ಮಗನಾದ ರಘುವಿನ ಜನನ, ಅವನ ವಿದ್ಯಾಭ್ಯಾಸ, ಪಟ್ಟಾಭಿಷೇಕ, ದಿಗ್ವಿಜಯ, ವಿಶ್ವಜಿದ್ಯಾಗವಾಡಿ ತಾನು ಅಕಿಂಚನನಾಗಿದ್ದರೂ ತನ್ನಲ್ಲಿಗೆ ಅರ್ಥಿಯಾಗಿ ಬಂದ ಕೌತ್ಸನಿಗೆ ಅವನ ಅಪೇಕ್ಷೆಗಿಂತ ಹೆಚ್ಚು ಧನವನ್ನು ಕುಬೇರನಿಂದ ಪಡೆದುಕೊಟ್ಟುದು ಮೂರು ಮತ್ತು ನಾಲ್ಕನೆಯ ಸರ್ಗ ಗಳಲ್ಲೂ ಮನಮುಟ್ಟುವಂತೆ ವರ್ಣಿತವಾಗಿವೆ. ಅಲ್ಲಿಂದಮುಂದೆ ನಾಲ್ಕು ಸರ್ಗಗಳಲ್ಲಿ ಅಜನ ಜನನ, ಇಂದುಮತೀ ಸ್ವಯಂವರ, ಅಜನ ಪಟ್ಟಾಭಿಷೇಕ, ದಶರಥನ ಜನನ,



ಇಂದುಮತಿಯ ಅನಿರೀಕ್ಷಿತ ಮರಣ, ಅಜನ ಪ್ರಲಾಪ, ದಶರಥ ವಯಸ್ಕನಾದ ಮೇಲೆ ಅಜನ ಇಹಲೋಕ ತ್ಯಾಗ ಇವುಗಳು ಹೃದಯಂಗಮವಾಗಿ ಚಿತ್ರಿತವಾಗಿವೆ. ಒಂಭತ್ತನೆಯ ಸರ್ಗದಲ್ಲಿ ದಶರಥನಿಗೊದಗಿದ ಶಾಪವೃತ್ತಾಂತವಿದೆ. ಹತ್ತನೆಯ ಸರ್ಗದಿಂದ ೧೫ ನೆಯ ಸರ್ಗ ಪೂರ್ತಾ ಶ್ರೀರಾಮನ ಕಥೆಯಿದೆ. ೧೦ ನೆಯದರಲ್ಲಿ ರಾಮಾದಿಗಳ ಜನನವೂ, ೧೧ ರಲ್ಲಿ ವಿಶ್ವಾಮಿತ್ರ ಯಜ್ಞ ಸಂರಕ್ಷಣೆ, ಸೀತಾಕಲ್ಯಾಣ, ಪರಶುರಾಮ ಪರಾಭವವೂ, ೧೨ ರಲ್ಲಿ ರಾಮನ ವನಗಮನದಿಂದ ರಾವಣವಧೆಯವರೆಗಿನ ಕಥೆಯೂ, ೧೩ರಲ್ಲಿ ಶ್ರೀರಾಮನು ಸೀತಾದಿಗಳೊಡನೆ ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ಹಿಂದಿರುಗುವುದೂ, ೧೪ ರಲ್ಲಿ ಸೀತಾಪರಿತ್ಯಾಗವೃತ್ತಾಂತವೂ, ೧೫ರಲ್ಲಿ ಲವಕುಶರ ಜನನ, ರಾಮನ ಅಶ್ವಮೇಧಯಾಗದ ಆಚರಣೆ, ವಾಲ್ಮೀಕಿಯಿಂದ ಸೀತೆಯ ಪರಿಶುದ್ಧತೆಯ ನಿರೂಪಣೆ, ರಾಮನ ಇಹಲೋಕ ತ್ಯಾಗಗಳೂ ಪ್ರಧಾನವಾಗಿ ವರ್ಣಿತವಾಗಿವೆ. ೧೬-೧೭ ನೆಯ ಸರ್ಗಗಳಲ್ಲಿ ಕುಶನ ಮತ್ತು ಅವನ ಮಗ ಅತಿಥಿಯ ವೃತ್ತಾಂತಗಳಿವೆ. ೧೮ ರಲ್ಲಿ ಅತಿಥಿಯಿಂದ ಮುಂದಿನ ಪರಂ ಪರೆಯೂ, ೧೯ ರಲ್ಲಿ ಅಗ್ನಿವರ್ಣನ ರಾಜ್ಯಭಾರ, ಅವನ ಆಕಸ್ಮಿಕ ಮರಣ, ಆಗ ಗರ್ಭಿಣಿ ಯಾಗಿದ್ದ ಅವನ ಪತ್ನಿಯ ರಾಜ್ಯಭಾರನಿರ್ವಾಹ ಇವುಗಳು ವಿವರಿಸಲ್ಪಟ್ಟಿವೆ.

ಇಲ್ಲಿಗೆ ರಘುವಂಶಕಾವ್ಯವು ಉಪಸಂಹಾರವಿಲ್ಲದೆ ಅಸಮಗ್ರವೆಂದು ಭಾವಿಸಬಹು ದಾದ ಸ್ಥಿತಿಯಲ್ಲಿ ಮುಗಿಯುತ್ತದೆ.

**ಕುಮಾರಸಂಭವ** — ಕುಮಾರಸಂಭವ ಮಹಾಕಾವ್ಯವು ೧೭ ಸರ್ಗಗಳಲ್ಲಿ ಪ್ರಚಲಿತವಾಗಿದ್ದರೂ ಅದರ ಮೊದಲ ಏಳು ಸರ್ಗಗಳು ಮಾತ್ರ ಕಾಳಿದಾಸರಚಿತವೆಂದು ಹೇಳಲಾಗುತ್ತಿದೆ. ಮಲ್ಲಿನಾಥನೂ ಈ ಏಳು ಸರ್ಗ ಗಳಿಗೆ ಮಾತ್ರ ವ್ಯಾಖ್ಯಾನ ಬರೆದಿದ್ದಾನೆ. ಆದರೆ, ವಾಮನನು ಎಂಟನೆಯ ಸರ್ಗದಿಂದ ಉದಾಹರಿಸಿರುವುದರಿಂದ ಅದೂ ಕಾಳಿದಾಸರಚಿತವೇ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಕಾವ್ಯದ ಹೆಸರೇ ಸೂಚಿಸು ವಂತೆ, ಅದು ಕುಮಾರಸ್ವಾಮಿಯ ಜನನವನ್ನು ಕುರಿತು ರಚಿತವಾದುದು. ಮೊದಲ ಏಳು ಸರ್ಗಗಳು ಕುಮಾರನ ಮಾತಾಪಿತೃಗಳಾದ ಪಾರ್ವತೀ-ಶಿವರ ವಿವಾಹಕ್ಕೆ ಅವಕಾಶವೇರ್ಪಟ್ಟ ಸನ್ನಿವೇಶಗಳನ್ನು ಚಿತ್ರಿಸುತ್ತವೆ. ಮುಂದಿನ ಸರ್ಗಗಳಲ್ಲಿ ಅಶ್ಲೀಲ ಶೃಂಗಾರ ವಿಶೇಷವಾಗಿ ಕಂಡುಬರುವುದರಿಂದ ಅವು ಅಷ್ಟು ಪ್ರಸಿದ್ಧವಾಗಿಲ್ಲ. ಮೊದಲಿನಿಂದ ಕೊನೆಯವರೆಗೂ ವರ್ಣನೆ ಉತ್ಕೃಷ್ಟ ವಾದ ರೀತಿಯಲ್ಲಿದೆ. ಕುಮಾರನಿಂದಾದ ತಾರಕಾಸುರ ವಧೆಯಲ್ಲಿ ಕಾವ್ಯ ಉಪಸಂಹೃತವಾಗುತ್ತದೆ.

ಕುಮಾರಸಂಭವದ ಕಥಾವಿಷಯ — ಪರ್ವತರಾಜ ಹಿಮಾಲಯದ ವರ್ಣನೆ ಯಿಂದ ಆರಂಭವಾಗುವ ಕುಮಾರಸಂಭವದ ಮೊದಲನೆಯ ಸರ್ಗದಲ್ಲಿ ಪರ್ವತರಾಜನ ಮಗಳಾಗಿ ಉಮೆಯು ಜನಿಸಿ ಬೆಳೆದು ದೊಡ್ಡವಳಾಗುವುದೂ, ಎರಡನೆಯ ಸರ್ಗದಲ್ಲಿ

ದೇವತೆಗಳು ತಾರಕಾಸುರನ ಪೀಡೆಯ ಪರಿಹಾರಕ್ಕಾಗಿ ಬ್ರಹ್ಮನಲ್ಲಿ ಮೊರೆಯಿಟ್ಟು ಅವನಿಂದ ಸೂಕ್ತ ಕಾರ್ಯವಿಧಾನವನ್ನು ತಿಳಿಯುವುದೂ ವರ್ಣಿತವಾಗಿದೆ. ಮೂರನೆಯ ಸರ್ಗದಲ್ಲಿ ಶಿವನಿಂದಾದ ಕಾಮದಹನದ ವಿವರಗಳೂ, ನಾಲ್ಕನೆಯದರಲ್ಲಿ ರತಿಪ್ರಲಾಪವೂ ಸುಂದರವಾಗಿ ನಿರೂಪಿತವಾಗಿವೆ. ಐದನೆಯದರಲ್ಲಿ ಪಾರ್ವತಿಯ ಉಗ್ರ ತಪಸ್ಸು ಮತ್ತು ಅದರ ಫಲವಾಗಿ ಶಿವನೇ ಪ್ರತ್ಯಕ್ಷನಾಗಿ ಬಂದು ಅವಳ ಪಾಣಿಗ್ರಹಣಮಾಡಿದುದು ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗಿದೆ. ಆರು-ಏಳನೆಯ ಸರ್ಗಗಳಲ್ಲಿ ವಿಧಿವತ್ತಾದ ಶಿವ-ಪಾರ್ವತಿಯರ ವಿವಾಹದ ವಿವರಗಳಿವೆ. (ಇಲ್ಲಿಂದ ಮುಂದಿನ ಸರ್ಗಗಳು ಕಾಳಿದಾಸರಚಿತವಲ್ಲವೆಂಬುದೇ ವಿಮರ್ಶಕರ ಅಭಿಪ್ರಾಯ.)

ಕಾಳಿದಾಸನ ವೈಶಿಷ್ಟ್ಯ ( ಮುಂದೆ ನಾಟಕ ವಿಭಾಗದಲ್ಲೂ ನೋಡಿ)

ಕುಮಾರಸಂಭವ, ರಘುವಂಶ — ಈ ಎರಡು ಕಾವ್ಯಗಳಿಗೂ ಅನೇಕ ವ್ಯಾಖ್ಯಾನಗಳಿದ್ದರೂ ಮಲ್ಲಿನಾಥನ ಸಂಜೀವಿನೀ ವ್ಯಾಖ್ಯಾನವೇ ತುಂಬ ಪ್ರಸಿದ್ಧವಾದುದು. ಕಾಳಿದಾಸನ ಕಾವ್ಯಗಳ ಬಗ್ಗೆ ಮಲ್ಲಿನಾಥ ಹೇಳುತ್ತಾನೆ—

[8] ಕಾಲಿದಾಸಗಿರಾಂ ಸಾರಂ ಕಾಲಿದಾಸಃ ಸರಸ್ವತೀ ।
ಚತುರ್ಮುಖೋऽಥವಾ ಸಾಕ್ಷಾತ್ ವಿದುರ್ನಾನ್ಯೇ ತು ಮಾದೃಶಾಃ ॥

ಕವಿಪ್ರತಿಭೆ, ರಚನಾಸೌಂದರ್ಯ ಎರಡೂ ಕೂಡಿಬಂದಿರುವುದು ಕಾಳಿದಾಸನ ಕಾವ್ಯಗಳಲ್ಲಿ ಮಾತ್ರ. ಇತರ ಕಡೆ ಒಂದಿದ್ದರೆ ಒಂದಿಲ್ಲ. ಕಾಳಿದಾಸನ ಇನ್ನೊಂದು ಶಕ್ತಿಯೆಂದರೆ ಬಾಹ್ಯಪ್ರಕೃತಿ ವರ್ಣನೆಯೊಂದಿಗೇ ಮಾನವನ ಆಂತರಿಕ ಭಾವೋದ್ವೇಗಗಳನ್ನೂ ಚಿತ್ರಿಸುವುದರಲ್ಲಿರುವ ಕೌಶಲ. ಬೆಟ್ಟ ಗುಡ್ಡಗಳ, ಮರಗಿಡಬಳ್ಳಿಗಳ ಮೂಕಭಾಷೆಯನ್ನೂ ಅರ್ಥಮಾಡಿಕೊಳ್ಳುವ ಸಾಮರ್ಥ್ಯವಿದ್ದ ಪ್ರಾಚೀನಕವಿ, ವಾಲ್ಮೀಕಿಯನ್ನು ಬಿಟ್ಟರೆ, ಕಾಳಿದಾಸನೇ ಎಂಬುದರಲ್ಲಿ ಸಂದೇಹವಿಲ್ಲ. ಕಾವ್ಯಗಳನ್ನು ಸಂಪ್ರದಾಯಬದ್ಧವಾದ ರೀತಿಯಲ್ಲೇ ಕಾಳಿದಾಸ ರಚಿಸಿದ್ದರೂ, ಸಾಮಾನ್ಯವಾಗಿ ಇತರರಲ್ಲಿ ಕಂಡುಬರುವ ಶಬ್ದಾಡಂಬರ, ಚಮತ್ಕಾರ, (ಚಿತ್ರ) ಬಂಧ ಮುಂತಾದ ಅತಿರೇಕಗಳಾಗಲಿ ಅತಿಯಾದ ವರ್ಣನೆಯಾಗಲಿ ಅತಿಯಾದ ಉತ್ಪ್ರೇಕ್ಷೆ, ಶ್ಲೇಷೆ ಮುಂತಾದುವಾಗಲಿ ಅವನಲ್ಲಿಲ್ಲ. ರಸಭಾವಗಳು ಸಹಜವಾಗಿಯೇ ಮೂಡಿಬರಲನುಕೂಲವಾದ ಮಧುರವಾದ ಲಲಿತವಾದ ಭಾಷೆಯಲ್ಲಿ, ಸರಳವಾದ ಶೈಲಿಯಲ್ಲಿ, ಕಾವ್ಯ ರಚಿಸುವ ಅಪೂರ್ವಶಕ್ತಿ ಕಾಳಿಸದಾಸನೊಬ್ಬನಿಗೇ ಎಂಬುದರಲ್ಲಿ ಸಂದೇಹವಿಲ್ಲ.

[8] ಅರ್ಥ— ಕಾಳಿದಾಸನ ಮಾತುಗಳ ಸಾರವನ್ನು ಕಾಳಿದಾಸ ಮತ್ತು ಸರಸ್ವತಿ ಬಲ್ಲರು. ಅಥವಾ ಸಾಕ್ಷಾತ್ ಬ್ರಹ್ಮ ಮಾತ್ರ ಬಲ್ಲ; ನನ್ನಂತಹ ಇತರರಲ್ಲ.



## ೩. ಅಶ್ವಘೋಷ (ಕ್ರಿ.ಶ. ೨ನೆಯ ಶತಮಾನ)

ಅಶ್ವಘೋಷನು ಕಾನಿಷ್ಕನ ಸಮಕಾಲೀನ. ಆದ್ದರಿಂದ ಕ್ರಿ.ಶ. ೨ನೆಯ ಶತಮಾನದ ಮಧ್ಯಭಾಗದಲ್ಲಿದ್ದವನು. ಅವನು ರಚಿಸಿರುವ ಸೌಂದರನಂದದ ಕೊನೆಯ ಉಪಸಂಹಾರವಾಕ್ಯದಿಂದ ಅವನು ಸಾಕೇತದವನೆಂದೂ ಸುವರ್ಣಾಕ್ಷಿಯ ಮಗನೆಂದೂ ತಿಳಿದುಬರುತ್ತದೆ. ಅವನಿಗೆ ಆಚಾರ್ಯಭದಂತ, ಮಹಾವಾದಿ, ಭಿಕ್ಷು ಮುಂತಾದ ಅನೇಕ ಬಿರುದುಗಳಿದ್ದುವು. ಅವನು ಬೌದ್ಧ ಮತದ ತತ್ವಗಳನ್ನು ಪ್ರತಿಪಾದಿಸುವಾಗ ಕುದುರೆಗಳೂ ಕೂಡ ಏಕಾವಧಾನದಿಂದ ಅದನ್ನು ಕೇಳುತ್ತಾ ಆಹಾರದ ಕಡೆಯೂ ಗಮನವಿಲ್ಲದೆ ಸಂತೋಷದಿಂದ ಕೆನೆಯುತ್ತಿರುತ್ತಿದ್ದುವೆಂದೂ, ಈ ಕಾರಣದಿಂದಲೇ ಅವನಿಗೆ 'ಅಶ್ವಘೋಷ' ಎಂಬ ಹೆಸರು ಬಂದಿತೆಂದೂ ಹೇಳುತ್ತಾರೆ. ಅವನು ಪರಿಣಾಮಕಾರಿಯಾದ ರೀತಿಯಲ್ಲಿ ತತ್ವೋಪದೇಶ ಮಾಡುತ್ತಿದ್ದ ಪ್ರಭಾವಶಾಲಿಯಾದ ಆಚಾರ್ಯನಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ.

ಅಶ್ವಘೋಷನ ಗ್ರಂಥಗಳು—ಅಶ್ವಘೋಷನು ಬುದ್ಧಚರಿತ, ಸೌಂದರನಂದ ಎಂಬ ಎರಡು ಮಹಾಕಾವ್ಯಗಳನ್ನೂ ಶಾರಿಪುತ್ರಪ್ರಕರಣ ಎಂಬ ರೂಪಕವನ್ನೂ ಸೂತ್ರಾಲಂಕಾರ ಎಂಬ ಚಂಪೂಕಾವ್ಯವನ್ನೂ ಮತ್ತು ವಜ್ರಸೂಚೀ, ಗಂಡೀಸ್ತೋತ್ರಗಾಥಾ ಎಂಬ ಲಘುಕಾವ್ಯಗಳನ್ನೂ ರಚಿಸಿದ್ದಾನೆ.

**ಬುದ್ಧಚರಿತದಲ್ಲಿ** ೨೮ ಸರ್ಗಗಳಿದ್ದುವೆಂದು ತಿಳಿದುಬರುತ್ತದೆ. ಈಗ ನಮಗೆ ೧೩ ಸರ್ಗಗಳು ಮಾತ್ರ ಉಪಲಬ್ಧವಾಗಿವೆ[1] ಬುದ್ಧನ ವಿಚಾರವಾಗಿ ನಾನಾ ಮೂಲಗಳಿಂದ ದೊರಕಬಹುದಾದ ಎಲ್ಲ ಅಂಶಗಳನ್ನೂ ವ್ಯವಸ್ಥಿತ ರೀತಿಯಲ್ಲಿ ಅಶ್ವಘೋಷನು ಒಟ್ಟುಗೂಡಿಸಿ ಬುದ್ಧಚರಿತವನ್ನು ರಚಿಸಿದ್ದಾನೆಂದು ಹೇಳಬಹುದು. ಆದರೂ ಇದು ಕೇವಲ ಬೌದ್ಧಮತೀಯ ಗ್ರಂಥವಾಗಿಲ್ಲ; ಕಾಳಿದಾಸನ ಮಹಾಕಾವ್ಯಗಳಲ್ಲಿ ಕಂಡುಬರುವ ಎಲ್ಲ ಕಾವ್ಯಲಕ್ಷಣಗಳನ್ನೂ ಒಳಗೊಂಡ ಒಂದು ಸುಂದರವಾದ ಮಹಾಕಾವ್ಯವೇ ಆಗಿದೆ. ಅಶ್ವಘೋಷನು ಕಾಳಿದಾಸನ ಕಾವ್ಯಗಳಿಂದ ಸ್ಫೂರ್ತಿಹೊಂದಿ ಅವುಗಳನ್ನು ತನ್ನ ಕಾವ್ಯಗಳಲ್ಲಿ

[1] ಬುದ್ಧಚರಿತ ಕಾವ್ಯದ ಕೊನೆಯ ೧೪ (೧೫ರಿಂದ ೨೮) ಸರ್ಗಗಳನ್ನು ಆಧುನಿಕರಾದ ಶ್ರೀರಾಮಚಂದ್ರಶಾಸ್ತ್ರಿ ಎಂಬುವರು ಚೀನಾ ಮತ್ತು ಟಿಬೆಟ್ ಭಾಷೆಗಳಲ್ಲಿರುವ ಬುದ್ಧಚರಿತೆಯ ಆಧಾರದಮೇಲೆ ಸ್ವಪರಿಶ್ರಮದಿಂದ ರಚಿಸಿ ಪ್ರಕಟಿಸಿದ್ದಾರೆ. ೧೯ನೇ ಶತಮಾನದ ಅಮೃತಾನಂದರು (೧೩ನೆಯ ಸರ್ಗದಿಂದ ಮುಂದಕ್ಕೆ) ೪ ಸರ್ಗಗಳನ್ನು ರಚಿಸಿದ್ದಾರೆ.

ಅನುಕರಣಮಾಡಿದ್ದಾನೆಂದು[2] ಹೇಳಬೇಕಾಗುತ್ತದೆ. ರಾಮಾಯಣ ಮಹಾಭಾರತಗಳಿಂದ ಅಶ್ವಘೋಷ ಕಾಳಿದಾಸ ಇಬ್ಬರೂ ಪ್ರಭಾವಿತರಾಗಿದ್ದಾರೆಂಬುದರಲ್ಲಿ ಸಂದೇಹವೇ ಇಲ್ಲ. ಈಗ ಉಪಲಬ್ಧವಾಗಿರುವ ಪ್ರಾಚೀನ ಮಹಾಕಾವ್ಯಗಳಲ್ಲಿ ಬುದ್ಧಚರಿತವೂ ಒಂದು. ಇದು ಸಂಘವರ್ಮನಿಂದ ಚೀನಾಭಾಷೆಗೆ ಕ್ರಿ.ಶ. ೪೧೪ರಿಂದ ೪೨೧ರೊಳಗೆ ಪರಿವರ್ತಿತವಾಯಿತು.

**ಸೌಂದರನಂದ** ಮಹಾಕಾವ್ಯದಲ್ಲಿ ೨೦ ಸರ್ಗಗಳಿವೆ. ಬುದ್ಧಚರಿತದಂತೆಯೇ ಇದೂ ಸುಂದರವಾದ ಶೈಲಿಯಲ್ಲಿ ರಚಿತವಾದ ಉನ್ನತಮಟ್ಟದ ಕಾವ್ಯ. ರಾಜಕುಮಾರ ನಂದನು ಬೌದ್ಧಭಿಕ್ಷುವಾದುದೇ ಈ ಕಾವ್ಯದ ವಸ್ತು.

**ಗಂಡೀಸ್ತೋತ್ರಗಾಥಾ** ಎಂಬುದೊಂದು ಭಾವಗೀತಾತ್ಮಕವಾದ ಲಘುಕಾವ್ಯ. ಇದರಲ್ಲಿ ಕವಿಯು ತನ್ನ ಪದ್ಯರಚನಾ ಪ್ರೌಢಿಮೆಯನ್ನು ತೋರಿಸಿದ್ದಾನೆ. ಉದ್ದವಾದ ಮರದ ಕೊರಡನ್ನು ಗದೆಯ ಆಕಾರದ ದಾಂಡಿನಿಂದ ಹೊಡೆಯುವಾಗ ಹೊರಬರುವ ಧ್ವನ್ಯಾತ್ಮಕವಾದ ತತ್ತ್ವೋಪದೇಶವನ್ನು ಇದು ನಿರೂಪಿಸುತ್ತದೆ.

**ವಜ್ರಸೂಚೀ** ಒಂದು ಲಘುಕಾವ್ಯ. ಇದು ಕ್ರಿ.ಶ. ೯೭೩-೯೮೧ರಲ್ಲಿ ಚೀನಾಭಾಷೆಗೆ ಪರಿವರ್ತಿತವಾಗಿ ಚೀನೀಯರ ತ್ರಿಪಿಟಕಗಳಲ್ಲಿ ಸೇರಿಸ್ಪಟ್ಟಿತೆಂದು ತಿಳಿದುಬರುತ್ತದೆ. ಇದನ್ನು ಬರೆದವನು ಧರ್ಮಕೀರ್ತಿಯೆಂದೂ ಅಶ್ವಘೋಷನಲ್ಲವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.

ಸೂತ್ರಾ**ಲಂಕಾರವು** ಈಗ ಉಪಲಬ್ಧವಾಗಿಲ್ಲ. ಕಿ. ಶ. ೪೦೧ರಲ್ಲಿ ಕುಮಾರಜೀವನು ಬರೆದ ಅದರ ಚೀನಾಭಾಷಾಂತರ ಮಾತ್ರ ದೊರಕುತ್ತದೆ. ಈ ಭಾಷಾಂತರದಂತೆಯೇ ಮೂಲಗ್ರಂಥವೂ ಗದ್ಯಪದ್ಯಾತ್ಮಕವಾದ ಚಂಪೂ ಕಾವ್ಯವಾಗಿ ರಚಿತವಾಗಿದ್ದಿರಬೇಕೆಂದು ಹೇಳಬಹುದು. ಇದು ಬೌದ್ಧ ಜಾತಕಗಳ ಮತ್ತು ಅವದಾನಗಳ ಸಾರಾಂಶವನ್ನು ನಿರೂಪಿಸುತ್ತದೆ. ಇದಕ್ಕೆ ಕಲ್ಪನಾಮಂಡಿತಕವೆಂಬ ಹೆಸರೂ ಇದೆ.

ಅಶ್ವಘೋಷನು[3] ಉತ್ತಮ ಶ್ರೇಣಿಯ ಸಂಸ್ಕೃತ ಕವಿಗಳಲ್ಲಿ ಪರಿಗಣಿತನಾದವನು. ಅನೇಕ ವೃತ್ತಗಳನ್ನು ಬಹಳ ಕೌಶಲದಿಂದ ತನ್ನ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾನಲ್ಲದೆ ಅಲಂಕಾರಗಳನ್ನಳವಡಿಸಿಕೊಳ್ಳುವುದರಲ್ಲೂ ಉಚಿತಜ್ಞತೆಯನ್ನು ತೋರಿಸಿದ್ದಾನೆ. ಇವನ ಭಾಷೆ ಸರಳ, ಶೈಲಿ ಲಲಿತ.

---

2 ಅಶ್ವಘೋಷನಿಗಿಂತ ಕಾಳಿದಾಸ ಅರ್ವಾಚೀನ ಎಂದು ಭಾವಿಸುವ ವಿದ್ವಾಂಸರು ಕಾಳಿದಾಸನೇ ಅಶ್ವಘೋಷನ ಕಾವ್ಯಗಳಿಗೆ ಋಣಪಟ್ಟಿದ್ದಾನೆಂದು ಹೇಳುತ್ತಾರೆ.



## ೪. ಬುದ್ಧಘೋಷ (ಕ್ರಿ. ಶ. ೪ನೆಯ ಶತಮಾನ)

ಬುದ್ಧಘೋಷನೂ ಅಶ್ವಘೋಷನಂತೆಯೇ ಒಬ್ಬ ಬೌದ್ಧ ಕವಿ. ಅವನ **ಪದ್ಯಚೂಡಾಮಣಿಯೂ** ೧೦ ಸರ್ಗಗಳುಳ್ಳ ಮಹಾಕಾವ್ಯವಾಗಿದ್ದು ಬುದ್ಧನ ಜೀವನವನ್ನು ನಿರೂಪಿಸುತ್ತದೆ. ಕಥಾಸ್ವರೂಪದಲ್ಲಿ ಬುದ್ಧಚರಿತಕ್ಕೂ ಪದ್ಯಚೂಡಾಮಣಿಗೂ ಅಷ್ಟೇನೂ ವ್ಯತ್ಯಾಸವಿಲ್ಲ. ಈ ಕವಿಯು ಕಾಳಿದಾಸ ಅಶ್ವಘೋಷರ ಕಾವ್ಯಗಳಿಂದ ಪ್ರಭಾವಿತನಾಗಿದ್ದನೆಂದು ಧಾರಾಳವಾಗಿ ಹೇಳಬಹುದು. ತ್ರಿಪಿಟಕಗಳ ಪಾಳೀಪಾಠವನ್ನು ಸಂಪಾದಿಸಿಕೊಂಡು ಬರಲು ಬುದ್ಧಘೋಷನನ್ನು ಸಿಂಹಳಕ್ಕೆ ಕ್ರಿ.ಶ. ೩೫೭ರಲ್ಲಿ ಕಳುಹಿಸಲಾಗಿತ್ತೆನ್ನುವುದರಿಂದಲೂ ಅವನ ಪದ್ಯಚೂಡಾಮಣಿಯು ಕ್ರಿ.ಶ. ೪೧೮ರಲ್ಲಿ ಚೀನಾ ಭಾಷೆಗೆ ಪರಿವರ್ತಿತವಾದುದರಿಂದಲೂ ಅವನು ಕ್ರಿ.ಶ. ನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿದ್ದವನೆಂದು ಹೇಳಬಹುದು.

ಬುದ್ಧಘೋಷನು ಪಾಳೀ ಮತ್ತು ಮಾಗಧೀ ಭಾಷೆಗಳಲ್ಲಿ ಅನೇಕ ಬೌದ್ಧ ಗ್ರಂಥಗಳನ್ನೂ ವ್ಯಾಖ್ಯಾನಗಳನ್ನೂ ಕಥೆಗಳನ್ನೂ ಬರೆದಿದ್ದಾನೆ. ಅವನು ಸಿಂಹಳಕ್ಕೆ ಹೋಗಿದ್ದಾಗ ಅಲ್ಲಿನ ಶ್ರಮಣರಿಂದ 'ಸಂಸ್ಕೃತಭಾಷೆ ಬಾರದವನು' ಎಂದು ಹೀಯ್ಯಾಳಿಸಲ್ಪಟ್ಟು ತನ್ನ ಪಾಂಡಿತ್ಯಪ್ರದರ್ಶನಕ್ಕಾಗಿ ಈ ಪದ್ಯಚೂಡಾಮಣಿ ಕಾವ್ಯವನ್ನು ರಚಿಸಿದನೆಂದೂ ಸಂಸ್ಕೃತದಲ್ಲಿ ಉಪನ್ಯಾಸ ಮಾಡಲಾರಂಭಿಸಿದನೆಂದೂ ಹೇಳುವುದುಂಟು.

ಪದ್ಯಚೂಡಾಮಣಿಯ ಶೈಲಿ ಮನೋಹರವಾಗಿದೆ. ಭಾಷೆ ಲಲಿತವಾಗಿದೆ. ವರ್ಣನೆ ಸೊಗಸಾಗಿದೆ. ಉದಾಹರಣೆಗೆ ಈ ಚಂದ್ರೋದಯ ವರ್ಣನೆ ನೋಡಿ.--

ಪತಿಃ ಪಶೂನಾಮಿವ ಕಾಲಕೂಟಂ ಪತಿಂ ನದೀನಾಮಿನ ಕುಂಭಯೋನೇಃ ।
ಆದಾಯ ಚಂದ್ರಃ ಶರಪಲ್ಲವೇನ ಗಾಢಾಂಧಕಾರಂ ಕಬಳೀಚಕಾರ ॥ ೮-೪೦.

## ೫. ಮೇಂಠ (ಕ್ರಿ.ಶ. ೫ನೆಯ ಶತಮಾನ)

ಮೇಂಠನಿಗೆ ಭರ್ತೃಮೇಂಠ, ಹಾಸ್ತಿಪಕ ಎಂಬ ಹೆಸರುಗಳೂ ಇದ್ದುವು. ಇವನು ರಚಿಸಿದ **ಹಯಗ್ರೀವವಧಕಾವ್ಯ** ಈಗ ಉಪಲಬ್ಧವಾಗಿಲ್ಲ. ಆ ಕಾವ್ಯದ ಮನೋಹರತೆಗೆ ಮೆಚ್ಚಿ ಸ್ವತಃ ಕವಿಯಾಗಿದ್ದ ರಾಜಾ ಮಾತೃಗುಪ್ತನು ಒಂದು ಚಿನ್ನದ ತಟ್ಟೆಯನ್ನು ಬಹುಮಾನವಾಗಿ ಕೊಟ್ಟು ಆ ಗ್ರಂಥದ 'ಸೌರಭ

---

3 ಮೇಲೆ ಹೇಳಿದ ಗ್ರಂಥಗಳಲ್ಲದೆ ಅಶ್ವಘೋಷರಚಿತವಾದ ೫ ಬಿಡಿ ಶ್ಲೋಕಗಳು ಸುಭಾಷಿತಾವಳಿಯಲ್ಲಿ (ನಂ. ೧೯೮, ೫೨೮, ೫೨೯, ೩೧೦೦, ೩೧೪೨) ದೊರಕುತ್ತವೆ.

ನೆಲ ಸೋಂಕದಿರಲು' ಅದನ್ನು ಆ ತಟ್ಟೆಯ ಮೇಲೆಯೇ ಇಟ್ಟು ಕಟ್ಟಬೇಕೆಂದು ಆದೇಶ ಮಾಡಿದುದಾಗಿ ಹೇಳಿಕೆಯಿದೆ. ಮೇಂಠನು ಸುಬಂಧು, ಭಾರವಿ, ಬಾಣರಿಗೆ ಸಮಾನನೆಂದು ಮಂಖನು ಹೇಳಿದ್ದಾನೆ. ಮೇಂಠನ ಕೆಲವು ಸುಂದರವಾದ ಶ್ಲೋಕಗಳು ಸುಭಾಷಿತ ಗ್ರಂಥಗಳಲ್ಲಿ ಉದ್ಧೃತವಾಗಿವೆ. ಹಯಗ್ರೀವವಧದ ಮೊದಲನೆಯ ಶ್ಲೋಕವು ಕಾವ್ಯಮೀಮಾಂಸಾದಲ್ಲಿ ರಾಜಶೇಖರನಿಂದ ಉದಾಹೃತವಾಗಿದೆ.

ಮಾತೃಗುಪ್ತನು ಪ್ರವರಸೇನನಿಗಿಂತ ಹಿಂದಿನವನೆಂದು ಕಲ್ಹಣನು ಹೇಳಿದ್ದಾನೆ. ಆದ್ದರಿಂದ ಮಾತೃಗುಪ್ತನ ಸಮಕಾಲೀನನಾದ ಮೇಂಠನು ಕ್ರಿ.ಶ. ೫ನೆಯ ಶತಮಾನದವನಾಗಿರಬೇಕು.

### ೬. **ಪ್ರವರಸೇನ** (ಕ್ರಿ.ಶ. ೬ನೆಯ ಶತಮಾನ)

**ಸೇತುಬಂಧ** ಕಾವ್ಯಕ್ಕೆ ಸೇತುಕಾವ್ಯ, ರಾವಣವಧ ಎಂಬ ಇತರ ಹೆಸರುಗಳೂ ಇವೆ. ಇದು ಮಹಾರಾಷ್ಟ್ರೀ ಪ್ರಾಕೃತದಲ್ಲಿ ರಚಿತವಾದ ಮಹಾಕಾವ್ಯ. ಇದರಲ್ಲಿ ರಾಮನ ಕಥೆಯೇ ಚಿತ್ರಿತವಾಗಿದ್ದರೂ, ಕಾಶ್ಮೀರದ ರಾಜಾ ಪ್ರವರಸೇನನು ವಿತಸ್ತಾ (ಈಗಿನ ಝೀಲಮ) ನದಿಯಮೇಲೆ ನಿರ್ಮಿಸಿದ ನಾವೆಗಳ ಸೇತುವಿನ ಸ್ಮಾರಕವಿದೆಂದು ಹೇಳಲಾಗುತ್ತಿದೆ. ದಂಡಿ, ಬಾಣ ಇಬ್ಬರೂ ಈ ಕಾವ್ಯ ರಚಿಸಿದ ಕವಿಯನ್ನು ಕೊಂಡಾಡಿರುವುದರಿಂದ ಇದರ ರಚನಾಕಾಲ ೬ನೆಯ ಶತಮಾನಕ್ಕಿಂತ ಈಚಿನದಾಗಿರಲು ಸಾಧ್ಯವಿಲ್ಲ.

ಸ್ವತಃ ಕವಿಯೂ, ಪಂಡಿತರಿಗೆ ಆಶ್ರಯದಾತನೂ ಆಗಿದ್ದ ಪ್ರವರಸೇನನೇ ಈ ಸೇತುಬಂಧಕಾವ್ಯವನ್ನೂ ರಚಿಸಿರಬೇಕೆಂಬುದೇ ವಿದ್ವಾಂಸರ ಅಭಿಪ್ರಾಯ. ಇದು ಕಾಳಿದಾಸ ರಚಿತವೆಂಬ ಮತವೂ ಇದೆ.

### ೭. ಭಾರವಿ (ಕ್ರಿ.ಶ. ೬ನೆಯ ಶತಮಾನ)

ಕ್ರಿ.ಶ. ೬೩೪ರ ಐಹೊಳೆ ಶಾಸನದಲ್ಲಿ ಕಾಳಿದಾಸನೊಡನೆ ಭಾರವಿಯ ಹೆಸರಿನ ಉಲ್ಲೇಖವೂ ಇರುವುದರಿಂದ ಈ ಕವಿಯು ಕ್ರಿ.ಶ. ೬ನೆಯ ಶತಮಾನಕ್ಕಿಂತ ಈಚಿನವನಲ್ಲ. ಕಿರಾತಾರ್ಜುನೀಯಂ ಎಂಬ ೧೮ ಸರ್ಗಗಳ ಮಹಾಕಾವ್ಯವೊಂದೇ ಭಾರವಿ ವಿರಚಿತವಾಗಿ ನಮಗೆ ದೊರೆತಿರುವುದು. ಮಹಾಭಾರತದ ವನಪರ್ವದಲ್ಲಿ ಬರುವ ಕಿರಾತರೂಪಿ ಶಿವನಿಗೂ ಅರ್ಜುನನಿಗೂ ನಡೆದ ಯುದ್ಧವೇ ಕಾವ್ಯದ ವಸ್ತು. ಭಾರವಿಯು ಈ ಕಾವ್ಯದ ೧೮ನೆಯ ಸರ್ಗದ ೫ನೆಯ ಶ್ಲೋಕದಲ್ಲಿ ಶಿವನ ಎದೆಯಮೇಲೆ ಅರ್ಜುನನಿಂದಾದ ಮುಷ್ಟಿಪ್ರಹಾರ



ಗಳನ್ನು ಸಹ್ಯಪರ್ವತದ ವಿಶಾಲವಾದ ತಪ್ಪಲು ಪ್ರದೇಶದಮೇಲೆ ಅಪ್ಪಳಿಸಿ ಹಿಂದೂಡಲ್ಪಡುವ ಸಮುದ್ರದ ಅಲೆಗಳಿಗೆ ಹೋಲಿಸಿದ್ದಾನೆ. ಮೊದಲನೆಯ ಸರ್ಗದ ಕೊನೆಯ ಶ್ಲೋಕದಲ್ಲೂ ಒಂಭತ್ತನೆಯ ಸರ್ಗದ ೨ ಮತ್ತು ೫ನೆಯ ಶ್ಲೋಕಗಳಲ್ಲೂ ಸೂರ್ಯನು ಸಮುದ್ರದಲ್ಲಿ ಮುಳುಗುವುದನ್ನು ವರ್ಣಿಸಿದ್ದಾನೆ. ಈ ಕಾರಣದಿಂದ ಅವನು ಪಶ್ಚಿಮದ (ಅರಬ್ಬೀ) ಸಮುದ್ರತೀರದಲ್ಲಿ ನೆಲಸಿದ್ದಿರಬೇಕೆಂದು ಊಹಿಸಲವಕಾಶವಿದೆ. ಕಿರಾತಾರ್ಜುನೀಯದ ಜತೆಗೆ ಬೇರೆ ಯಾವ ಕಾವ್ಯಾದಿಗಳನ್ನು ಭಾರವಿ ರಚಿಸಿದನೋ ತಿಳಿಯದು. ಕಿರಾತಾರ್ಜುನೀಯವಂತು ಸುಪ್ರಸಿದ್ಧವಾಗಿದೆ. ಇದಕ್ಕೆ ಮಲ್ಲಿನಾಥನೇ ವ್ಯಾಖ್ಯಾನ ಬರೆದಿದ್ದಾನೆ. ಭಾರವಿಯ ಕಾವ್ಯ 'ನಾರಿಕೇಳಪಾಕ' ಎಂಬುದೇ ಮಲ್ಲಿನಾಥನ ಅಭಿಪ್ರಾಯವೂ. ವಾಗ್ವೈಖರಿಗೂ ಅರ್ಥಗೌರವಕ್ಕೂ ಭಾರವಿ ಸುಪ್ರಸಿದ್ಧ. ಅವನ ಭಾಷೆಯಲ್ಲಿರುವ ಸ್ವಾಭಾವಿಕ ಮಾಧುರ್ಯ ಸಾಮಾನ್ಯವಾಗಿ ಇತರ ಕವಿಗಳಲ್ಲಿಲ್ಲ. "ಪ್ರಕೃತಿಮಧುರಾ ಭಾರವಿಗಿರಃ" ಎಂಬ ನುಡಿಯಲ್ಲಿ ಅತ್ಯುಕ್ತಿಯಿಲ್ಲ. ಕಾಳಿದಾಸನ ಶೈಲಿ ಲಲಿತವೂ ಸುಂದರವೂ ಆಗಿದ್ದರೆ ಭಾರವಿಯದು ಗಂಭೀರವೂ ಪ್ರೌಢವೂ ಆಗಿದೆ. ಅವನ ಒಂದು [4]ಶ್ಲೋಕದ ಸೊಬಗು ಅವನಿಗೆ "ಛತ್ರಭಾರವಿ" ಎಂಬ ಹೆಸರುಬರುವಂತೆ ಮಾಡಿದೆ. ಉಪಮಾನಗಳಿಗೆ ಕಾಳಿದಾಸ ಪ್ರಸಿದ್ಧನಾಗಿರುವಂತೆ [5]ಅರ್ಥಗೌರವಕ್ಕೆ ಭಾರವಿ ಹೆಸರುವಾಸಿಯಾಗಿದ್ದಾನೆ. ಕಾಳಿದಾಸನಲ್ಲಿಲ್ಲದ ಶಬ್ದಾಡಂಬರ, ಚಿತ್ರಬಂಧ ಮುಂತಾದುವು ಭಾರವಿಯಲ್ಲಿವೆ. ಕಿರಾತಾರ್ಜುನೀಯದ ೧೫ನೆಯ ಸರ್ಗದ ಕೆಲವು ಶ್ಲೋಕಗಳನ್ನು [6]ಅನುಲೋಮವಾಗಿಯಾದರೂ ಓದಬಹುದು, ವಿಲೋಮವಾಗಿಯಾದರೂ ಓದಬಹುದು. ಅರ್ಥಮಾತ್ರ ಭಿನ್ನ

---

4 ಉತ್ಫುಲ್ಲಸ್ಥಲನಲಿನೀವನಾದಮುಷ್ಮಾತ್+ಉದ್ಧೂತಃ ಸರಸಿಜಸಂಭವಃ ಪರಾಗಃ ।
ವಾತ್ಯಾಭಿರ್ವಿಯತಿ ವಿಸರ್ಜಿತಃ ಸಮಂತಾತ್ ಆಧತ್ತೇ ಕನಕಮಯಾತಪತ್ರಲಕ್ಷ್ಮೀಂ ॥
— ಕಿರಾತಾರ್ಜುನೀಯ v ೩೯.

5 ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಂ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

6 ನಿಶಿತಾಸಿರತೋಽಭೀಕೋ ನ್ಯೇಜತೇಽಮರಣಾ ರುಚಾ ।
ಸಾರತೋ ನ ವಿರೋಧೀ ನ ಸ್ವಾಭಾಸೋ ಭರವಾನುತ ॥ xv 22
ಇದನ್ನೇ ಕೊನೆಯಿಂದ ಹಿಂದಕ್ಕೆ ಓದಿದರೆ ಮುಂದಿನ ಶ್ಲೋಕ.
ತನುವಾರಭಸೋ ಭಾಸ್ವಾನಧೀರೋಽವಿನತೋರಸಾ ।
ಚಾರುಣಾ ರಮತೇ ಜನ್ಯೇ ಕೋಽಭೀತೋ ರಸಿತಾಶಿನಿ ॥ xv 23

ವಾಗಿರುತ್ತದೆ. [7]ಒಂದೆರಡೇ ಅಕ್ಷರಗಳನ್ನು ಉಪಯೋಗಿಸಿ ರಚಿತವಾದ ಶ್ಲೋಕಗಳೂ ಇವೆ. ಆರ್ಷಪ್ರಯೋಗಗಳೂ ಭಾರವಿಯಲ್ಲಿ ಹೇರಳವಾಗಿವೆ.

ಕಿರಾತಾರ್ಜುನೀಯವು ಶ್ರೀ ಶಬ್ದದಿಂದ ಆರಂಭವಾಗಿರುವುದಲ್ಲದೆ ಅದರ ಪ್ರತಿಯೊಂದು ಸರ್ಗದ ಕೊನೆಯ ಶ್ಲೋಕದಲ್ಲೂ 'ಲಕ್ಷ್ಮೀ' ಶಬ್ದವಿರುವುದರಿಂದ ಅದು 'ಲಕ್ಷ್ಮೀಪದಲಾಂಛನ'ವುಳ್ಳ ಕಾವ್ಯ. 'ಹಿತಂ ಮನೋಹಾರಿ ಚ ದುರ್ಲಭಂ ವಚಃ i 14; ಸಹಸಾ ವಿದಧೀತ ನ ಕ್ರಿಯಾಂ' ii 30; 'ಸುಲಭಾ ರಮ್ಯತಾ ಲೋಕೇ ದುರ್ಲಭಂ ಹಿ ಗುಣಾರ್ಜನಂ' xi 11; 'ವಸಂತಿ ಹಿ ಪ್ರೇಮ್ಣಿ ಗುಣಾ ನ ವಸ್ತುನಿ' ಮುಂತಾದ ನಿತ್ಯಸತ್ಯಗಳಾದ ಅನುಭವೋಕ್ತಿಗಳನ್ನು ಈ ಕಾವ್ಯದಲ್ಲಿ ವಿಶೇಷವಾಗಿ ಕಾಣಬಹುದು.

## ೮. ಭಟ್ಟಿ (ಕ್ರಿ.ಶ. ೭ನೆಯ ಶತಮಾನ)

ಭಟ್ಟಿಕಾವ್ಯವೆಂದೇ ಪ್ರಸಿದ್ಧವಾಗಿರುವ "ರಾವಣವಧ" ಮಹಾಕಾವ್ಯ ಭಟ್ಟಿ ಕವಿಯಿಂದ ರಚಿತವಾದುದು. ಇದರಲ್ಲಿ ೨೨ ಸರ್ಗಗಳಿವೆ. ರಾಮಾಯಣದ ಕಥೆಯೇ ಕಾವ್ಯದ ವಸ್ತು. ಕೆಲವು ವ್ಯಾಕರಣಬದ್ಧ ಪ್ರಯೋಗಗಳನ್ನು ನಿರೂಪಿಸುವುದಕ್ಕಾಗಿಯೇ ಈ ಕಾವ್ಯ ರಚಿತವಾಯಿತೆಂಬುದು ಸ್ವತಃ ಸಿದ್ಧ. ಈ ಕಾವ್ಯದ ಕೊನೆಯಲ್ಲಿ ಕವಿಯೇ ಹೇಳಿರುವುದನ್ನು ಇಲ್ಲಿ ಗಮನಿಸಬಹುದು.—

ದೀಪತುಲ್ಯಃ ಪ್ರಬಂಧೋಽಯಂ ಶಬ್ದಲಕ್ಷಣಚಕ್ಷುಷಾಂ ।
ಹಸ್ತಾದರ್ಶ ಇವಾಂಧಾನಾಂ ಭವೇದ್ವ್ಯಾಕರಣಾದೃತೇ ॥—xxii 33
ವ್ಯಾಖ್ಯಾಗಮ್ಯಮಿದಂ ಕಾವ್ಯಂ ಉತ್ಸವಃ ಸುಧಿಯಾಮಲಂ ।
ಹತಾ ದುರ್ಮೇಧಸಶ್ಚಾಸ್ಮಿನ್ ವಿದ್ವತ್ಪ್ರಿಯತಯಾ ಮಯಾ ॥

ಭಟ್ಟಿಕಾವ್ಯ ಪಂಡಿತರ ಮೆಚ್ಚುಗೆಗಾಗಿಯೇ ಬರೆದುದು. ಅದಕ್ಕೆ ೧೩ ವ್ಯಾಖ್ಯಾನಗಳಿವೆ. ವ್ಯಾಖ್ಯಾನವಿಲ್ಲದೆ ಅದು ಅರ್ಥವಾಗುವ ಹಾಗೆಯೇ ಇಲ್ಲ. ರಾಜಾ ಶ್ರೀಧರಸೇನನ ಆಶ್ರಯದಲ್ಲಿ ವಲಭಿಯಲ್ಲಿ ಇದು ಬರೆಯಲ್ಪಟ್ಟಿದ್ದಾಗಿ ಕವಿಯೇ ಹೇಳಿಕೊಂಡಿದ್ದರೂ ಕ್ರಿ.ಶ. ೪೯೫ ರಿಂದ ೬೪೧ ರ ವರೆಗೆ ಆ ಹೆಸರಿನ ನಾಲ್ಕು ಬೇರೆ ಬೇರೆ ರಾಜರಿದ್ದುದರಿಂದ ಕವಿಯ ಕಾಲವನ್ನು ನಿಷ್ಕೃಷ್ಟವಾಗಿ ಹೇಳುವುದಕ್ಕಾಗುವುದಿಲ್ಲ.

7 ನ ನೋನನುನ್ನೋ ನುನ್ನೋನೋ ನಾನಾ ನಾನಾನನಾ ನನು ।
ನುನ್ನೋಽನುನ್ನೋ ನನುನ್ನೇನೋ ನಾನೇನಾ ನುನ್ನನುನ್ನನುತ್ ॥ xiv 14



ಈ ಭಟ್ಟಿ ಕವಿಯನ್ನು ಕ್ರಿ.ಶ. ೬೫೦ರಲ್ಲಿ ಕಾಲವಾದ ಭರ್ತೃಹರಿಯೆಂದೇ ಸಾಮಾನ್ಯವಾಗಿ ಹೇಳುವುದುಂಟು. ವತ್ಸಭಟ್ಟಿಯೇ ಈತನೆಂದೂ ಕೆಲ ವಿಮರ್ಶಕರ ಅಭಿಪ್ರಾಯ. ಇದೆಲ್ಲ ನಾಮಸಾಮ್ಯದಮೇಲೆ ರೂಢಿಗೆ ಬಂದಿರುವ ಊಹಾಪೋಹಗಳು.

## ೯. ಮಾಘ (ಕ್ರಿ.ಶ. ೭ನೆಯ ಶತಮಾನ)

**ಶಿಶುಪಾಲವಧ**ವೊಂದೇ ನಮಗೆ ಉಪಲಬ್ಧವಾಗಿರುವ ಮಾಘರಚಿತ ಕಾವ್ಯ. ಇದರಲ್ಲಿ ೨೦ ಸರ್ಗಗಳಿದ್ದು ಚೈದ್ಯರಾಜನಾದ ಶಿಶುಪಾಲನು ಶ್ರೀಕೃಷ್ಣನಿಂದ ಸಂಹೃತನಾದ ಕಥೆ ನಿರೂಪಿತವಾಗಿದೆ. ಮಹಾಕಾವ್ಯದ ಎಲ್ಲ ಲಕ್ಷಣಗಳೂ ಈ ಕಾವ್ಯದಲ್ಲಿವೆ. ಕಾವ್ಯದ ಉದ್ದಕ್ಕೂ ಪೌರಾಣಿಕ ವ್ಯಕ್ತಿಗಳ, ಕಥೆಗಳ, ಸನ್ನಿವೇಶಗಳ ಉಲ್ಲೇಖ ಹೇರಳವಾಗಿದೆ. ಈ ಕಾವ್ಯವು ಭಾರವಿಯ ಕಿರಾತಾರ್ಜುನೀಯದ ಅನುಕರಣವೆಂದೇ ಅನೇಕರ ಅಭಿಪ್ರಾಯ. ಭಾರವಿಯ ಕಾವ್ಯದಂತೆಯೇ ಇದೂ 'ಶ್ರೀ' ಪದಲಾಂಛಿತ; ಅಂದರೆ ಶ್ರೀಪದದಿಂದ ಕಾವ್ಯ ಆರಂಭವಾಗಿ ಪ್ರತಿ ಸರ್ಗದ ಕೊನೆಯ ಶ್ಲೋಕದಲ್ಲಿ ಶ್ರೀಪದದಿಂದ ಕೂಡಿದೆ. ಭಾರವಿಯಲ್ಲಿರುವಂತೆಯೇ ಇಲ್ಲಿಯೂ ಶಬ್ದಶ್ಲೇಷೆ, ಚಿತ್ರಬಂಧ ಮುಂತಾದುವು ವಿಶೇಷವಾಗಿವೆ. ೧೯ನೆಯ ಸರ್ಗದಲ್ಲಿ ಈ ಬಗೆಯ ಬಂಧಗಳು ತುಂಬಿವೆ. ಅಲ್ಲೇ ಒಂದು ಶ್ಲೋಕವನ್ನು ಕೊನೆಯಿಂದ ಹಿಂದಕ್ಕೆ ಓದಿದರೆ ಅದರ ಹಿಂದಿನ ಶ್ಲೋಕವೇ ಆಗುತ್ತದೆ. ಮಾಘನು ವ್ಯಾಕರಣಶಾಸ್ತ್ರಪಾರಂಗತ. ಅವನ ಶಬ್ದಸಂಪತ್ತಿ ಅಪಾರ.[8] ಇದು ಅವನ ಶಿಶುಪಾಲವಧದಲ್ಲಿ ಸ್ಪಷ್ಟವಾಗಿದೆ. ಅವನ ಇನ್ನೊಂದು ವೈಶಿಷ್ಟ್ಯವೇನೆಂದರೆ ಕಾಳಿದಾಸನ ಉಪಮೆ, ಭಾರವಿಯ ಅರ್ಥಗೌರವ, ದಂಡಿಯ ಪದಲಾಲಿತ್ಯ—ಈ ಮೂರೂ[9] ಒಟ್ಟುಗೂಡಿರುವಿಕೆ. ಮಾಘ ಕವಿಯ ಈ ಬಗೆಯ ಬಹುಮುಖವಾದ ಸಾಮರ್ಥ್ಯದಿಂದ ಭಾರವಿಯ ಕೀರ್ತಿ[10] ಕಂದಿಹೋಯಿತೆಂಬುದು ಪಂಡಿತರ ಅಭಿಪ್ರಾಯ.

ತಾನು ಧರ್ಮದೇವರಾಜನ ಮಂತ್ರಿಯಾದ ಸುಪ್ರಭದೇವನ ಮೊಮ್ಮಗನೆಂದೂ ದತ್ತಕನೆಂಬುವನ ಮಗನೆಂದೂ ಮಾಘನೇ ಶಿಶುಪಾಲವಧ ಕಾವ್ಯದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ಅವನು ಗುಜರಾತಿನವನಿರಬೇಕೆಂದು

8 ನವಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ ।

9 ಮೇಲಿನ ಅಡಿಟಪ್ಪಣಿ 5 ನೋಡಿ.

10 ತಾವದ್ಭಾ ಭಾರವೇರ್ಭಾತಿ ಯಾವನ್ಮಾಘಸ್ಯ ನೋದಯಃ ।
ಉದಿತೇ ತು ಪುನರ್ಮಾಘೇ ಭಾರವೇರ್ಭಾ ರವೇರಿವ ॥

ಊಹಿಸಲಾಗಿದೆ. ಯಾಕೋಬಿಯು ಅವನನ್ನು ಕ್ರಿ.ಶ. ೬ನೆಯ ಶತಮಾನದವನೆಂದು ಹೇಳುತ್ತಾನೆ. ಶಿಶುಪಾಲವಧದಲ್ಲಿ ಶ್ರೀಹರ್ಷನ ನಾಗಾನಂದದ ಉಲ್ಲೇಖವಿದೆ. ಶ್ರೀಹರ್ಷನ ಕಾಲ ಕ್ರಿ.ಶ. ೬೦೬-೬೪೮. ಆದ್ದರಿಂದ ಮಾಘನ ಕಾಲ ೭ನೆಯ ಶತಮಾನಕ್ಕಿಂತ ಹಿಂದಿನದಾಗಲಾರದು; ೭ನೆಯ ಶತಮಾನವೇ ಎಂಬುದು ಬಹುಸಮ್ಮತ; ೮ನೆಯ ಶತಮಾನದ ಪೂರ್ವಾರ್ಧವೆಂದು ಹೇಳುವವರೂ ಇದ್ದಾರೆ. ಮಾಘನು ಶಿಶುಪಾಲವಧದ ಜತೆಗೆ ಇನ್ನೂ ಬೇರೆ ಕಾವ್ಯಾದಿಗಳನ್ನು ಬರೆದಿರಬೇಕು. ಏಕೆಂದರೆ ಶಿಶುಪಾಲವಧದಲ್ಲಿಲ್ಲದ ಕೆಲವು ಶ್ಲೋಕಗಳು ಸುಭಾಷಿತ ಗ್ರಂಥಗಳಲ್ಲಿ ಮಾಘಕರ್ತೃಕವೆಂದು ಉಲ್ಲೇಖಗೊಂಡಿವೆ.

ಮಾಘನದು ಗಂಭೀರವಾದ, ಪ್ರೌಢವಾದ ಶೈಲಿ. ಸಂದರ್ಭಕ್ಕೆ ತಕ್ಕ ಅಲಂಕಾರಗಳನ್ನು ಬಳಸುವುದರಲ್ಲೂ, ಹೇಳುವ ಮಾತು ಮನಸ್ಸಿಗೆ ನಾಟುವಂತೆ ಪದಪ್ರಯೋಗ ಮಾಡುವುದರಲ್ಲೂ, ಎಂತಹ ಸನ್ನಿವೇಶವನ್ನೇ ಆಗಲಿ ಮನಶ್ಚಕ್ಷುವಿನ ಮುಂದೆ ಸ್ಪಷ್ಟವಾಗಿ[11] ಚಿತ್ರಿತವಾಗುವಂತೆ ವರ್ಣಿಸುವುದರಲ್ಲೂ ಮಾಘನದು ಪಳಗಿದ ಕೈ. ಆದರೆ ಕೇವಲ ಪಾಂಡಿತ್ಯಪ್ರದರ್ಶನಕ್ಕೇ ಮಾಘ ಇಳಿದುಬಿಡುವುದೂ ಉಂಟು. ಅದು ಅವನ ಕಾಲದಲ್ಲಿದ್ದ ಒಂದು ಚಾಳಿ.

'ಸರ್ವಃ ಸ್ವಾರ್ಥಂ ಸಮೀಹತೇ' ii 65; 'ಕ್ಷಣೇ ಕ್ಷಣೇ ಯನ್ನವತಾಮುಪೈತಿ ತದೇವ ರೂಪಂ ರಮಣೀಯತಾಯಾಃ' iv 17 ; ಮುಂತಾದ ಅನೇಕ ಪ್ರಸಿದ್ಧ ಸೂಕ್ತಿಗಳು ಶಿಶುಪಾಲವಧದಿಂದ ಆರಿಸಿ ತೆಗೆದಂತಹವು.

## ೧೦. ಕುಮಾರದಾಸ (ಕ್ರಿ.ಶ. ೭ನೆಯ ಶತಮಾನ)

ಕುಮಾರದಾಸನಿಗೆ ಕುಮಾರಭಟ್ಟ, ಭಟ್ಟಕುಮಾರ ಎಂಬ ಹೆಸರುಗಳೂ ಇವೆ. ಈತನಿಂದ ರಚಿತವಾದ ಜಾನಕೀಹರಣ ಒಂದು ಮಹಾಕಾವ್ಯ. ರಾಮಾಯಣದ ಕಥೆಯೇ ಇದರ ವಸ್ತು. ಈ ಕಾವ್ಯವು ಸಮಗ್ರವಾಗಿ ಉಪಲಬ್ಧವಾಗಿಲ್ಲ. ಸಿಂಹಳೀ ಭಾಷೆಯಲ್ಲಿ ಈ ಕಾವ್ಯದ ಮೊದಲ ೧೪ ಸರ್ಗಗಳಿಗೂ ೧೫ನೆಯ ಸರ್ಗದ ಒಂದು ಭಾಗಕ್ಕೂ ಪದಶಃ ಅರ್ಥಕೊಟ್ಟಿರುವ ವ್ಯಾಖ್ಯಾನವೊಂದು ಇದೆ. ಇದರ ಆಧಾರದ ಮೇಲೆ ಜಾನಕೀಹರಣದ ಸಂಸ್ಕೃತ ರೂಪವನ್ನು ರಚಿಸಲಾಗಿದ್ದರೂ ಅದೇ ಮೂಲರೂಪವೆಂದು [12]ಹೇಳಲಾಗುವುದಿಲ್ಲ. ಮೂಲಗ್ರಂಥದಲ್ಲಿ ಎಷ್ಟು ಸರ್ಗಗಳಿದ್ದುವೆಂದು ಹೇಳುವುದೂ ಕಷ್ಟ. ಮದ್ರಾಸಿನಲ್ಲಿರುವ ಮಾತೃಕೆಯಲ್ಲಿ ೨೦ ಸರ್ಗಗಳಿವೆ. ಆದರೆ ಮೇಲೆ ಹೇಳಿದ ಸಿಂಹಳೀ ವ್ಯಾಖ್ಯಾನದಲ್ಲಿ ೨೫ನೆಯ ಸರ್ಗದ ಕೊನೆಯ ಶ್ಲೋಕವಿದ್ದು ಉಪಸಂಹಾರ ವಾಕ್ಯದಲ್ಲಿ ಕಾವ್ಯದ ಹೆಸರೂ ಕವಿಯ ಹೆಸರೂ ಉಕ್ತವಾಗಿರುವುದರಿಂದ, ಈ ಕಾವ್ಯದಲ್ಲಿ ೨೫ ಸರ್ಗಗಳಿದ್ದುವೆಂದೂ ರಾಮನ ಪಟ್ಟಾಭಿಷೇಕದೊಡನೆ ಮುಗಿಯುತ್ತದೆಂದೂ ಹೇಳಬಹುದು. ಈ ಅಭಿಪ್ರಾಯ ಸರಿಯೆನ್ನುವುದಾದರೆ ಭಟ್ಟಿಯ ರಾವಣವಧಕ್ಕೂ ಈ ಜಾನಕೀಹರಣಕ್ಕೂ ಬಹುಮುಖವಾದ ಸಾಮ್ಯಗಳು ಕೂಡಿಬರುತ್ತವೆ.

ಮದ್ರಾಸಿನ ಮಾತೃಕೆಯ ಕೊನೆಯಲ್ಲಿ ಕುಮಾರದಾಸನನ್ನು ಕುಮಾರಮಣಿಯ ಮಗನೆಂದೂ ಸಿಂಹಳದ ರಾಜನೆಂದೂ ಹೇಳಿದೆ. ಕುಮಾರದಾಸನನ್ನು ಕಾಳಿದಾಸನ ಸಮಕಾಲೀನನೆಂದು ಹೇಳುವ ದಂತಕಥೆಯಿದೆಯೆಂಬುದನ್ನು ಹಿಂದೆಯೇ ಹೇಳಿದ್ದೇವೆ. ಇದಕ್ಕೆ ಐತಿಹಾಸಿಕ ಆಧಾರವೇನೂ ದೊರೆತಿಲ್ಲ. ಸಿಂಹಳದಲ್ಲಿ ಕ್ರಿ.ಶ. ೫೧೭ರಿಂದ ೫೨೬ರವರೆಗೆ ಕುಮಾರದಾಸನೆಂಬ ರಾಜನೊಬ್ಬನು ಆಳಿದುದು ನಿಜ. ಆದರೆ ಈತನೇ ಜಾನಕೀಹರಣದ ಕರ್ತೃವೆನ್ನಲಾಗುವುದಿಲ್ಲ. ಏತಕ್ಕೆಂದರೆ ಸುಮಾರು ಕ್ರಿ.ಶ ೬೫೦ರಲ್ಲಿ ರಚಿತವಾದ ಕಾಶಿಕಾವೃತ್ತಿಯು ಈ ಕಾವ್ಯ ರಚಿಸಿದ ಕವಿಗೆ ತಿಳಿದಿತ್ತೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಈ ಕವಿಯು ಏಳನೆಯ ಶತಮಾನದವನೆಂದೇ ಹೇಳಬೇಕಾಗುತ್ತದೆ.

ಕಾಳಿದಾಸನ ರಘುವಂಶ ಕುಮಾರಸಂಭವಗಳ ರೀತಿಯಲ್ಲೇ ಜಾನಕೀಹರಣವೂ ರಚಿತವಾಗಿದೆ. ಭಾರವೀ ಅಥವಾ ಮಾಘನಿಂದ ಕುಮಾರದಾಸನು ಅಷ್ಟಾಗಿ ಪ್ರಭಾವಿತನಾಗಿರುವಂತೆ ತೋರುವುದಿಲ್ಲ. ಆದರೂ ಈತ ಶಬ್ದಾಲಂಕಾರಗಳನ್ನು ವಿಶೇಷವಾಗಿ ಬಳಸಿದ್ದಾನೆ. ಜಾನಕೀಹರಣದ ೧೮ನೆಯ ಸರ್ಗ ಬಂಧಶ್ಲೋಕಗಳಿಗೆ ಹೆಸರಾಗಿದೆ. ರಾಜಶೇಖರನು ಕುಮಾರದಾಸನ ಸಾಮರ್ಥ್ಯವನ್ನು ಸೂಕ್ತಿಮುಕ್ತಾವಳಿಯಲ್ಲಿ ಕೊಂಡಾಡಿದ್ದಾನೆ.

ಜಾನಕೀಹರಣಂ ಕರ್ತುಂ ರಘುವಂಶೇ ಸ್ಥಿತೇ ಸತಿ।
ಕವಿಃ ಕುಮಾರದಾಸಶ್ಚ ರಾವಣಶ್ಚ ಯದಿ ಕ್ಷಮಃ ॥—೪. ೬೬

## ೧೧. ವಾಕ್ಪತಿ (ಕ್ರಿ.ಶ. ೮ನೆಯ ಶತಮಾನ)

ವಾಕ್ಪತಿಯು ೮ನೆಯ ಶತಮಾನದ ಆದಿಭಾಗದಲ್ಲಿದ್ದ ಕವಿ. ಈತನು ಪ್ರಾಕೃತದಲ್ಲಿ ರಚಿಸಿರುವ 'ಗೌಡವಹೊ'ಕಾವ್ಯವು ಪ್ರಸಿದ್ಧವಾಗಿದೆ. ಭವಭೂತಿಗೆ ತಾನು ಋಣಿಯಾಗಿರುವುದಾಗಿ ವಾಕ್ಪತಿಯು ಹೇಳಿಕೊಂಡಿದ್ದಾನೆ. ಈ

11 ಈ ಕೆಳಗಿನ ಶ್ಲೋಕದಿಂದ ಮಾಘನಿಗೆ 'ಘಂಟಾಮಾಘ'ನೆಂಬ ಹೆಸರೂ ಬಂದಿತ್ತು.
ಉದಯತಿ ವಿತತೋರ್ಧ್ವರಶ್ಮಿರಜ್ಜಾವಹಿಮರುಚೌ ಹಿಮಧಾಮ್ನಿ ಯಾತಿ ಚಾಸ್ತಂ।
ವಹತಿ ಗಿರಿರಯಂ ವಿಲಂಬಿಘಂಟಾದ್ವಯಪರಿವಾರಿತವಾರಣೇಂದ್ರಲೀಲಾಂ॥—iv 20

12 S. K. ದೇ ಅವರ History of Sanskrit Literature ಪು 186 ನೋಡಿ.

ಕಾವ್ಯದ ಶೈಲಿಯು ಸ್ವಲ್ಪವೂ ಚೆನ್ನಾಗಿಲ್ಲವಾದರೂ ಪ್ರಾಕೃತ ಭಾಷೆಯಲ್ಲಿ ರಚಿತವಾಗಿರುವುದರಿಂದ ಅದಕ್ಕೆ ಸ್ವಲ್ಪಮಟ್ಟಿನ ಗಣ್ಯತೆ ದೊರಕಿದೆಯೆಂಬುದು ಡಾ|| ಕೀತ್‌ರ ಅಭಿಪ್ರಾಯ. ವಾಕ್ಪತಿಗೆ ಆಶ್ರಯಕೊಟ್ಟಿದ್ದ ಕನೋಜಿನ ರಾಜಾ ಯಶೋವರ್ಮನಿಂದ ಗೌಡರಾಜನಿಗಾದ ಪರಾಜಯವೇ ಕಾವ್ಯದ ವಸ್ತು.

### ೧೨. **ರತ್ನಾಕರ** (ಕ್ರಿ.ಶ. ೯ನೆಯ ಶತಮಾನ)

ರತ್ನಾಕರನು ಕಾಶ್ಮೀರದ ಕವಿ. ಈತನ ಸಮಗ್ರವಾದ ಹೆಸರು ರಾಜಾನಕ ರತ್ನಾಕರ ವಾಗೀಶ್ವರ. ಈತನು ಬೃಹಸ್ಪತಿ ಅಥವಾ ಚಿಪ್ಪಟ ಜಯಾದಿತ್ಯನ ಮತ್ತು ಅವಂತಿವರ್ಮನ ಆಸ್ಥಾನ ಕವಿ. ಆದ್ದರಿಂದ ಈತನು ಸುಮಾರು ಕ್ರಿ.ಶ. ೮೫೦ರಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದವನೆಂದು ಹೇಳಬಹುದು.

ರತ್ನಾಕರ ವಿರಚಿತವಾದ **ಹರವಿಜಯ** ಮಹಾಕಾವ್ಯದಲ್ಲಿ ೫೦ ಸರ್ಗಗಳಿವೆ. ಜನ್ಮಾಂಧನಾಗಿದ್ದರೂ ತಪಶ್ಚರ್ಯೆಯಿಂದ ನೇತ್ರದೃಷ್ಟಿಯನ್ನು ಗಳಿಸಿಕೊಂಡು ದೇವತೆಗಳಿಗೆ ಪೀಡಾಕರನಾಗಿದ್ದ ಅಂಧಕನನ್ನು ಅವನ ತಂದೆಯೇ ಆದ ಶಿವನು ಸಂಹಾರಮಾಡಿದ ಪ್ರಕರಣವೇ ಕಾವ್ಯದ ವಸ್ತು. ಕಾವ್ಯ ತುಂಬ ದೊಡ್ಡದಾಗಿರುವುದಲ್ಲದೆ ಕೆಲವು ವಿಚಾರಗಳು ಔಚಿತ್ಯವನ್ನು ಮೀರಿ ತುಂಬ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಉದಾಹರಣೆಗೆ ಶಿವನ ದೂತನಿಗೂ ಅಂಧಕನಿಗೂ ನಡೆಯುವ ಸಂಭಾಷಣೆ ಏಳು ಸರ್ಗಗಳಷ್ಟು ದೀರ್ಘವಾಗಿ ಬೆಳೆದಿದೆ; ಶಿವನ ಪರಿವಾರದ ಶೃಂಗಾರಚೇಷ್ಟೆಗಳ ನಿರೂಪಣೆಗೆ ೪ ಸರ್ಗಗಳು ಮೀಸಲಾಗಿವೆ ಬಾಣನ ಶೈಲಿಯನ್ನು ತಾನು ಅನುಕರಣಮಾಡಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ತನ್ನ ನೀತಿಶಾಸ್ತ್ರದ ಪಾಂಡಿತ್ಯವನ್ನು ಈ ಕಾವ್ಯದ ೮ ರಿಂದ ೧೬ನೆಯ ಸರ್ಗಗಳ ಭಾಗದಲ್ಲೂ ಕಾಮಶಾಸ್ತ್ರದ ಜ್ಞಾನವನ್ನು ೨೯ನೆಯ ಸರ್ಗದಲ್ಲೂ ರತ್ನಾಕರನು ತೋರಿಸಿಕೊಂಡಿದ್ದಾನೆ. ದುರ್ಗಾಸ್ತುತಿ ರೂಪವಾದ ಚಂಡೀಸ್ತೋತ್ರವೊಂದು ೪೮ನೆಯ ಸರ್ಗದ ಯುದ್ಧವರ್ಣನೆಯ ನಡುವೆ ಬರುತ್ತದೆ. ಒಟ್ಟಿನಲ್ಲಿ ಪರಿಶೀಲಿಸಿದರೆ ಈತನು ಮಾಘನ ಶಿಶುಪಾಲವಧವನ್ನು ವಿಶೇಷವಾಗಿ ವ್ಯಾಸಂಗಮಾಡಿ ಬಳಿಕ ಈ ಕಾವ್ಯವನ್ನು ರಚಿಸಿದಂತೆ ತೋರುತ್ತದೆ. ಯಮಕವೇ ಮುಂತಾದ ಶಬ್ದಾಲಂಕಾರಗಳು ವಿಶೇಷವಾಗಿ ಬಳಸಲ್ಪಟ್ಟಿರುವುದರಿಂದ ಕಾವ್ಯದಲ್ಲಿ ಅರ್ಥಸ್ವಾರಸ್ಯಕ್ಕಿಂತ ಶಬ್ದಾಡಂಬರಕ್ಕೇ ಪ್ರಾಧಾನ್ಯ ಬಂದಿದೆ.

ರತ್ನಾಕರನು ವಕ್ರೋಕ್ತಿಪ್ರಧಾನವಾದ ೫೦ ಶ್ಲೋಕಗಳ **ವಕ್ರೋಕ್ತಿಪಂಚಾಶಿಕಾ** ಎಂಬ ಕಾವ್ಯವನ್ನೂ **ಧ್ವನಿಗಾಥಾಪಂಜಿಕಾ** ಎಂಬ ಅಲಂಕಾರ



ಗ್ರಂಥವನ್ನೂ ಬರೆದಿದ್ದಾನೆ. ಈ ಎರಡರಿಂದಲೂ ರುಯ್ಯಕನು ಉದಾಹರಿಸಿದ್ದಾನೆ. ಹರವಿಜಯಕ್ಕೆ 'ಅಲಕ'ನು ಬರೆದ ವ್ಯಾಖ್ಯಾನವಿದೆ. ವಲ್ಲಭದೇವನ ಸುಭಾಷಿತಾವಳಿಯಲ್ಲಿ ಈತನ ಕೆಲವು ಶ್ಲೋಕಗಳು ಸೇರಿವೆ.

### ೧೩. **ಹರಿಚಂದ್ರ** (ಕ್ರಿ. ಶ. ೯ನೆಯ ಶತಮಾನ)

ಹರಿಚಂದ್ರನು ದಿಗಂಬರ ಜೈನಕವಿ. ಈತನು **ಧರ್ಮಶರ್ಮಾಭ್ಯುದಯಂ** ಎಂಬ ೨೧ ಸರ್ಗಗಳುಳ್ಳ ಒಂದು ಮಹಾಕಾವ್ಯವನ್ನೂ **ಜೀವಂಧರ ಚಂಪೂ** ಎಂಬ ಒಂದು ಚಂಪೂಕಾವ್ಯವನ್ನೂ ರಚಿಸಿದ್ದಾನೆ. ೧೫ನೆಯ ತೀರ್ಥಂಕರನಾದ ಧರ್ಮನಾಥನ ಕಥೆಯೇ ಧರ್ಮಶರ್ಮಾಭ್ಯುದಯಕಾವ್ಯದ ವಸ್ತು. ಮಾಘನ ಶಿಶುಪಾಲವಧದ ರಚನಾರೀತಿಯನ್ನೇ ಅನುಕರಿಸಿ ರಚಿತವಾಗಿರುವ ಈ ಕಾವ್ಯದ ಧಾಟಿಯೂ ಭಾಷೆಯೂ ಪ್ರಶಂಸಾರ್ಹವಾಗಿವೆ. ೧೦ನೆಯ ಶತಮಾನದ ರಾಜಶೇಖರನು ತನ್ನ (ಪ್ರಾಕೃತಭಾಷೆಯ) ಕರ್ಪೂರಮಂಜರಿಯಲ್ಲಿ ಹರಿಚಂದ್ರನನ್ನು ಉಲ್ಲೇಖಿಸಿರುವುದರಿಂದ ಈತನ ಕಾಲ ೯ನೆಯ ಶತಮಾನವೆಂದು ಹೇಳಬಹುದು.

### ೧೪. **ಶಿವಸ್ವಾಮಿ** (ಕ್ರಿ. ಶ. ೯ನೆಯ ಶತಮಾನ)

ರತ್ನಾಕರನ ಕಿರಿಯ ಸಮಕಾಲೀನನಾದ ಶಿವಸ್ವಾಮಿಯು ಕಾಶ್ಮೀರದ ಶೈವ; ಅರ್ಕಸ್ವಾಮಿಯ ಮಗ. ತನ್ನ **ಕಪ್ಫಿಣಾಭ್ಯುದಯ** ಎಂಬ ಬೌದ್ಧ ಕಾವ್ಯವನ್ನು (೨೦ನೆಯ ಸರ್ಗದ ೪೫ನೇ ಶ್ಲೋಕದಲ್ಲಿ) ಶಿವನಿಗೆ ಅರ್ಪಿಸಿದ್ದಾನೆ. ಕ್ರಿ ಶ. 855ರಿಂದ 884ರ ವರೆಗೆ ಕಾಶ್ಮೀರದಲ್ಲಿ ಆಳಿದ ಅವಂತಿವರ್ಮನ ಆಸ್ಥಾನಕವಿಯಾಗಿದ್ದನು ಈ ಶಿವಸ್ವಾಮಿ. ದಕ್ಷಿಣಾಪಥದ ರಾಜನಾದ ಕಪ್ಫಿಣನು ಶ್ರಾವಸ್ತಿಯಲ್ಲಿ ಆಳುತ್ತಿದ್ದ ಬೌದ್ಧರಾಜ ಪ್ರಸೇನಜಿತನ ಮೇಲೆ ಧಾಳಿಮಾಡಿ ತಾನೇ ಬೌದ್ಧನಾದಂತೆ ಅವದಾನಶತಕದಲ್ಲಿರುವ ಒಂದು ಪ್ರಕರಣವೇ ಕಪ್ಫಿಣಾಭ್ಯುದಯ ಕಾವ್ಯದ ವಸ್ತು. ಈ ಕಾವ್ಯದಲ್ಲಿ ೨೦ ಸರ್ಗಗಳಿವೆ. ಬುದ್ಧನನ್ನು ಪ್ರಾರ್ಥಿಸುವ ಮಂಗಳ ಪದ್ಯದಿಂದ ಕಾವ್ಯ ಆರಂಭವಾಗುತ್ತದೆ. ಶಿಶುಪಾಲವಧ ಮತ್ತು ಕಿರಾತಾರ್ಜುನೀಯ ಕಾವ್ಯಗಳ[13] ರಚನಾಕ್ರಮವೇ ಈ ಕಾವ್ಯದಲ್ಲೂ ಕಂಡುಬರುತ್ತದೆ. ಶಿವಸ್ವಾಮಿಯು ಅನೇಕ

---

[13] ಭಾರವಿಯು ಕಿರಾತಾರ್ಜುನೀಯದ ೫ನೆಯ ಸರ್ಗದಲ್ಲಿ ೧೬ ಬೇರೆ ಬೇರೆ ವೃತ್ತಗಳನ್ನೂ ಮಾಘನು ಶಿಶುಪಾಲವಧದ ೪ನೆಯ ಸರ್ಗದಲ್ಲಿ ೨೨ ವೃತ್ತಗಳನ್ನೂ ಬಳಸಿದ್ದರೆ ಶಿವಸ್ವಾಮಿಯು ಈ ಕಾವ್ಯದ ೬ನೆಯ ಸರ್ಗದಲ್ಲಿ ೩೭ ವೃತ್ತಗಳನ್ನು ಬಳಸಿದ್ದಾನೆ.

ಕಾವ್ಯಾದಿಗಳ[14] ಕರ್ತೃವೆಂದು ಹೇಳಲಾಗುತ್ತಿದ್ದರೂ ಅವನದಾಗಿ ಈಗ ನಮಗೆ ಉಪಲಬ್ಧವಾಗಿರುವುದು ಕಪ್ಫಿಣಾಭ್ಯುದಯವೊಂದೇ. ಹರ್ಷನ ನಾಗಾನಂದ ನಾಟಕದಲ್ಲಿ ಬರುವ ಗರುಡ-ಸಂಹೃತ-ನಾಗಗಳ ಅಸ್ಥಿರಾಶಿಗಳ ಪರ್ಯಾಯವಾದ ನಿರ್ದೇಶ ಈ ಕಾವ್ಯದಲ್ಲಿರುವುದು ಗಮನಾರ್ಹವಾದ ಅಂಶ.

### ೧೫. **ಅಭಿನಂದ** (ಕ್ರಿ.ಶ. ೯ನೆಯ ಶತಮಾನ)

ಅಭಿನಂದನು ತಾನು ರಾಜಾ ಹಾರವರ್ಷ ಯುವರಾಜನ ಆಸ್ಥಾನಕವಿಯೆಂದೂ, ತನ್ನ ಕವಿತಾಪ್ರೌಢಿಮೆಗೆ ಮೆಚ್ಚಿದ ಆ ರಾಜನು ಸಿಂಹಾಸನದ ಮೇಲೆ ತನಗೆ ಅರ್ಧಾಸನವಿತ್ತು ಗೌರವಿಸಿದ್ದನೆಂದೂ ಹೇಳಿಕೊಂಡಿದ್ದಾನೆ. ಬಂಗಾಳದ ಪಾಲವಂಶದ ದೇವಪಾಲರಾಜನೇ ಈ ಹಾರವರ್ಷನೆಂದೂ, ಈತನ ಕಾಲ ೯ನೆಯ ಶತಮಾನದ ಉತ್ತರಾರ್ಧವೆಂದೂ ಇತಿಹಾಸಜ್ಞರ ಅಭಿಪ್ರಾಯವಾಗಿರುವುದರಿಂದ ಅಭಿನಂದನ ಕಾಲವೂ ನಿರ್ಣೀತವಾದಂತೆಯೇ.

ಅಭಿನಂದನು **ರಾಮಚರಿತ**ವೆಂಬ ಸುದೀರ್ಘವಾದ ಮಹಾಕಾವ್ಯವೊಂದನ್ನು ರಚಿಸಿದ್ದಾನೆ. ಈ ಕಾವ್ಯವು ರಾಮಾಯಣದ ಕಥೆಯನ್ನೇ ನಿರೂಪಿಸುತ್ತದೆ. ಇದು ಬರೋಡಾದಲ್ಲಿ ಮುದ್ರಿತವಾಗಿ ಪ್ರಕಟಿತವಾಗಿದೆ. ಅಭಿನಂದನು 36 ಸರ್ಗಗಳನ್ನು ಮಾತ್ರ ರಚಿಸಿ ಅಸಮಗ್ರವಾಗಿ ನಿಲ್ಲಿಸಿಬಿಟ್ಟಿದ್ದ ಈ ಕಾವ್ಯಕ್ಕೆ ಭೀಮಕವಿಯು ಇನ್ನೂ ನಾಲ್ಕು ಸರ್ಗಗಳನ್ನು ಸೇರಿಸಿ ಮುಗಿಸಿದನೆಂದು ಬರೋಡಾ ಸಂಸ್ಕರಣದ ಸಂಪಾದಕರು ಮುನ್ನುಡಿಯಲ್ಲಿ ಹೇಳಿದ್ದಾರೆ ಆದರೆ ಮದರಾಸಿನಲ್ಲಿರುವ ಈ ಕಾವ್ಯದ ಮಾತೃಕೆಯಲ್ಲಿ 50 ಸರ್ಗಗಳಿದ್ದು, 50ನೆಯ ಸರ್ಗದ 67ನೆಯ ಶ್ಲೋಕದಲ್ಲಿ ನಿಂತುಹೋಗಿದೆ. ಅಭಿನಂದನ ಕವಿತೆಯಲ್ಲಿ ಅನಿರ್ವಚನೀಯವಾದ ಸೊಬಗಿದೆ; ಕವಿಯ ಪ್ರತಿಭೆ ಎದ್ದು ಕಾಣುತ್ತದೆ. ಕಥಾನಿರೂಪಣೆಯೂ ಸ್ವಾರಸ್ಯವಾಗಿದೆ. ಆಲಂಕಾರಿಕರಾದ ಭೋಜ, ಮಮ್ಮಟ ಮತ್ತು ಮಹಿಮಭಟ್ಟರು ರಾಮಚರಿತದಿಂದ ವಿಶೇಷವಾಗಿ ಉದಾಹರಣೆಗಳನ್ನು ಆರಿಸಿಕೊಂಡಿದ್ದಾರೆ.

ತಾರ್ಕಿಕನಾದ ಜಯಂತಭಟ್ಟನ ಮಗನಾದ ಮತ್ತೊಬ್ಬ ಅಭಿನಂದನೂ ಇದೇ ೯ನೆಯ ಶತಮಾನದ ಕವಿ. ಈತನು ಬಾಣನ ಕಾದಂಬರಿಯನ್ನು ಎಂಟು

14 ವಾಕ್ಯಂ ಚ ದ್ವಿಪದೀಶತಾನ್ಯಥ ಮಹಾಕಾವ್ಯಾನಿ ಸಪ್ತ ಕ್ರಮಾತ್
ತ್ರ್ಯಕ್ಷಪ್ರತ್ಯಹನಿರ್ಮಿತಸ್ತುತಿಕಥಾಲಕ್ಷಾಣಿ ಚೈಕಾದಶ।
ಕೃತ್ವಾ ನಾಟಕನಾಟಿಕಾಪ್ರಕರಣಪ್ರಾಯಾನ್ ಪ್ರಬಂಧಾನ್ಬಹೂನ್
ವಿಶ್ರಾಮ್ಯತ್ಯಧುನಾಪಿ ನಾತಿಶಯಿತಾ ವಾಣೀ ಶಿವಸ್ವಾಮಿನಃ ॥



ಸರ್ಗಗಳ **ಕಾದಂಬರೀ ಕಥಾಸಾರ**ವೆಂಬ ಹೆಸರಿನಲ್ಲಿ ಪದ್ಯಕಾವ್ಯರೂಪವಾಗಿ ಸಂಗ್ರಹಿಸಿದ್ದಾನೆ.

### ೧೬. **ಹಲಾಯುಧ** (ಕ್ರಿ.ಶ. ೧೦ನೆಯ ಶತಮಾನ)

ಭಟ್ಟಿ ಕಾವ್ಯದ ಮಾದರಿಯಲ್ಲೇ ರಚಿತವಾಗಿರುವ ಪ್ರೌಢ ಕಾವ್ಯವಾದ **ಕವಿರಹಸ್ಯ**ದ ಕರ್ತೃ ಹಲಾಯುಧ. ಇದೂ ವ್ಯಾಕರಣ ಪ್ರಕ್ರಿಯೆಗಳನ್ನು ಪ್ರಯೋಗಪೂರ್ವಕವಾಗಿ ನಿರೂಪಿಸಲು ಬರೆದ ಕಾವ್ಯ. ಕವಿಯ ಆಶ್ರಯದಾತೃವಾಗಿದ್ದ ರಾಷ್ಟ್ರಕೂಟರಾಜ ಮುಮ್ಮಡಿ ಕೃಷ್ಣನೇ ಈ ಕಾವ್ಯದ ನಾಯಕ. ಈ ರಾಜನ ಕಾಲ ಸುಮಾರು ಕ್ರಿ.ಶ. 940-955. ಆದ್ದರಿಂದ ಕವಿ ಹಲಾಯುಧನೂ ಹತ್ತನೆಯ ಶತಮಾನದವನಾಗಿರಬೇಕು.

ಕವಿರಹಸ್ಯವು ಕವಿಗಳಿಗೆ ತುಂಬ ಸಹಾಯಕಾರಿ. ಇದೇ ಕಾವ್ಯಕ್ಕೆ ‘ಕವಿಗುಹ್ಯ’, ‘ಅಪಶಬ್ದಾಭಾಸ’ ಎಂಬ ಹೆಸರುಗಳೂ ಇವೆ.

### ೧೭. **ಭೀಮ [ಭೌಮಕ]** (ಕ್ರಿ.ಶ. ೧೦ನೆಯ ಶತಮಾನ)

ಭೂಮ, ಭೂಮಕ, ಭೌಮಕ, ಭಟ್ಟಭೌಮ, ಭಟ್ಟಭೀಮ—ಇವೆಲ್ಲ ಕಾಶ್ಮೀರದಲ್ಲಿ ಪ್ರಸಿದ್ಧನಾಗಿದ್ದ ಭೀಮಕವಿಯ ಹೆಸರುಗಳು. ಈತನು 27 ಸರ್ಗಗಳಲ್ಲಿ ರಚಿಸಿರುವ **ರಾವಣಾರ್ಜುನೀಯ** ಅಥವಾ ಅರ್ಜುನರಾವಣೀಯ ಎಂಬ ಮಹಾಕಾವ್ಯದ ವಸ್ತು (ರಾಮಾಯಣದ ಉತ್ತರಕಾಂಡದ 31-33 ಸರ್ಗಗಳಲ್ಲಿ ವರ್ಣಿತವಾಗಿರುವ) ರಾವಣನಿಗೂ ಅರ್ಜುನಕಾರ್ತವೀರ್ಯನಿಗೂ ನಡೆದ ಯುದ್ಧ. ವ್ಯಾಕರಣ ನಿಯಮಗಳನ್ನು ಪ್ರಯೋಗಗಳಿಂದ ನಿರೂಪಿಸುವುದಕ್ಕಾಗಿಯೇ ಈ ಕಾವ್ಯವೂ ರಚಿತವಾದುದು. ಆದ್ದರಿಂದಲೇ ಇದು ಭಟ್ಟಿಕಾವ್ಯದ ಅನುಕರಣದ ಫಲವೆನ್ನಬಹುದು.

ಈ ಕಾವ್ಯಕ್ಕೆ **ವ್ಯೋಷ** ಅಥವಾ **ವ್ಯೋಷಕಾವ್ಯ**ವೆಂಬ ಹೆಸರೂ ಉಂಟೆಂದು ತಿಳಿದುಬರುತ್ತದೆ. ೧೧ನೆಯ ಶತಮಾನದ ಕ್ಷೇಮೇಂದ್ರನು ಈ ಕಾವ್ಯವನ್ನು ‘ಶಾಸ್ತ್ರಕಾವ್ಯ’ವೆಂದು ಕರೆದಿರುವುದರಿಂದ ಇದರ ಕಾಲ ೧೧ನೆಯ ಶತಮಾನಕ್ಕೂ ಹಿಂದಿನದಾಗಿರಬೇಕು.

### ೧೮. **ಕ್ಷೇಮೇಂದ್ರ** (ಕ್ರಿ.ಶ. ೧೧ನೆಯ ಶತಮಾನ)

ಕ್ಷೇಮೇಂದ್ರನು ಕಾಶ್ಮೀರದ ಕವಿಗಳಲ್ಲಿ ಅಗ್ರಗಣ್ಯನು. ಈತನು ಬಹುವಿದ್ಯಾ ಪಾರಂಗತ. ಸಂಸ್ಕೃತ ಸಾಹಿತ್ಯದ ವಿಭಿನ್ನ ಕ್ಷೇತ್ರಗಳಲ್ಲಿ ಈತನಿಂದ

ರಚಿತವಾದ ಕೃತಿಗಳು ಹೇರಳವಾಗಿವೆ. ಈತನು ಸಾಹಿತ್ಯಶಾಸ್ತ್ರದಲ್ಲಿ ಅಭಿನವ ಗುಪ್ತರ ಶಿಷ್ಯನಾಗಿದ್ದನಲ್ಲದೆ, ಕ್ರಿ.ಶ. 1029 ರಿಂದ 1077ರ ವರೆಗೆ ಕಾಶ್ಮೀರದಲ್ಲಿ ಆಳಿದ ಅನಂತನ ಆಸ್ಥಾನ ಪಂಡಿತನಾಗಿದ್ದನು. ಶೈವಮಂಡಲದಲ್ಲೇ ಇದ್ದರೂ ತಾನು ಪರಮವೈಷ್ಣವನಾಗಿದ್ದುದಕ್ಕೆ ಕಾರಣ ಸೋಮಪಾದನೆಂಬ ಭಾಗವತಾಚಾರ್ಯನ ಅನುಗ್ರಹವೇ ಎಂದು ಕ್ಷೇಮೇಂದ್ರನೇ ತನ್ನ ಬೃಹತ್ಕಥಾಮಂಜರಿಯಲ್ಲಿ (19-37) ಹೇಳಿಕೊಂಡಿದ್ದಾನೆ. ಈತನಿಗೆ 'ವ್ಯಾಸದಾಸ'ನೆಂಬ ಹೆಸರೂ ರೂಢಿಯಲ್ಲಿತ್ತು.

ಕ್ಷೇಮೇಂದ್ರನಿಂದ ರಚಿತವಾದುವೆಂದು ನಮಗೆ ಈವರೆಗೆ ತಿಳಿದುಬಂದಿರುವ ಗ್ರಂಥಗಳು 35. ಆ ಪೈಕಿ ಉಪಲಬ್ಧವಾಗಿರುವುವು 19. ಇವುಗಳನ್ನು ಹೀಗೆ ವಿಂಗಡಿಸಬಹುದು.—(೧) ಮೂರು ಮಂಜರಿಗಳು—**ರಾಮಾಯಣಮಂಜರಿ, ಭಾರತಮಂಜರಿ, ಬೃಹತ್ಕಥಾಮಂಜರಿ.** (೨) ಎರಡು ಮಹಾಕಾವ್ಯಗಳು — **ದಶಾವತಾರಚರಿತ, ಅವದಾನಕಲ್ಪಲತಾ.** (೩) ಎಂಟು ಉಪದೇಶಾತ್ಮಕ ಕಾವ್ಯಗಳು — **ಕಲಾವಿಲಾಸ, ಸಮಯಮಾತೃಕಾ, ಚಾರುಚರ್ಯಾಶತಕ, ಸೇವ್ಯಸೇವಕೋಪದೇಶ, ದರ್ಪದಳನ, ದೇಶೋಪದೇಶ, ನರ್ಮಮಾಲಾ, ಚತುರ್ವರ್ಗ ಸಂಗ್ರಹ.** (೪) ಸಾಹಿತ್ಯಶಾಸ್ತ್ರದ ಎರಡು ಕೃತಿಗಳು — **ಕವಿಕಂಠಾಭರಣ, ಔಚಿತ್ಯವಿಚಾರಚರ್ಚಾ.** (೫) ಸಂಕೀರ್ಣ ಕೃತಿಗಳು ನಾಲ್ಕು—**ಸುವೃತ್ತತಿಲಕ, ಲೋಕಪ್ರಕಾಶಕೋಶ, ನೀತಿಕಲ್ಪತರು, ವ್ಯಾಸಾಷ್ಟಕ.** ಇನ್ನೂ ಉಪಲಬ್ಧವಾಗದಿರುವ ಕೃತಿಗಳ ವಿವರ ಹೀಗಿದೆ.—(೧) ಕವಿಕಂಠಾಭರಣದಲ್ಲಿ ಉದಾಹೃತವಾಗಿರುವುವು ಏಳು — ಶಶಿವಂಶಮಹಾಕಾವ್ಯ, ಪದ್ಯಕಾದಂಬರೀ, ಅಮೃತತರಂಗಮಹಾಕಾವ್ಯ, ಲಾವಣ್ಯವತೀ, ಕನಕಜಾನಕೀ, ಮುಕ್ತಾವಲೀ, ಚಿತ್ರಭಾರತನಾಟಕ. (೨) ಔಚಿತ್ಯವಿಚಾರಚರ್ಚೆಯಲ್ಲಿ ಉದಾಹೃತವಾಗಿರುವುವು ಏಳು — ಮುನಿಮತಮೀಮಾಂಸಾ, ನೀತಿಲತಾ, ವಿನಯವಲ್ಲೀ, ಅವಸರಸಾರ, ಲಲಿತರತ್ನಮಾಲಾ, ಕವಿಕರ್ಣಿಕಾ, ವಾತ್ಸ್ಯಾಯನಸೂತ್ರಸಾರ. (೩) ಸುವೃತ್ತತಿಲಕದಲ್ಲಿ ಉದಾಹೃತವಾಗಿರುವುದು ಒಂದು—ಪವನಪಂಚಾಶಿಕಾ. (೪) ಕಲ್ಹಣನ ರಾಜತರಂಗಿಣಿಯಲ್ಲಿ ಕ್ಷೇಮೇಂದ್ರರಚಿತವೆಂದು ಉಕ್ತವಾಗಿರುವುದು ಒಂದು—ನೃಪಾವಲೀ (ಅಥವಾ ರಾಜಾವಳೀ).

ಈ ಪ್ರಕರಣದಲ್ಲಿ ನಮಗೆ ಮುಖ್ಯವಾಗಿರುವುವು ಅವನ ಕಾವ್ಯಮಂಜರಿಗಳು ಮತ್ತು ಮಹಾಕಾವ್ಯಗಳು. **ರಾಮಾಯಣಮಂಜರಿ ಭಾರತಮಂಜರಿ**



ಗಳೆರಡೂ ವಾಲ್ಮೀಕಿ ರಾಮಾಯಣ ಮತ್ತು ವ್ಯಾಸ ಮಹಾಭಾರತಗಳ ಸಂಗ್ರಹಾತ್ಮಕವಾದ ಕಾವ್ಯಶೈಲಿಯಲ್ಲಿ ರಚಿತವಾದ ಕಥಾಮಂಜರಿಗಳು. **ದಶಾವತಾರಚರಿತವು** ೧೦ ಸರ್ಗಗಳ ಮಹಾಕಾವ್ಯ. ಮಹಾವಿಷ್ಣುವಿನ ಪ್ರತಿಯೊಂದು ಅವತಾರದ ಕಥೆಯೂ ಇದರ ಒಂದೊಂದು ಸರ್ಗದಲ್ಲಿ ನಿರೂಪಿತವಾಗಿದೆ. ಒಂಭತ್ತನೆಯ ಸರ್ಗದಲ್ಲಿ ಬುದ್ಧನು ವಿಷ್ಣುವಿನ ಅವತಾರವೆಂದು ಪ್ರತಿಪಾದಿತನಾಗಿದ್ದಾನೆ. **ಅವದಾನಕಲ್ಪಲತೆಯ** ವಸ್ತು ಜಾತಕದ ಕಥೆಗಳು. ಇದರಲ್ಲಿ ೧೦೮ ಪಲ್ಲವಗಳಿವೆ. ಇದಕ್ಕೇ ಬೌದ್ಧಾವದಾನಕಲ್ಪಲತಾ ಎಂಬ ಹೆಸರೂ. ಇದು ಕ್ರಿ.ಶ. 1052 ರಲ್ಲಿ ರಚಿತವಾಯಿತು. ಕ್ರಿ.ಶ. 1202 ರಲ್ಲಿ ಇದನ್ನು ಕಾಶ್ಮೀರೀ ಪಂಡಿತ 'ಶಾಕ್ಯಶ್ರೀ' ಎಂಬುವವನು ಟಿಬೆಟ್ಟಿನ ಲಾಮಾ ಒಬ್ಬನಿಗೆ ಕೊಟ್ಟನು. ೨೦ ವರ್ಷಗಳ ನಂತರ ಅದು ಟಿಬೆಟ್ಟಿನ ಭಾಷೆಗೆ ಪರಿವರ್ತಿತವಾಯಿತು. ಈಗ ಮೂಲಗ್ರಂಥದ ಮೊದಲ ೪೦ ಪಲ್ಲವಗಳು ಲುಪ್ತವಾಗಿ ಅದರ ಸ್ವರೂಪವನ್ನು ಈ ಟಿಬೆಟ್ ಭಾಷೆಯ ಅನುವಾದದಿಂದಲೇ ತಿಳಿಯಬೇಕಾಗಿದೆ.

## ೧೯. ಮಂಖುಕ (ಕ್ರಿ.ಶ. ೧೨ನೆಯ ಶತಮಾನ)

ಮಂಖುಕನೂ ಕಾಶ್ಮೀರದ ಕವಿ. ಈತನೂ ಈತನ ಇತರ ಮೂರು ಜನ ಸಹೋದರರೂ ಕಾಶ್ಮೀರದಲ್ಲಿ ಕ್ರಿ.ಶ. 1129 ರಿಂದ 1150 ರ ವರೆಗೆ ಆಳಿದ ರಾಜಾ ಜಯಸಿಂಹನ ಆಸ್ಥಾನದಲ್ಲಿ ಉನ್ನತ ಅಧಿಕಾರಿಗಳಾಗಿದ್ದರು. ಇವರಲ್ಲಿ ಜ್ಯೇಷ್ಠನಾದ ಅಲಂಕಾರ ಎಂಬುವನು ಜಯಸಿಂಹನ ಮಂತ್ರಿಯಾಗಿದ್ದನು. ಮಂಖುಕನು ಕೊಂಕಣದಲ್ಲಿ ಕೆಲಕಾಲ ಕಾಶ್ಮೀರದ ರಾಯಭಾರಿಯಾಗಿದ್ದನು.

ಮಂಖುಕನು ಪ್ರಸಿದ್ಧ ಆಲಂಕಾರಿಕನಾದ ರುಯ್ಯಕನ ಶಿಷ್ಯ. ತನ್ನ ಗುರುವಿನ ಅಲಂಕಾರಸೂತ್ರಗಳಿಗೆ 'ಅಲಂಕಾರ ಸರ್ವಸ್ವ' ಎಂಬ ವಿವರಣವನ್ನು ಬರೆದಿದ್ದಾನೆ. ಇದಲ್ಲದೆ ಕೆಲವು ಅಲಂಕಾರಸೂತ್ರಗಳನ್ನು ತಾನೂ ರಚಿಸಿದ್ದಾನೆ. ಗುರುಶಿಷ್ಯರಿಬ್ಬರೂ ಒಟ್ಟಿಗೇ ಜಯಸಿಂಹನ ಆಸ್ಥಾನಪಂಡಿತರಾಗಿದ್ದರು.

**ಶ್ರೀಕಂಠಚರಿತವು** ಮಂಖುಕರಚಿತ ಮಹಾಕಾವ್ಯ. ಇದರಲ್ಲಿ ೨೫ ಸರ್ಗಗಳಿವೆ. ಶಿವನಿಂದಾದ ತ್ರಿಪುರಾಸುರವಧೆಯೇ ಕಾವ್ಯದ ವಸ್ತು. ಈ ಕಾವ್ಯವನ್ನು ಅವನು ತನ್ನ ತಂದೆಯ ಆದೇಶದ ಮೇಲೆ ರಚಿಸಿದನಂತೆ. ಇದರ ಕೊನೆಯ ಸರ್ಗದಲ್ಲಿ ಕಾಶ್ಮೀರದ ತತ್ಕಾಲೀನ ಕವಿಗಳ ಸಾಹಿತ್ಯಕ್ಕೆ ಸಂಬಂಧಿಸಿದ ಚಟುವಟಿಕೆಗಳ ಉಪಯುಕ್ತವಾದ ವರ್ಣನೆಯಿದೆ. ಎರಡನೆಯ ಸರ್ಗದಲ್ಲಿ ಕವಿ ಮತ್ತು ಕಾವ್ಯದ ಸಮೀಕ್ಷೆಯಿದೆ.

### ೨೦. ಜಯರಥ ಮತ್ತು ವಾಗ್ಭಟ (ಕ್ರಿ.ಶ. ೧೨ನೆಯ ಶತಮಾನ)

ಜಯರಥನು ಕಾಶ್ಮೀರದ ಶೈವ ಕವಿ. ಇವನ **ಹರಚರಿತಚಿಂತಾಮಣಿಯು** ಶೈವ ಉಪಾಖ್ಯಾನಗಳನ್ನೂ ಆಚಾರ-ವ್ಯವಹಾರಗಳನ್ನೂ ಒಳಗೊಂಡ 'ಮಾಹಾತ್ಮ್ಯ'ಗಳ ರೀತಿಯಲ್ಲಿ ರಚಿತವಾದ ಪದ್ಯಗ್ರಂಥ. ಇದನ್ನು ಕಾವ್ಯವೆಂದು ಕರೆಯುವುದು ಕಷ್ಟ. ಇದರಲ್ಲಿ ಕಾಶ್ಮೀರದಲ್ಲಿರುವ ಶೈವಕ್ಷೇತ್ರಗಳ ವರ್ಣನೆಯೂ ಇದೆ.

ವಾಗ್ಭಟನು ಜೈನಕವಿ (ಸುಮಾರು ಕ್ರಿ.ಶ. 1140). ಈತನ **ನೇಮಿನಿರ್ವಾಣಕಾವ್ಯ**ದಲ್ಲಿ ೧೫ ಸರ್ಗಗಳಿವೆ. ಜೈನ ತೀರ್ಥಂಕರ ನೇಮಿನಾಥನ ಚರಿತ್ರವೇ ಕಾವ್ಯದ ವಸ್ತು. ಈ ಕವಿಯು ಹೇಮಚಂದ್ರನ ಸಮಕಾಲೀನ.

### ೨೧. ಸಂಧ್ಯಾಕರನಂದೀ (ಕ್ರಿ.ಶ. ೧೨ನೆಯ ಶತಮಾನ)

ಸಂಧ್ಯಾಕರನಂದಿಯ **ರಾಮಪಾಲಚರಿತವು** ಶ್ಲೇಷೆಯಿಂದ ಕೂಡಿದ ಪದ್ಯಗಳುಳ್ಳದ್ದಾಗಿ ಪ್ರತಿಯೊಂದು ಪದ್ಯಕ್ಕೂ ಎರಡರ್ಥ ಬರುವಂತೆ ರಚಿತವಾಗಿದೆ. ಒಂದರ್ಥವು ಶ್ರೀರಾಮನ ಚರಿತ್ರೆಯನ್ನು ನಿರೂಪಿಸುತ್ತದೆ. ಇನ್ನೊಂದು ಬಂಗಾಲದ ಪಾಲವಂಶದ ರಾಮಪಾಲರಾಜನ ( ಕ್ರಿ.ಶ. 1084-1130 ) ಚರಿತ್ರೆಯನ್ನು ವಿವರಿಸುತ್ತದೆ. ಇದರಲ್ಲಿ ಕಾವ್ಯಗುಣಗಳು ಅಷ್ಟಾಗಿಲ್ಲ. ಗಣನೀಯವಾದ ಐತಿಹಾಸಿಕ ಘಟನೆಗಳೂ ವರ್ಣಿತವಾಗಿಲ್ಲ.

ಇದರಲ್ಲಿ ೪ ಸರ್ಗಗಳೂ ಒಟ್ಟು ೨೦೦ ಆರ್ಯಾ(ವೃತ್ತ)ಗಳೂ ಇವೆ. ರಾಮಪಾಲನ ಮಗ ಮದನಪಾಲನ ಕಾಲದಲ್ಲಿ ಇದು ರಚಿತವಾಯಿತು.

### ೨೨. ಧನಂಜಯ (ಕ್ರಿ.ಶ. ೧೨ನೆಯ ಶತಮಾನ)

ಧನಂಜಯನ ಇನ್ನೊಂದು ಹೆಸರು ಶ್ರುತಕೀರ್ತಿ. ಈತನು ದಿಗಂಬರ ಜೈನ. ಕ್ರಿ. ಶ. 1128 ರಿಂದ 1140 ರೊಳಗೆ ಈತನು ತನ್ನ **ರಾಘವಪಾಂಡವೀಯ** ಎಂಬ ದ್ವಿಸಂಧಾನಕಾವ್ಯವನ್ನು ರಚಿಸಿದನು. ಮೇಲೆ ಹೇಳಿದ ರಾಮಪಾಲಚರಿತದಂತೆಯೇ ಇದರ ಒಂದೊಂದು ಶ್ಲೋಕಕ್ಕೂ ರಾಮ ಮತ್ತು ಪಾಂಡವರ ಪರವಾದ ಎರಡೆರಡರ್ಥಗಳಿದ್ದು ಎರಡು ಕಥೆಗಳೂ ಏಕಕಾಲದಲ್ಲೇ ನಿರೂಪಿತವಾಗಿವೆ. ಇದು ೧೮ ಸರ್ಗಗಳ ಪಾಂಡಿತ್ಯಪೂರ್ಣ ಮಹಾಕಾವ್ಯ.

### ೨೩. ಕವಿರಾಜ (ಕ್ರಿ.ಶ. ೧೨ನೆಯ ಶತಮಾನ)

ಕವಿರಾಜನ ವಾಸ್ತವಿಕ ಹೆಸರು ಮಾಧವಭಟ್ಟ. ಇವನಿಗೇ ಕವಿರಾಜಸೂರಿ, ಕವಿರಾಜಪಂಡಿತ ಎಂಬ ಹೆಸರುಗಳೂ ರೂಢಿಯಲ್ಲಿದ್ದುವು. ಕಾಮದೇವನು (ಪ್ರಾಯಃ ಕದಂಬರಾಜ ಕ್ರಿ.ಶ. 1182-97) ತನ್ನ ಆಶ್ರಯದಾತನೆಂದು ಈತನೇ ಹೇಳಿಕೊಂಡಿದ್ದಾನೆ.



ಕವಿರಾಜನೂ **ರಾಘವ-ಪಾಂಡವೀಯ** ಎಂಬ ಶ್ಲೇಷಪದ್ಯಾತ್ಮಕವಾದ ಕಾವ್ಯವೊಂದನ್ನು ಬರೆದಿದ್ದಾನೆ. ಇದು ಎಲ್ಲ ರೀತಿಯಲ್ಲೂ ಧನಂಜಯನ ಕಾವ್ಯದಂತೆಯೇ ಇರುವ ದ್ವಿಸಂಧಾನಕಾವ್ಯ. ಕವಿರಾಜನ ಈ ಕಾವ್ಯದಲ್ಲಿ ಬರೀ ಶಬ್ದಚಮತ್ಕಾರ ಮಾತ್ರವಲ್ಲದೆ ಕಾವ್ಯಗುಣಗಳೂ ಹೇರಳವಾಗಿವೆ. ಕವಿಯ ಪ್ರತಿಭೆ ಉದ್ದಕ್ಕೂ ಹೊರಹೊಮ್ಮಿ ಬೆಳಗುತ್ತದೆ.

**ಪಾರಿಜಾತಹರಣವು** ಕವಿರಾಜನ ಮತ್ತೊಂದು ಮಹಾಕಾವ್ಯ. ಇದರಲ್ಲಿ ೧೦ ಸರ್ಗಗಳಿವೆ. ಸತ್ಯಭಾಮೆಯನ್ನು ಸಂತೋಷಪಡಿಸುವುದಕ್ಕಾಗಿ ಪಾರಿಜಾತವೃಕ್ಷವನ್ನು ಶ್ರೀಕೃಷ್ಣನು ಭೂಲೋಕಕ್ಕೆ ತಂದುದೇ ಈ ಕಾವ್ಯದ ವಸ್ತು. ಕಾವ್ಯದ ಶೈಲಿ ಮನೋಹರವಾಗಿದೆ; ಭಾಷೆ ಸುಲಭವೂ ಲಲಿತವೂ ಆಗಿದೆ. ಕವಿರಾಜನು ಬಾಣ ಸುಬಂಧುಗಳಷ್ಟೇ ವಕ್ರೋಕ್ತಿನಿಪುಣ.[15]

### ೨೪. ಹರದತ್ತಸೂರಿ (ಕ್ರಿ.ಶ. ೧೨ನೆಯ ಶತಮಾನ ?)

ಹರದತ್ತಸೂರಿಯ **ರಾಘವನೈಷಧೀಯವು** ರಾಘವಪಾಂಡವೀಯದಂತೆಯೇ ಒಂದು ದ್ವಿಸಂಧಾನಕಾವ್ಯ. ಇದು ಏಕಕಾಲದಲ್ಲಿ ರಾಮನ ಮತ್ತು ನಳನ ಕಥೆಯನ್ನು ನಿರೂಪಿಸುತ್ತದೆ.

ಹರದತ್ತನು ಜಯಶಂಕರನ ಮಗ. ಈತನ ಕಾಲ ನಿಷ್ಕೃಷ್ಟವಾಗಿ ತಿಳಿದಿಲ್ಲ. ಇವನು ೧೨ ನೆಯ ಶತಮಾನದವನೆಂದೂ ೧೮ ನೆಯ ಶತಮಾನದವನೆಂದೂ ವಿದ್ವಾಂಸರ ಅಭಿಪ್ರಾಯ ಭಿನ್ನವಾಗಿದೆ.

### ೨೫. ಶ್ರೀಹರ್ಷ (ಕ್ರಿ.ಶ. ೧೨ನೆಯ ಶತಮಾನ)

[16]ಶ್ರೀಹರ್ಷನು ಕನೋಜಿನ ಜಯಚಂದನ ಆಸ್ಥಾನ ಕವಿ. ಆದ್ದರಿಂದ ಈತನ ಕಾಲ ೧೨ನೆಯ ಶತಮಾನದ ಉತ್ತರಾರ್ಧ. ಇವನ ತಂದೆ ಹೀರ (ಪಂಡಿತ), ತಾಯಿ ಮಾಮಲ್ಲದೇವಿ. ಹೀರನನ್ನು ರಾಜಾಸ್ಥಾನದಲ್ಲಿ ಮತ್ತೊಬ್ಬ ಕವಿಯು ವಾದದಲ್ಲಿ ಸೋಲಿಸಿ ಅಪಮಾನಮಾಡಿದನಂತೆ. ಅದೇ ಕೊರಗಿನಿಂದ

---

15 ಸುಬಂಧುರ್ಬಾಣಭಟ್ಟಶ್ಚ ಕವಿರಾಜ ಇತಿ ತ್ರಯಃ ।
ವಕ್ರೋಕ್ತಿಮಾರ್ಗನಿಪುಣಾಃ ಚತುರ್ಥೋ ವಿದ್ಯತೇ ನ ವಾ ॥
— ರಾಘವಪಾಂಡವೀಯ i 41

16 ನಾಟಕಕರ್ತನಾದ ೭ನೆಯ ಶತಮಾನದ ಶ್ರೀಹರ್ಷನೇ ಬೇರೆ ಈ ಶ್ರೀಹರ್ಷನೇ ಬೇರೆ.

ಹೀರನು ಸಾಯುವುದಕ್ಕೆ ಮುಂಚೆ ಮಗನನ್ನು ಕರೆದು ತನಗಾದ ಅಪಮಾನದ ಸೇಡನ್ನು ಅವನಾದರೂ ತೀರಿಸಿಕೊಳ್ಳಬೇಕೆಂದು ಕೇಳಿಕೊಂಡುದಾಗಿಯೂ, ಅದಕ್ಕಾಗಿ ಶ್ರೀಹರ್ಷನು ಯೋಗೀಶ್ವರನೊಬ್ಬನನ್ನು ತನ್ನ ಶುಶ್ರೂಷೆಯಿಂದ ಮೆಚ್ಚಿಸಿ ಅವನಿಂದ ಚಿಂತಾಮಣಿ ಮಂತ್ರಸಿದ್ಧಿ ಪಡೆದು ಅಪ್ರತಿಹತವಾದ ಕವಿತಾಶಕ್ತಿಯೊಡನೆ ರಾಜಸಭೆಗೆ ಬಂದು ತನ್ನ ತಂದೆಯನ್ನು ಹಿಂದೆ ಸೋಲಿಸಿದ್ದ ಕವಿಯನ್ನು ವಾದದಲ್ಲಿ ಗೆದ್ದು ಸನ್ಮಾನಿತನಾದನೆಂದೂ ಆ ಬಳಿಕ ನೈಷಧಕಾವ್ಯ ರಚಿಸಿ ' ನರಭಾರತಿ ' ಎಂಬ ಪ್ರಶಸ್ತಿಗಳಿಸಿದನೆಂದೂ, ' ಕಲಾಭಾರತಿ 'ಯೆಂದು ತನ್ನನ್ನು ಕರೆದುಕೊಳ್ಳುತ್ತಿದ್ದ ಅಸೂಯಾಪರಳಾದ ರಾಣಿಯು ಶ್ರೀಹರ್ಷನ ಮೇಲ್ಮೆಯನ್ನು ಸಹಿಸದೆ ಈತನಿಗೆ ಬಹಳ ಉಪಟಳವುಂಟುಮಾಡುತ್ತಿದ್ದುದರಿಂದ ಶ್ರೀಹರ್ಷನು ಗಂಗಾತೀರಕ್ಕೆ ತೆರಳಿ ಅಲ್ಲಿ ಕೊನೆಯವರೆಗೂ ವಿರಕ್ತನಾಗಿ ಕಾಲಕಳೆದನೆಂದೂ ರಾಜಶೇಖರನು ತನ್ನ ಪ್ರಬಂಧಕೋಶ (ಕ್ರಿ.ಶ. 1348) ದಲ್ಲಿ ಹೇಳಿದ್ದಾನೆ.

**ನೈಷಧ** ಅಥವಾ **ನೈಷಧೀಯಚರಿತವು** ಶ್ರಿಹರ್ಷರಚಿತವಾದ ಪ್ರೌಢ ಮಹಾಕಾವ್ಯ. ನಳದಮಯಂತಿಯರ ಕಥೆಯೇ ಕಾವ್ಯದ ವಸ್ತು. ಇದು ಈಗ ೨೨ ಸರ್ಗಗಳಲ್ಲಿ ಪ್ರಚಲಿತವಾಗಿದೆಯಾದರೂ ಇದು ೬೦ ಸರ್ಗಗಳ ಅಥವಾ ೧೨೦ ಸರ್ಗಗಳ ಕಾವ್ಯವಾಗಿ ರಚಿತವಾಗಿತ್ತೆಂಬುದು ಪಂಡಿತರ ಅಭಿಪ್ರಾಯ. ಈಗಿರುವಂತೆ ಕಾವ್ಯವು ನಳದಮಯಂತಿಯರ ವಿವಾಹದಲ್ಲಿ ಮುಗಿಯುತ್ತದೆ.

ನೈಷಧಕಾವ್ಯವು[17] ಪಂಚಮಹಾಕಾವ್ಯಗಳಲ್ಲಿ ಒಂದೆಂದು ಹಿಂದಿನಿಂದಲೂ ಪರಿಗಣಿತವಾಗಿದೆ. ಈ ಕಾವ್ಯದಲ್ಲಿ ವರ್ಣನೆಗಳು ನಿರರ್ಗಳವಾಗಿ ಸಾಗುತ್ತವೆ. ಅಲಂಕಾರ ವೈವಿಧ್ಯ ಯಾರನ್ನೇ ಆಗಲಿ ಬೆರಗುಮಾಡುವಂತಿದೆ. ಪುರಾಣ ಕಥೆಗಳು, ಉಪಾಖ್ಯಾನಗಳು ಕವಿಗೆ ಕರತಲಾಮಲಕಪ್ರಾಯ. ಶಬ್ದಪ್ರಯೋಗಗಳು ಪಾಂಡಿತ್ಯಪೂರ್ಣವಾಗಿವೆ. ಆದ್ದರಿಂದಲೇ ಭಾರತೀಯ ವಿದ್ವಾಂಸರಲ್ಲಿ "ನೈಷಧಂ ವಿದ್ವದೌಷಧಂ" ಎಂಬ ಭಾವನೆ ಬೇರೂರಿ ಬಂದಿದೆ. ಯಮಕಗಳೂ ಶ್ಲೇಷೆಯೂ ನೈಷಧದಲ್ಲಿ ಸ್ವಲ್ಪ ಹೆಚ್ಚೇ ಎನ್ನಬಹುದಾದರೂ ಪ್ರಕೃತಿವರ್ಣನಾಭಾಗಗಳು ಮೋಹಕವಾಗಿವೆ. ಕವಿಯ ಶಬ್ದಸಂಪತ್ತಿಯೂ, ಯಾವುದನ್ನೇ ಆಗಲಿ ಸೂಕ್ಷ್ಮವಾಗಿ ಪರಿಶೀಲಿಸುವ ಸಾಮರ್ಥ್ಯವೂ, ಪರಿಶೀಲಿಸಿದುದನ್ನು ನಿರೂಪಿಸುವ ರೀತಿಯೂ ಪ್ರಶಂಸನೀಯ.

---

17 ಪಂಚಮಹಾಕಾವ್ಯಗಳು— ಕಾಳಿದಾಸನ ರಘುವಂಶ, ಕುಮಾರಸಂಭವ; ಭಾರವಿಯ ಕಿರಾತಾರ್ಜುನೀಯ ; ಮಾಘನ ಶಿಶುಪಾಲವಧ ; ಮತ್ತು ಶ್ರೀಹರ್ಷನ ನೈಷಧ.



ಶ್ರೀಹರ್ಷನು ನ್ಯಾಯ, ಮೀಮಾಂಸಾ, ಪುರಾಣ, ಸ್ಮೃತಿ ಮುಂತಾದುವುಗಳಲ್ಲಿ ಪ್ರವೀಣನಾಗಿದ್ದನೆಂಬುದು ನೈಷಧದ ಹದಿನೇಳನೆಯ ಸರ್ಗದಲ್ಲಿ ಬರುವ ಮತಗಳ ಖಂಡನೆಯಿಂದ ಸ್ಪಷ್ಟವಾಗುತ್ತದೆ. ಈತನ ಕಾವ್ಯಕ್ಕೆ ಅನೇಕ ವ್ಯಾಖ್ಯಾನಗಳಿವೆ. ವ್ಯಾಖ್ಯಾನದ ಸಹಾಯವಿಲ್ಲದೆ ನೈಷಧವು ಅರ್ಥವಾಗುವುದು ಕಷ್ಟವೆಂದೇ ಹೇಳಬೇಕು.

ನೈಷಧಕಾವ್ಯದ ಸರ್ಗಾಂತಗಳಲ್ಲಿ ತನ್ನ ಇತರ ಗ್ರಂಥಗಳ ಹೆಸರುಗಳನ್ನು ಶ್ರೀಹರ್ಷನೇ ಹೇಳಿಕೊಂಡಿದ್ದರೂ ಅವುಗಳೆಲ್ಲವೂ ಈಗ ಉಪಲಬ್ಧವಾಗಿಲ್ಲ. **ಸ್ಥೈರ್ಯವಿಚಾರಪ್ರಕರಣ, ವಿಜಯಪ್ರಶಸ್ತಿ, ಖಂಡನಖಂಡಖಾದ್ಯ, ಗೌಡೋರ್ವೀಶಕುಲಪ್ರಶಸ್ತಿ, ಅರ್ಣವವರ್ಣನ, ಛಂಡಪ್ರಶಸ್ತಿ, ಶಿವಶಕ್ತಿಸಿದ್ಧಿ, ಅಮರಖಂಡನ, ಸಾಹಸಾಂಕಚರಿತ**—ಇವು ಹರ್ಷವಿರಚಿತ ಇತರ ಗ್ರಂಥಗಳು.

## ೨೬. ಕಾಳಿದಾಸ (?)

**ನಳೋದಯ**ವೆಂಬ ನಾಲ್ಕು ಸರ್ಗಗಳ ಕಾವ್ಯವೊಂದನ್ನು ಕಾಳಿದಾಸರಚಿತವೆಂದು ಹೇಳುವುದುಂಟು. ಈ ಕಾವ್ಯವನ್ನು ಸಮೀಕ್ಷಿಸಿದರೆ ಅದರಲ್ಲಿ ಶಬ್ದಚಮತ್ಕಾರ, ವೃತ್ತವೈವಿಧ್ಯ ಮುಂತಾದ ಅರ್ವಾಚೀನ ಕಾವ್ಯಗಳ ಚಾಳಿಯೇ ಎದ್ದು ಕಾಣುತ್ತದಲ್ಲದೆ ರಘುವಂಶದ ಕರ್ತೃವಾದ ಕಾಳಿದಾಸನ ಕಾವ್ಯನಾಟಕಾದಿಗಳಲ್ಲಿ ಕಂಡುಬರುವ ಯಾವ ಕಾವ್ಯವೈಶಿಷ್ಟ್ಯವೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ನಳೋದಯದ ಎರಡನೆಯ ಸರ್ಗವೇ ಅತ್ಯಂತ ದೀರ್ಘವಾಗಿದ್ದು ಅದು ನವೋಢ ದಂಪತಿಗಳ ಸುಖಸಂತೋಷಗಳ ವರ್ಣನೆಯಿಂದ ಕೂಡಿ ಭಾವಗೀತೆಯಂತಿದೆ. ಈ ನಳೋದಯಕಾವ್ಯವು ಕೇರಳದ ವಾಸುದೇವಕವಿ ವಿರಚಿತವೆಂಬುದು ಕೆಲವು ವಿಮರ್ಶಕರ ಅಭಿಪ್ರಾಯ. ನಳೋದಯಕ್ಕೆ ವ್ಯಾಖ್ಯಾನ ಬರೆದಿರುವ ರಾಮರ್ಷಿಯು ಅದನ್ನು ನಾರಾಯಣನ ಮಗ ರವಿದೇವಕೃತವೆಂದು ಹೇಳಿದ್ದಾನೆ.

ಇಪ್ಪತ್ತೇ ಶ್ಲೋಕಗಳುಳ್ಳ **ರಾಕ್ಷಸಕಾವ್ಯ**ವನ್ನೂ ಕಾಳಿದಾಸಕೃತವೆಂದು ಕೆಲವರು ಭಾವಿಸುತ್ತಾರೆ. ಇದು ವರರುಚಿಕೃತವೆಂದು ಮತ್ತೆ ಕೆಲವರ ಅಭಿಪ್ರಾಯವಿದೆ.

## ೨೭. ಕೃಷ್ಣಾನಂದ (ಕ್ರಿ.ಶ. ೧೩ನೆಯ ಶತಮಾನ)

ಕೃಷ್ಣಾನಂದನು ಪುರಿಯವನು. ಈತ ರಚಿಸಿರುವ **ಸಹೃದಯಾನಂದ** ಮಹಾಕಾವ್ಯದಲ್ಲಿ ೧೫ ಸರ್ಗಗಳಿವೆ. ನಳಚರಿತ್ರೆಯೇ ಕಾವ್ಯದ ವಸ್ತು. ಕಾವ್ಯದ

ಶೈಲಿ ಲಲಿತವೂ ಮನೋಹರವೂ ಆಗಿದೆ. ಹದಿನಾಲ್ಕನೆಯ ಶತಮಾನದ ವಿಶ್ವನಾಥನು ತನ್ನ ಸಾಹಿತ್ಯದರ್ಪಣದಲ್ಲಿ ಕೃಷ್ಣಾನಂದನನ್ನು ಉಲ್ಲೇಖಿಸಿರುವುದರಿಂದ ಈ ಕವಿಯು ೧೩ನೆಯ ಶತಮಾನಕ್ಕಿಂತ ಈಚಿನವನಲ್ಲ.

### ೨೮. **ಅಮರಚಂದ್ರ** (ಕ್ರಿ.ಶ. ೧೩ನೆಯ ಶತಮಾನ)

ಅಮರಚಂದ್ರನು ಜೈನಕವಿ. ಗುಜರಾತಿನ ರಾಜಾ ವೀರಧವಳನ ಮಗ ವಿಶಾಲದೇವರಾಜನು (ಕ್ರಿ.ಶ. 1243-1262) ಈ ಕವಿಯನ್ನು ವಿಶೇಷವಾಗಿ ಗೌರವಿಸಿದ್ದನೆಂದು ೧೪ನೆಯ ಶತಮಾನದ ಮೇರುತುಂಗನ ಪ್ರಬಂಧಚಿಂತಾಮಣಿಯಲ್ಲೂ ರಾಜಶೇಖರನ ಪ್ರಬಂಧಕೋಶದಲ್ಲೂ ಹೇಳಿದೆ. ಆದ್ದರಿಂದ ಅಮರಚಂದ್ರನು ಹದಿನಾಲ್ಕನೆಯ ಶತಮಾನಕ್ಕಿಂತ ಹಿಂದಿನವನೆಂಬುದರಲ್ಲಿ ಸಂಶಯವಿಲ್ಲ.

ಅಮರಚಂದ್ರನ **ಬಾಲಭಾರತ** ತುಂಬ ಪ್ರಸಿದ್ಧವಾಗಿದೆ. ಇದರಲ್ಲಿ ಆತನು ಮಹಾಭಾರತದ ಕಥೆಯನ್ನು ಪರ್ವಗಳ ಕ್ರಮದಲ್ಲೇ ಸಂಗ್ರಹವಾಗಿ ಕಾವ್ಯ ಶೈಲಿಯಲ್ಲಿ ಬರೆದಿದ್ದಾನೆ. ಭಾಷೆಯು ಲಲಿತವಾಗಿರುವುದರಿಂದಲೂ ಕಾವ್ಯಗುಣಗಳು ಹೇರಳವಾಗಿರುವುದರಿಂದಲೂ ಬಾಲಭಾರತವು ರಘುವಂಶಕ್ಕೆ ಸರಿಸಮವೆಂಬ ಭಾವನೆಯಿದೆ. **ಪದ್ಮಾನಂದಕಾವ್ಯ** ಅಥವಾ **ಜಿನೇಂದ್ರಚರಿತವು** ಅಮರಚಂದ್ರನ ಮತ್ತೊಂದು ಮಹಾಕಾವ್ಯ. ಇದರಲ್ಲಿ ಜಿನನ ಚರಿತ್ರವು ವರ್ಣಿತವಾಗಿದೆ. **ಕಾವ್ಯಕಲ್ಪಲತಾ, ಕವಿಶಿಕ್ಷಾ, ಕಲಾಕಲಾಪ** ಎಂಬುವು ಇದೇ ಕವಿಯ ಸಾಹಿತ್ಯಶಾಸ್ತ್ರಗ್ರಂಥಗಳು.

### ೨೯. **ವೇಂಕಟನಾಥ [ವೇದಾಂತದೇಶಿಕ]** (ಕ್ರಿ.ಶ, ೧೪ನೆಯ ಶತಮಾನ)

ವೇಂಕಟನಾಥರು ವೇದಾಂತದೇಶಿಕರೆಂಬ ಹೆಸರಿನಿಂದಲೇ ವಿಶೇಷವಾಗಿ ವ್ಯವಹರಿಸಲ್ಪಡುತ್ತಾರೆ. ಇವರು ಸುಪ್ರಸಿದ್ಧ ಶ್ರೀವೈಷ್ಣವಾಚಾರ್ಯರು. ಕಾಂಚೀಪುರದ ಬಳಿಯಿರುವ ತೂಪ್ಪಿಲ್ ಗ್ರಾಮ ಇವರ ಜನ್ಮಸ್ಥಳ. ಇವರು ಬಹುವಿದ್ಯಾಪಾರಂಗತರಾಗಿದ್ದು 'ಸರ್ವತಂತ್ರ ಸ್ವತಂತ್ರ' ಎಂಬ ಬಿರುದನ್ನೂ ತರ್ಕದಲ್ಲೂ ಕವಿತ್ವದಲ್ಲೂ ಎದುರಾಳಿಗಳಿಗೆ ಸಿಂಹಪ್ರಾಯರಾಗಿದ್ದು 'ಕವಿತಾರ್ಕಿಕಸಿಂಹ' ಎಂಬ ಬಿರುದನ್ನೂ ಗಳಿಸಿದ್ದರು. ಇವರಿಂದ ರಚಿತವಾದ ಗ್ರಂಥಗಳು ೧೨೧;—ಕಾವ್ಯಗಳು ೫, ಭಾವಗೀತಾತ್ಮಕ ಸ್ತೋತ್ರಗಳು ೩೨, ವಿಶಿಷ್ಟಾದ್ವೈತ ಸಿದ್ಧಾಂತ ಗ್ರಂಥಗಳು ೨೪, ಶ್ರೀವೈಷ್ಣವ ಸಂಪ್ರದಾಯ ಗ್ರಂಥಗಳು (ಪ್ರಬಂಧ



ಗಳೂ ಸೇರಿ) ೫೬, ಸಂಕೀರ್ಣ ಶಾಸ್ತ್ರಗ್ರಂಥಗಳು ೪. ಈ ಪೈಕಿ ಸಂಪ್ರದಾಯಗ್ರಂಥಗಳು ತಮಿಳಿನಲ್ಲೂ ಉಳಿದುವು ಸಂಸ್ಕೃತದಲ್ಲೂ ರಚಿತವಾಗಿವೆ.

ಇಲ್ಲಿ ನಾವು ವಿವೇಚಿಸಬೇಕಾಗಿರುವುದು ಅವರ ಕಾವ್ಯಗಳನ್ನು ಮಾತ್ರ. **ಯಾದವಾಭ್ಯುದಯವು** ವೇಂಕಟನಾಥರಿಂದ ರಚಿತವಾದ ೨೪ ಸರ್ಗಗಳ ಲಕ್ಷಣಬದ್ಧವಾದ ಮಹಾಕಾವ್ಯ. ಶ್ರೀಕೃಷ್ಣನ ಮತ್ತು ಯದುವಂಶದ ಚರಿತ್ರೆ ಈ ಕಾವ್ಯದ ವಸ್ತು. ಇದಕ್ಕೆ ೧೬ನೆಯ ಶತಮಾನದ ಅಪ್ಪಯ್ಯದೀಕ್ಷಿತರ ವ್ಯಾಖ್ಯಾನವಿದೆ. ವ್ಯಾಖ್ಯಾನದಲ್ಲಿ ಇವರು ಹೇಳಿರುವ 'ಇತ್ಥಂ ವಿಚಿಂತ್ಯಾಃ ಸರ್ವತ್ರ ಭಾವಾಃ ಸನ್ತಿ ಪದೇ ಪದೇ । ಕವಿತಾರ್ಕಿಕಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ ॥' ಎಂಬ ಮಾತು ಗಮನಾರ್ಹ. ಈ ಕಾವ್ಯದ ಎರಡನೆಯ ಸರ್ಗದಲ್ಲಿ ಬರುವ ಸೂರ್ಯಾಸ್ತ ಮತ್ತು ಚಂದ್ರೋದಯ ವರ್ಣನೆಗಳು ಕವಿಯ ಮೌಲಿಕತೆ ಮತ್ತು ಪ್ರತಿಭಾಸಂಪನ್ನತೆಗೆ ನಿದರ್ಶನಗಳು. ಶ್ರೀ ಅಪ್ಪಯ್ಯ ದೀಕ್ಷಿತರು ತಮ್ಮ ಕುವಲಯಾನಂದದಲ್ಲಿ ಈ ಕಾವ್ಯದ ಶ್ಲೋಕಗಳನ್ನು ಉದಾಹರಿಸಿದ್ದಾರೆ. ಶ್ರೀ ದೇಶಿಕರು ಕಾಳಿದಾಸನ ರಘುವಂಶದಿಂದ ಪ್ರಭಾವಿತರಾಗಿ ಯಾದವಾಭ್ಯುದಯ ರಚಿಸಿರಬೇಕೆಂಬುದು ಈ ಎರಡೂ ಕಾವ್ಯಗಳ ಹೋಲಿಕೆಯಿಂದ ಸಿದ್ಧವಾಗುತ್ತದೆ. ವೇದಾಂತ ದೇಶಿಕರ ಕಾವ್ಯಗಳಲ್ಲಿ ಭಾವಗೀತಾತ್ಮಕವಾದ **ಹಂಸಸಂದೇಶವೂ** ಶ್ರೀ ರಂಗನಾಥದೇವರ ಪಾದುಕೆಗಳ, ಅಂದರೆ ಶ್ರೀಶಠಾರಿಯ ಸ್ತೋತ್ರರೂಪವಾದ **ಪಾದುಕಾಸಹಸ್ರವೂ** ಸುಪ್ರಸಿದ್ಧವಾಗಿವೆ. ಇವರ **ಸಂಕಲ್ಪಸೂರ್ಯೋದಯ** ನಾಟಕವು ಕೃಷ್ಣಮಿಶ್ರರ ಪ್ರಬೋಧಚಂದ್ರೋದಯಕ್ಕೆ ಪ್ರತಿಯಾಗಿ ಬರೆದ ನಾಟಕ. **ಸುಭಾಷಿತನೀವೀ** ಎಂಬುದು ನೀತಿಬೋಧಕ (ಮುಕ್ತಕ) ಕಾವ್ಯ. **ಅಚ್ಯುತಶತಕವು** ಪ್ರಾಕೃತ ಭಾಷೆಯಲ್ಲಿ ರಚಿತವಾದ ವಿಷ್ಣುಸ್ತುತಿ.

ವೇಂಕಟನಾಥರು ವಿದ್ಯಾರಣ್ಯರ ಸಮಕಾಲೀನರು. ಇವರು ಬಡವರಾಗಿ ಹುಟ್ಟಿ ಬಡವರಾಗಿಯೇ ಕಾಲಯಾಪನೆಮಾಡಿದವರು. ಐಹಿಕ ಭೋಗಾದಿಗಳಲ್ಲಿ ಆಸೆಯಿಡದೆ ಕೇವಲ ಆಮುಷ್ಮಿಕಸಾಧನೆಯಲ್ಲೇ ನಿರತರಾಗಿದ್ದವರು. ಇವರು "ನಾಸ್ತಿ ಪಿತ್ರಾರ್ಜಿತಂ ಕಿಂಚಿತ್ ನ ಮಯಾ ಕಿಂಚಿದಾರ್ಜಿತಂ ।

ಅಸ್ತಿ ಮೇ ಹಸ್ತಿಶೈಲಾಗ್ರೇ ವಸ್ತು ಪೈತಾಮಹಂ ಧನಂ ॥"

ಎಂದು ಪದೇ ಪದೇ ಹೇಳುತ್ತಿದ್ದರು. ಇವರು ೧೨೬೮ರಲ್ಲಿ ಜನ್ಮತಾಳಿ ೧೩೬೯

ರ ನವಂಬರ್ ತಿಂಗಳಲ್ಲಿ ಕೀರ್ತಿಶೇಷರಾದರು. ಈಗಲೂ ಇವರು ಅನೇಕ ಭಕ್ತಕೋಟಿಗಳಿಂದ ಪೂಜಿಸಲ್ಪಡುತ್ತಿದ್ದಾರೆ. ಎಲ್ಲ ವೈಷ್ಣವಾಲಯಗಳಲ್ಲೂ ಪ್ರಾಯಃ ಇವರ ಅರ್ಚಾವಿಗ್ರಹ ಪ್ರತಿಷ್ಠಿತವಾಗಿದೆ.

### ೩೦. **ವಾಮನಭಟ್ಟಬಾಣ** (ಕ್ರಿ.ಶ. ೧೫ನೆಯ ಶತಮಾನ)

ವಾಮನಭಟ್ಟಬಾಣನು ವಿದ್ಯಾರಣ್ಯರ ಶಿಷ್ಯ. ಈತನು ತನ್ನ ಜೀವಿತ ಕಾಲದ ಉತ್ತರಾರ್ಧದಲ್ಲಿ ಕೊಂಡವೀಡುವಿನ ಪೆದ್ದ ಕೋಮಟಿ ವೇಮ ಭೂಪಾಲನ ( ಕ್ರಿ. ಶ. ೧೪೦೩–೧೪೨೦ ) ಆಸ್ಥಾನಕವಿಯಾಗಿದ್ದು ವಿಶೇಷ ಸನ್ಮಾನಾದಿಗಳನ್ನು ಗಳಿಸಿದನು. **ವೇಮಭೂಪಾಲಚರಿತ**ವೆಂಬ ಉತ್ತಮವಾದ ಗದ್ಯಕಾವ್ಯವನ್ನು ಬರೆದು ಆ ರಾಜನಿಗೆ ತನ್ನ ಕೃತಜ್ಞತೆಯನ್ನೂ ಸಲ್ಲಿಸಿದನು.

ಎಂಟು ಸರ್ಗಗಳ **ನಲಾಭ್ಯುದಯ**ವೂ ಮುವತ್ತು ಸರ್ಗಗಳ **ರಘುನಾಥಚರಿತ**ವೂ ವಾಮನಭಟ್ಟಬಾಣರಚಿತ ಮಹಾಕಾವ್ಯಗಳು. ಇವೆರಡಲ್ಲದೆ ಈತನು ಇನ್ನೂ ಅನೇಕ ಕಾವ್ಯಾದಿಗಳನ್ನು ರಚಿಸಿದ್ದಾನೆಂಬ ಪ್ರಸಿದ್ಧಿಯಿದೆ. ಈತನ **ಹಂಸಸಂದೇಶ**ವು ಕಾಳಿದಾಸನ ಮೇಘಸಂದೇಶವನ್ನು ಅನುಕರಿಸಿ ಬರೆದ ಭಾವಗೀತಾತ್ಮಕ ಕಾವ್ಯ. ವಿಜಯನಗರದಲ್ಲಿ ವಿರೂಪಾಕ್ಷನ ಉತ್ಸವ ಕಾಲದಲ್ಲಿ ಪ್ರತಿವರ್ಷವೂ ಈತನ **ಶೃಂಗಾರಭೂಷಣಭಾಣ**ವು ಪ್ರದರ್ಶಿತವಾಗುತ್ತಿತ್ತು. ಐದು ಅಂಕಗಳ **ಪಾರ್ವತೀಪರಿಣಯ**, ನಾಲ್ಕು ಅಂಕಗಳ **ಕನಕಲೇಖಾ** ಎಂಬೆರಡು ನಾಟಕಗಳೂ ಈತನವೇ. ಇವೆಲ್ಲಕ್ಕಿಂತ ಮುಖ್ಯವಾದುದು ಈತನ ( ಪದ್ಯಾತ್ಮಕವಾದ ) **ಬೃಹತ್ಕಥಾಮಂಜರೀ.** ಇದರ ( ಅಸಮಗ್ರವಾಗಿ ಉಪಲಬ್ಧವಾಗಿರುವ ) ಮಾತೃಕೆಯಲ್ಲಿ ಕಾದಂಬರಿಯ ಕಥೆಯು ಬಾಣನು ಹೇಳಿರುವ ರೀತಿಯಲ್ಲೇ ಇದ್ದು ಕೊನೆಯಲ್ಲಿ "ಇಯಮೇವ ಕಥಾ ಬಾಣೇನ ಬಹುಲೀಕೃತಾ ಕಾದಂಬರೀಕಥಾತ್ವೇನ" ಎಂದಿದೆ.

ವಾಮನಭಟ್ಟಬಾಣನ ಪಾಂಡಿತ್ಯ ಕವಿತಾಶಕ್ತಿ ಶಬ್ದಸಂಪತ್ತಿಗಳು ಪ್ರಶಂಸಾರ್ಹನಾದುವು. 'ಸರಸಗದ್ಯಸರಣಿಗಳಲ್ಲಿ ಬಾಣನನ್ನು ಬಿಟ್ಟರೆ ಇತರ ಕವಿಗಳೆಲ್ಲ ಕುರುಡರು'[18] ಎಂಬ ಕವಿಸಾಮಾನ್ಯಕ್ಕೇ ಒದಗಿದ್ದ ಅಪಕೀರ್ತಿ

---

[18] ಬಾಣಾದನ್ಯೇ ಕವಯಃ ಕಾಣಾಃ ಖಲು ಸರಸಗದ್ಯಸರಣೀಷು ।
ಇತಿ ಜಗತಿ ರೂಢಮಯಶೋ ವಾಮನಬಾಣೋಽಪಮಾರ್ಷ್ಟಿ ವತ್ಸಕುಲಃ ॥



ಯನ್ನು ತೊಡೆದುಹಾಕುವುದಾಗಿ ಈತನು ಹೇಳಿಕೊಂಡು ನಾಲ್ಕು ಉಚ್ಛ್ವಾಸಗಳ ವೇಮಭೂಪಾಲಚರಿತವೆಂಬ ಐತಿಹಾಸಿಕ ಗದ್ಯಕಾವ್ಯವನ್ನು ರಚಿಸಿದನು. ಈ ಕಾವ್ಯಕ್ಕೆ ವೀರನಾರಾಯಣಚರಿತವೆಂದೂ ಹೆಸರು.

### ೩೧. **ಚಿದಂಬರ** (ಕ್ರಿ.ಶ. ೧೬ನೆಯ ಶತಮಾನ)

ಚಿದಂಬರನು ವಿಜಯನಗರದ ರಾಜನಾದ ಒಂದನೆಯ ವೆಂಕಟನ ಆಸ್ಥಾನಕವಿ. ಈತನ **ರಾಘವ-ಯಾದವ-ಪಾಂಡವೀಯ**ವು ಮೂರು ಸರ್ಗಗಳ ತ್ರಿಸಂಧಾನಕಾವ್ಯ. ಇದರಲ್ಲಿ ರಾಮ, ಕೃಷ್ಣ ಮತ್ತು ಪಾಂಡವರ ಚರಿತ್ರೆಗಳು ಏಕಕಾಲದಲ್ಲಿ ನಿರೂಪಿತವಾಗಿವೆ. ಇದೇ ಮಾದರಿಯಲ್ಲಿ ರಚಿತವಾಗಿರುವ ಈತನ **ಪಂಚಕಲ್ಯಾಣಚಂಪೂಕಾವ್ಯ**ದಲ್ಲಿ ರಾಮ, ಕೃಷ್ಣ, ವಿಷ್ಣು, ಶಿವ ಮತ್ತು ಸುಬ್ರಹ್ಮಣ್ಯ ಈ ಐವರ ಮದುವೆಯ ಕಥೆಗಳು ಏಕಕಾಲದಲ್ಲಿ ವಿವರಿಸಲ್ಪಟ್ಟವೆ. ಇದು ಶಬ್ದಶ್ಲೇಷೆಯು ಸಾಧಿಸಬಹುದಾದ ಚಮತ್ಕಾರದ ಪರಮಾವಧಿ.

### ೩೨. **ವೇಂಕಟಾಧ್ವರಿ** (ಕ್ರಿ.ಶ. ೧೭ನೆಯ ಶತಮಾನ)

ವಿಶ್ವಗುಣಾದರ್ಶಚಂಪೂಕಾವ್ಯವನ್ನು ರಚಿಸಿ ಸುಪ್ರಸಿದ್ಧನಾದ ವೇಂಕಟಾಧ್ವರಿಯ **ಯಾದವ-ರಾಘವೀಯ** ಒಂದು ದ್ವಿಸಂಧಾನಕಾವ್ಯ. ಇದರಲ್ಲಿ ಕೃಷ್ಣ ಮತ್ತು ರಾಮ—ಈ ಇಬ್ಬರ ಕಥೆಗಳು ಏಕಕಾಲದಲ್ಲಿ ನಿರೂಪಿತವಾಗಿವೆ. ಕವಿರಾಜನ ಕಾವ್ಯಶೈಲಿಯನ್ನೇ ವೇಂಕಟಾಧ್ವರಿಯು ಅನುಕರಿಸಿದ್ದಾನೆ. ಆದರೆ ಇವನ ಕವಿತೆಯಲ್ಲಿ ಸೊಬಗಿಲ್ಲ. ಭಾಷೆಯು ಕಠಿಣ. ಯಮಕವೇ ಮುಂತಾದ ಶಬ್ದಾಡಂಬರಕ್ಕೇ ಪ್ರಾಧಾನ್ಯ ಹೆಚ್ಚು. (ಚಂಪೂಕಾವ್ಯದ ಅಧ್ಯಾಯವನ್ನೂ ನೋಡಿ)

### ೩೩. **ನೀಲಕಂಠದೀಕ್ಷಿತ** ( ಕ್ರಿ. ಶ. ೧೭ನೆಯ ಶತಮಾನ)

ನೀಲಕಂಠದೀಕ್ಷಿತನು ಸಂಸ್ಕೃತಸಾಹಿತ್ಯದ ವಿಭಿನ್ನ ಕ್ಷೇತ್ರಗಳಲ್ಲಿ ಗ್ರಂಥರಚನೆಮಾಡಿ ಪ್ರಸಿದ್ಧನಾಗಿರುವ ದಕ್ಷಿಣದೇಶದ ಕವಿ. ಈತನ **ಶಿವಲೀಲಾರ್ಣವ**ವು ೨೨ ಸರ್ಗಗಳ ಮಹಾಕಾವ್ಯ. ಇದರಲ್ಲಿ ಮಧುರಾಧಿದೇವತೆಯಾದ ಹಾಲಾಸ್ಯನಾಥ (ಶಿವ)ನ ೬೪ ಲೀಲೆಗಳೂ ಸುಂದರವಾಗಿ ಚಿತ್ರಿತವಾಗಿವೆ. ಎಂಟು ಸರ್ಗಗಳ **ಗಂಗಾವತರಣ**ವು ಈತನ ಮತ್ತೊಂದು ಮಹಾಕಾವ್ಯ. ಇದರಲ್ಲಿ ಗಂಗಾನದಿಯು ಭೂಮಿಯ ಮೇಲಕ್ಕೆ ಇಳಿದು ಬಂದುದರ ಸೊಗಸಾದ ವರ್ಣನೆಯಿದೆ.

ನೀಲಕಂಠದೀಕ್ಷಿತನ ಇತರ ಅನೇಕಕೃತಿಗಳಲ್ಲಿ **ನೀಲಕಂಠವಿಜಯ**ವೆಂಬ ಚಂಪೂಕಾವ್ಯವೂ **ಕಲಿವಿಡಂಬನ**ವೆಂಬ ನೀತಿಕಾವ್ಯವೂ ಜನಪ್ರಿಯವಾಗಿವೆ.

ನೀಲಕಂಠದೀಕ್ಷಿತನು ರಾಜಾತಿರುಮಲನಾಯಕನ ಪ್ರಧಾನಿಯಾಗಿದ್ದನು. ಕಲಿಯುಗದ ೪೭೩೮ ವರ್ಷಗಳು ಗತಿಸಿದ್ದಾಗ ತಾನು ನೀಲಕಂಠವಿಜಯವನ್ನು ರಚಿಸಿದುದಾಗಿ ಈತನೇ ಹೇಳಿಕೊಂಡಿದ್ದಾನೆ. ಇದು ಕ್ರಿ ಶ. ೧೬೩೭-೩೮ ಕ್ಕೆ ಸಮನಾಗುತ್ತದೆ. ಆದ್ದರಿಂದ ಈತನ ಕಾಲ ೧೭ನೆಯ ಶತಮಾನ.

## ೧೭ನೆಯ ಶತಮಾನದ ಇತರ ಮಹಾಕವಿಗಳು

ರಾಜಚೂಡಾಮಣಿದೀಕ್ಷಿತನ ಹತ್ತು ಸರ್ಗಗಳ **ರುಕ್ಮಿಣೀ ಕಲ್ಯಾಣ,** ಚಕ್ರಕವಿಯ ಎಂಟು ಸರ್ಗಗಳ **ಜಾನಕೀಪರಿಣಯ,** ರಾಮಭದ್ರದೀಕ್ಷಿತನ ಎಂಟು ಸರ್ಗಗಳ **ಪತಂಜಲಿಚರಿತ** — ಇವು ಹದಿನೇಳನೆಯ ಶತಮಾನದ ಕೆಲವು ಗಣ್ಯ ಮಹಾಕಾವ್ಯಗಳು.

## ಇತರ ಮಹಾಕಾವ್ಯಗಳು

ಪರಿಮಳನ **ನವಸಾಹಸಾಂಕಚರಿತ,** ಬಿಲ್ಹಣನ **ವಿಕ್ರಮಾಂಕದೇವಚರಿತ,** ಕಲ್ಹಣನ **ರಾಜತರಂಗಿಣೀ** ಮುಂತಾದುವೂ ಶ್ಲಾಘ್ಯರೀತಿಯ ಮಹಾಕಾವ್ಯಗಳೇ. ಅವು ಮುಂದಿನ (ಐತಿಹಾಸಿಕ ಕಾವ್ಯಗಳ) ಪರಿಚ್ಛೇದದಲ್ಲಿ ವಿಮರ್ಶಿಸಲ್ಪಡುತ್ತವೆ.

# ಅಧ್ಯಾಯ ೪

## ಐ ತಿ ಹಾ ಸಿ ಕ ಕಾ ವ್ಯ

ಸಂಸ್ಕೃತಕವಿಗಳಲ್ಲಿ ಇತಿಹಾಸ ಚಿತ್ರಣದ ಮನೋಧರ್ಮವೇ ಇಲ್ಲವೆಂದು ಕೆಲವು ಪಾಶ್ಚಾತ್ಯ ವಿದ್ವಾಂಸರು ಹೇಳುತ್ತಾರೆ. ಅವರ ಈ ಅಭಿಪ್ರಾಯವು ಸರಿಯಲ್ಲ. ಕೆಲವು ಮುಖ್ಯ ಘಟನೆಗಳ ಕಾಲಾದಿನಿರ್ದೇಶ, ಅವುಗಳ ಪೌರ್ವಾಪರ್ಯ ನಿರೂಪಣೆ — ಇವು ಎಲ್ಲ ಕಾಲದಲ್ಲೂ ದೇಶದಲ್ಲೂ ಇದ್ದೇ ತೀರಬೇಕಾದುವು. ಅನ್ಯದೇಶಗಳಲ್ಲಿ ಲೇಖಕರು ಆತ್ಮಕಥೆಗಳನ್ನು ಬರೆದಿಟ್ಟಿರಬಹುದು. ತನ್ನ ಹೆಸರನ್ನು ಹೇಳಿಕೊಳ್ಳುವುದೂ ಅಶ್ರೇಯಸ್ಕರ ಎಂಬ ಭಾವನೆ ಬೇರೂರಿದ್ದ ಭಾರತೀಯರಲ್ಲಿ ಆತ್ಮಕಥೆ ಬರೆಯುವ ವಾಡಿಕೆಯಿರಲಿಲ್ಲ. ಇತ್ತೀಚೆಗೆ ಅದೂ ಆರಂಭವಾಗಿದೆ.

ಪ್ರಾಚೀನಕಾಲದ ಬೇರೆ ಬೇರೆ ಬುಡಕಟ್ಟಿನವರ ವಿಚಾರವೂ ಅವರಲ್ಲಿ ಪರಸ್ಪರ ಇದ್ದ ವೈಮನಸ್ಯವೂ ಆಗಾಗ ನಡೆಯುತ್ತಿದ್ದ ಯುದ್ಧಗಳೂ ವೇದಗಳಲ್ಲೂ ಉಕ್ತವಾಗಿವೆ.[1] ಇತಿಹಾಸ ಶಬ್ದವೂ ವೇದಗಳಲ್ಲಿ 'ಚರಿತ್ರೆ' ಎಂಬ ಅರ್ಥದಲ್ಲೇ ಬಳಸಲ್ಪಟ್ಟಿದೆ. ಆದರಿಂದೀಚಿನ ಇತಿಹಾಸ ಪುರಾಣಗಳಲ್ಲೂ ವಂಶ, ವಂಶಾನುಚರಿತ ಮುಂತಾದುವೇ ಪ್ರಧಾನವಾಗಿ ವರ್ಣಿತವಾಗಿವೆ. ಆದರೆ ಇಂತಹ ವರ್ಣನೆಗಳಲ್ಲಿ ಅತಿಶಯೋಕ್ತಿ ಸೇರಿಕೊಂಡಿರುವುದರಿಂದ ಅದನ್ನು ಬೇರ್ಪಡಿಸಿ ವಾಸ್ತವಾಂಶಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳುವುದು ಕಷ್ಟಸಾಧ್ಯವೆಂಬುದು ನಿಜ.

ಬೌದ್ಧಸಾಹಿತ್ಯದಲ್ಲೂ ಒಂದು ರೀತಿಯ ಐತಿಹಾಸಿಕ ಮನೋಧರ್ಮ ಕಂಡುಬರುತ್ತದೆಂದು ಹೇಳಬಹುದು. ಕ್ರಿಸ್ತ ಶಕ ಐದನೆಯ ಶತಮಾನದ ಮಹಾನಾಮನ **ಮಹಾವಂಶ**ವು ಇಂತಹ ಕೃತಿಗಳಲ್ಲಿ ಪ್ರಮುಖವಾದುದು. ಜೈನ ತೀರ್ಥಂಕರರ ವಿವರಗಳನ್ನೊಳಗೊಂಡ **ಪಟ್ಟಾವಳಿ**ಗಳೂ ಇದೇ ರೀತಿಯವು. ಇವುಗಳೆಲ್ಲದರಲ್ಲೂ ಇತಿಹಾಸವೇ ಪ್ರಧಾನವಲ್ಲ. ಆದರೆ ಪ್ರಾಚೀನ ಶಾಸನಗಳು ಹಾಗಲ್ಲ. ನಮ್ಮ ದೇಶದ ಚರಿತ್ರೆಯನ್ನು ವಾಸ್ತವಿಕ ರೀತಿಯಲ್ಲಿ ರಚಿಸಲು ಈ ಶಾಸನಗಳು ತುಂಬ ಸಹಾಯಕಾರಿ. ಇವುಗಳಲ್ಲಿ ನಿರ್ದಿಷ್ಟ

1 ಅಧ್ಯಾಯ ೨ ರ ಆದಿ ಮತ್ತು ಪುಟ ೧೫ ನ್ನು ನೋಡಿ.

ಘಟನೆಗಳು ಸ್ಪಷ್ಟವಾಗಿ ಕಾವ್ಯಶೈಲಿಯಲ್ಲೇ ವಿವರಗೆಳೊಡನೆ ಉಲ್ಲಿಖಿತವಾಗಿವೆ. ರುದ್ರದಾಮನ ಕಾಲದ ಗಿರ್ನಾರ್ ಮತ್ತು ನಾಸಿಕ್ ಶಾಸನಗಳೂ ಗುಪ್ತರ ಕಾಲದ ವತ್ಸಭಟ್ಟಿ, ಹರಿಷೇಣ ಶಾಸನಗಳೂ ಗಣನೀಯವಾದ ಐತಿಹಾಸಿಕ ದಾಖಲೆಗಳು.

ಮೊದಲಿನಿಂದಲೂ ಸಂಸ್ಕೃತಕವಿಗಳಿಗೆ ರಾಜಾಶ್ರಯ ದೊರೆತಿದ್ದಿತೆಂಬುದು ಪ್ರಾಚೀನ ಶಾಸನಗಳಿಂದಲೇ ಸ್ಪಷ್ಟವಾಗಿದೆ. ತಮ್ಮ ಆಶ್ರಯದಾತರ ವಿಷಯ ವಾಗಿ ನಾಲ್ಕಾರು ಮಾತುಗಳನ್ನು ಪರ್ಯಾಯವಾಗಿಯಾದರೂ ಬರೆದಿಡುವ ಕವಿ ಸಂಪ್ರದಾಯವೂ ಆಗಿನಿಂದಲೇ ಪ್ರಾರಂಭವಾಗಿರಬೇಕು. ಕಾಲಿದಾಸನೂ ಕೂಡ ತನ್ನ ಆಶ್ರಯದಾತನಾದ ವಿಕ್ರಮಾದಿತ್ಯನನ್ನೇ ವಿಕ್ರಮೋರ್ವಶೀಯ ನಾಟಕದ 'ವಿಕ್ರಮ' ಪದದಿಂದ ಅಮರನನ್ನಾಗಿ ಮಾಡಿದ್ದಾನೆಂಬ ಅಭಿಪ್ರಾಯ ವಿದೆಯೆಂಬುದನ್ನು ಹಿಂದೆಯೇ (ಪುಟ ೫೧) ಹೇಳಿದ್ದೇವೆ. ವಿತಸ್ತಾ ನದಿಯ ಮೇಲೆ ನಾವೆಗಳ ಸೇತುವೆಯನ್ನು ಕಟ್ಟಿಸಿದ ರಾಜಾ ಪ್ರವರಸೇನನ ಹೆಸರು ಶಾಶ್ವತವಾಗಿರಬೇಕೆಂದೇ ಸೇತುಬಂಧಕಾವ್ಯ ರಚಿತವಾಯಿತು. ದಂಡಿಯು ಹೇಳಿರುವ ಮಹಾಕಾವ್ಯದ ಲಕ್ಷಣಗಳಲ್ಲಿ ಐತಿಹಾಸಿಕ ಘಟನೆಗಳ ಚಿತ್ರಣವೂ ಸೇರಿರುವುದನ್ನು ಗಮನಿಸಿದರೆ ದಂಡಿಗಿಂತ ಹಿಂದೆಯೇ ಐತಿಹಾಸಿಕ ಕಾವ್ಯಗಳ ರಚನೆ ಬಳಕೆಯಲ್ಲಿತ್ತೆಂಬುದು ವಿದಿತವಾಗುತ್ತದೆ.

### ಬಾಣನ **ಹರ್ಷಚರಿತ** (ಕ್ರಿ. ಶ. ೭ನೆಯ ಶತಮಾನ)

ಐತಿಹಾಸಿಕಕಾವ್ಯವೆನ್ನಿಸಿಕೊಳ್ಳಲು ಎಲ್ಲ ವಿಧವಾದ ಅರ್ಹತೆಯೂ ಇರುವ ಸಂಸ್ಕೃತಕಾವ್ಯಗಳಲ್ಲಿ ಬಾಣನ ಹರ್ಷಚರಿತವೇ ಅತ್ಯಂತ ಪ್ರಾಚೀನ. ಅದಕ್ಕಿಂತ ಹಿಂದಿನ ಐತಿಹಾಸಿಕ ಕಾವ್ಯಗಳು ಉಪಲಬ್ಧವಾಗಿಲ್ಲ. ಹರ್ಷ ಚರಿತವು ಒಂದು ಆಖ್ಯಾಯಿಕೆ. ಅದು ಏಳನೆಯ ಶತಮಾನದ ಬಾಣಭಟ್ಟ ನಿಂದ ರಚಿತವಾದುದು. ಹರ್ಷಚರಿತದಲ್ಲಿ ಕವಿಯು ತನ್ನ ಆಶ್ರಯದಾತನಾದ ಹರ್ಷನ ಜೀವನವನ್ನು ವಿವರಿಸುವುದಾಗಿ ಹೇಳಿಕೊಂಡಿದ್ದರೂ ಅದರಲ್ಲಿನ ವಾಸ್ತವಿಕ ಘಟನೆಗಳು ವರ್ಣನೆ ಮತ್ತು ಅತಿಶಯೋಕ್ತಿಗಳ ಮಧ್ಯೆ ಎಲ್ಲೋ ಅಡಗಿಹೋಗಿವೆ. ಅದರ ಪ್ರಾಸ್ತಾವಿಕ ಶ್ಲೋಕಗಳಿಂದ ಸಂಸ್ಕೃತ ಸಾಹಿತ್ಯದ ಚರಿತ್ರೆಗೆ ಸಂಬಂಧಿಸಿದ ತುಂಬ ಉಪಯುಕ್ತವಾದ ಅಂಶಗಳು ತಿಳಿದುಬರುತ್ತವೆ. ಅಲ್ಲಿ ವ್ಯಾಸ, ಭಟ್ಟಾರಹರಿಚಂದ್ರ, ಶಾತವಾಹನ, ಪ್ರವರಸೇನ, ಭಾಸ,



ಕಾಳಿದಾಸ ಮತ್ತು ಬೃಹತ್ಕಥೆಯ ಹಾಗೂ ವಾಸವದತ್ತದ ಕರ್ತೃಗಳ ಉಲ್ಲೇಖ ವಿದೆ. ಮೊದಲ ಎರಡೂವರೆ ಉಚ್ಛ್ವಾಸಗಳು ಬಾಣನ ಕಥೆಯನ್ನೇ ವಿಸ್ತಾರವಾಗಿ ತಿಳಿಸುತ್ತವೆ. ಇಷ್ಟೇ ಅಲ್ಲದೆ ತತ್ಕಾಲೀನ ಜನರ ಜೀವನ ಆಚಾರ ವ್ಯವಹಾರಗಳ ಮೇಲೂ ಹರ್ಷಚರಿತವು ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ.

ಹರ್ಷನನ್ನು ಸ್ತುತಿಸುವುದಕ್ಕಾಗಿಯೇ ಹರ್ಷಚರಿತ ರಚಿತವಾಗಿದ್ದರೂ ಕಥೆಯೊಡನೆ ವರ್ಣನೆ ಹೆಣೆದುಕೊಂಡಿದೆ. ಬಾಣನ ಕಥಾನಿರೂಪಣೆ ಸೊಗ ಸಾಗಿದ್ದರೂ ವರ್ಣನಾಭಾಗ ಅತಿಯಾಗಿದ್ದು ಎಂತಹವರಿಗೂ ಬೇಜಾರಾಗು ವಂತೆ ಮಾಡುತ್ತದೆ.

ಕಥಾ ಆಖ್ಯಾಯಿಕಾ ಎಂಬ ಎರಡು ಗದ್ಯಸಾಹಿತ್ಯ ಪ್ರಭೇದಗಳನ್ನು ಸುಪ್ರಸಿದ್ಧ ಆಲಂಕಾರಿಕರಾದ ಭಾಮಹಾಚಾರ್ಯರು ಮೊದಲು ನಿರೂಪಿಸಿದರು. ಅವರು ಹೇಳಿರುವಂತೆ ಆಖ್ಯಾಯಿಕೆಯಲ್ಲಿ ಕಥಾವಸ್ತು ವಾಸ್ತವವಾದುದು. ಅದು ಕವಿಯು ತಾನೇ ಹೇಳಿದಂತೆ ಇರಬೇಕು. ಅದರ ವಿಭಾಗಗಳಿಗೆ ಉಚ್ಛ್ವಾಸಗಳೆಂಬ ಹೆಸರಿದ್ದು ಅವುಗಳ ಆದಿ ಮತ್ತು ಅಂತ್ಯದಲ್ಲಿ ವಕ್ತ್ರ ಅಪರ ವಕ್ತ್ರ ಛಂದಸ್ಸಿನ ಶ್ಲೋಕಗಳಿಂದ ಮುಂದೆ ಬರುವ ಘಟನೆಗಳು ಸೂಚಿತವಾಗ ಬೇಕು. ಕಥೆಯ ವಸ್ತು ಕವಿಕಲ್ಪಿತ. ಅದನ್ನು ಹೇಳುವವನು ಕಥಾನಾಯಕ ನನ್ನು ಬಿಟ್ಟು ಬೇರಾರಾದರೂ ಆಗಿರಬೇಕು. ಅದರಲ್ಲಿ ಅಧ್ಯಾಯವೇ ಮುಂತಾದ ವಿಭಾಗಗಳಿರಕೂಡದು ಈ ಲಕ್ಷಣಗಳನ್ನು ಪರಿಶೀಲಿಸಿದರೆ ಕಥೆಗೂ ಆಖ್ಯಾಯಿಕೆಗೂ ಇರುವ ಭೇದ ತೀರ ಕಮ್ಮಿ ಎಂಬುದು ವ್ಯಕ್ತವಾಗುತ್ತದೆ. (ಆಲಂಕಾರಿಕನಾದ) ದಂಡಿಯು ಈ ಪ್ರಭೇದಗಳನ್ನು ತಿರಸ್ಕರಿಸಿಬಿಟ್ಟಿದ್ದಾನೆ.[2]

ಸಂಸ್ಕೃತ ಸಾಹಿತ್ಯದಲ್ಲಿ ಉಪಲಬ್ಧವಾಗಿರುವ ಆಖ್ಯಾಯಿಕೆಗಳಲ್ಲಿ ಹರ್ಷ ಚರಿತವೇ ಅತ್ಯಂತ ಪ್ರಾಚೀನ. ಅದರ ರಚನಾಕಾಲದಲ್ಲಿ ಸಮಾಸಬಾಹುಳ್ಯವೇ ಗದ್ಯದ ಜೀವಿತವೆಂಬ ಭಾವನೆಯಿತ್ತು. (ಓಜಃ ಸಮಾಸಭೂಯಸ್ತ್ವಂ ಏತತ್ ಗದ್ಯಸ್ಯ ಜೀವಿತಂ). ಹರ್ಷಚರಿತ ಸಮಸ್ತಪದಗಳಿಂದ ತುಂಬಿಹೋಗಿದೆ. ಅದರಲ್ಲಿ ಎಂಟು ಉಚ್ಛ್ವಾಸಗಳಿವೆ. ಮೊದಲ ಎರಡೂವರೆ ಉಚ್ಛ್ವಾಸಗಳಲ್ಲಿ ಬಾಣನು ದಧೀಚ ಮತ್ತು ಸರಸ್ವತಿಯರಿಂದ ತನ್ನ ವಂಶ ಆರಂಭವಾದುದನ್ನು ನಿರೂಪಿಸಿ ತನ್ನ ಪೂರ್ವಜರ ಸಾತ್ವಿಕತೆ ಪಾಂಡಿತ್ಯಗಳನ್ನು ಕೊಂಡಾಡಿದ್ದಾನೆ. ಬಾಣನು ತನ್ನ ತಾಯಿ ರಾಜ್ಯದೇವಿಯನ್ನು ಶೈಶವದಲ್ಲೇ ಕಳೆದುಕೊಂಡನಲ್ಲದೆ

2 ತತ್ ಕಥಾ+ಆಖ್ಯಾಯಿಕಾ+ಇತ್ಯೇಕಾ ಜಾತಿಃ ಸಂಜ್ಞಾದ್ವಯಾಂಕಿತಾ ।— ಕಾವ್ಯಾದರ್ಶ

ತನ್ನ ಹದಿನಾಲ್ಕನೆಯ ವಯಸ್ಸಿನಲ್ಲೇ ಪಿತೃಭಾಗ್ಯದಿಂದಲೂ ವಂಚಿತನಾದನು. ಬಳಿಕ ಸ್ನೇಹಿತರೊಂದಿಗೆ ದೇಶದೇಶಾಂತರಭ್ರಮಣ ಮಾಡಿ ಕೊನೆಗೆ ಶ್ರೀ ಹರ್ಷನ ಆಸ್ಥಾನದಲ್ಲಿ ಆಶ್ರಯಪಡೆದನು. ಈ ವಿವರಗಳನ್ನು ಬಾಣನೇ ಕೊಟ್ಟಿರುವುದರಿಂದ ಇದೊಂದು ಆತ್ಮಕಥೆಯೆಂದೇ ಹೇಳಬಹುದು. ಮೂರನೆಯ ಉಚ್ಛ್ವಾಸದ ಉತ್ತರಾರ್ಧದಿಂದ ಮುಂದಕ್ಕೆ ಹರ್ಷನ ಕಥೆ ನಿರೂಪಿತವಾಗಿದೆ. ಆದರೆ ಆ ಕಥೆಯ ಉಪಸಂಹಾರ ಸಹಜವಾಗಿಲ್ಲ; ಕಥೆಯೇ ಅಸಮಗ್ರವಾಗಿದೆ ಯೆಂದು ಹೇಳಿದರೂ ಹೇಳಬಹುದು.

ಐತಿಹಾಸಿಕ ಕಾವ್ಯಗಳಲ್ಲಿ ಹರ್ಷಚರಿತವೊಂದೇ ಗದ್ಯದಲ್ಲಿರುವುದು. ವೇಮಭೂಪಾಲಚರಿತವು ಎಲ್ಲ ರೀತಿಯಲ್ಲೂ ಹರ್ಷಚರಿತದ ಅನುಕರಣವೇ. ಹರ್ಷಚರಿತಕ್ಕೆ ಶಂಕರನೆಂಬ ಕವಿಯಿಂದ ರಚಿತವಾದ '**ಸಂಕೇತ**' ಎಂಬ ವ್ಯಾಖ್ಯಾನವಿದೆ.

ವಾಕ್ಪತಿಯ **ಗೌಡವಹೋ** [ಗೌಡವಧ] (ಕ್ರಿ.ಶ. ೮ನೆಯ ಶತಮಾನ)

ಗೌಡವಹೋ ( ಗೌಡವಧ ) ಮಹಾರಾಷ್ಟ್ರೀ ಪ್ರಾಕೃತದಲ್ಲಿ ರಚಿತವಾದ ಐತಿಹಾಸಿಕ ಪದ್ಯಕಾವ್ಯ. ಇದನ್ನು ಬರೆದ ವಾಕ್ಪತಿಯು ಕನೋಜಿನ ರಾಜಾ ಯಶೋವರ್ಮನ ಆಸ್ಥಾನಕವಿ. ಕವಿಯ ಆಶ್ರಯದಾತನಾದ ಯಶೋ ವರ್ಮನು ಗೌಡರಾಜನನ್ನು ಸೋಲಿಸಿ ಅವನನ್ನು ಸಂಹರಿಸಿದುದೇ ಕಾವ್ಯದ ವಸ್ತು. ಇದು ನಡೆದುದು ಕ್ರಿ.ಶ. ೭೪೦ರಲ್ಲಿ. ಗೌಡರಾಜನ ಸಂಹಾರದೊಂದಿಗೇ ಕಾವ್ಯವು ನಿಂತುಹೋಗಿರುವುದರಿಂದ ಅದು ಅದರ ಸ್ವಾಭಾವಿಕ ಉಪಸಂಹಾರ ವಾಗಿ ತೋರುವುದಿಲ್ಲ. ಪ್ರಾಕೃತಕಾವ್ಯವೇ ಆಗಿದ್ದರೂ ಗೌಡವಹೋದಲ್ಲಿ ಯಶೋವರ್ಮನ ಪರಾಕ್ರಮಾದಿಗಳ ವರ್ಣನೆ ಕಣ್ಣಿಗೆ ಕಟ್ಟಿದಂತೆ ಚಿತ್ರಿತ ವಾಗಿದೆ. ಆದರಲ್ಲಿ ಭಾರತದ ನಾನಾ ದೇಶಭಾಗಗಳ ವರ್ಣನೆಯಿದ್ದರೂ ರಘು ದಿಗ್ವಿಜಯದಲ್ಲಿ ಕಾಳಿದಾಸ ಬರೆದಿರುವ ಹಾಗೆ ವರ್ಣನೆಗಳು ಭೌಗೋಳಿಕ ಕ್ರಮದಲ್ಲಿಲ್ಲ; ಅಸ್ತವ್ಯಸ್ತವಾಗಿವೆ. ಅನೇಕ ದೇವಾಲಯಗಳ ವರ್ಣನೆಗಳಿದ್ದು ಕಾಳಿಕಾ ದೇವಾಲಯದ ಚಿತ್ರ ಹೃದಯಂಗಮವಾಗಿದೆ. ಈ ಕಾವ್ಯದಲ್ಲಿ ಒಟ್ಟು ೧೨೦೯ ಆರ್ಯಾವೃತ್ತದ ಶ್ಲೋಕಗಳಿವೆ. ಇವುಗಳು ಇತರ ಕಾವ್ಯಗಳಲ್ಲಿರುವಂತೆ ಸರ್ಗ ಅಥವಾ ಅಧ್ಯಾಯಗಳಾಗಿ ವಿಭಕ್ತವಾಗಿಲ್ಲ. ಇದರ ವಿಭಾಗಗಳಿಗೆ 'ಕುಲಕ' ಎಂಬ ಹೆಸರಿದೆ. ಇದಕ್ಕೆ ಜಾಲಂಧರೀಯಭಟ್ಟ ಶ್ರೀಮದುಪೇಂದ್ರ ಹರಿಪಾಲನು ರಚಿಸಿದ **ಗೌಡವಧಸಾರ** ಎಂಬ ವ್ಯಾಖ್ಯಾನವಿದೆ.



ಈ ಕಾವ್ಯದ ೮೦೦ನೆಯ ಶ್ಲೋಕದಲ್ಲಿ ಭಾಸನ ಹೆಸರು ಉಕ್ತವಾಗಿದೆ. ಕವಿಯು ತಾನು ಭವಭೂತಿಗೆ ಋಣಿಯಾಗಿರುವುದಾಗಿ ಹೇಳಿಕೊಂಡಿದ್ದಾನೆ. (೬೫ನೇ ಪುಟವನ್ನೂ ನೋಡಿ).

ಪದ್ಮಗುಪ್ತನ **ನವಸಾಹಸಾಂಕಚರಿತೆ** (ಕ್ರಿ.ಶ. ೧೧ನೆಯ ಶತಮಾನ)

ಸಂಸ್ಕೃತದಲ್ಲೇ ರಚಿತವಾಗಿರುವ ಐತಿಹಾಸಿಕ ( ಪದ್ಯ ) ಮಹಾಕಾವ್ಯ ಗಳಲ್ಲಿ ಪದ್ಮಗುಪ್ತನ ನವಸಾಹಸಾಂಕಚರಿತವೇ ಅತ್ಯಂತ ಪ್ರಾಚೀನವಾದುದು. ಪದ್ಮಗುಪ್ತನಿಗೆ **ಪರಿಮಳ** ಎಂಬ ಹೆಸರೂ ಇತ್ತು. ಈತನು ಮೃಗಾಂಕ ಗುಪ್ತನ ಮಗ; ಧಾರಾನಗರದ ವಾಕ್ಪತಿರಾಜ ಮತ್ತು ಸಿಂಧುರಾಜರ ಆಶ್ರಿತ ನಾಗಿದ್ದವನು. ಸಿಂಧುರಾಜನಿಗೆ **ನವಸಾಹಸಾಂಕ**ನೆಂಬ ಬಿರುದಿತ್ತು. ಇವನ ಆದೇಶದ ಮೇರೆಗೆ ಪದ್ಮಗುಪ್ತನು ಈ ನವಸಾಹಸಾಂಕಚರಿತ ಮಹಾಕಾವ್ಯ ವನ್ನು ೧೮ ಸರ್ಗಗಳಲ್ಲಿ ರಚಿಸಿದನು. ಇದರ ರಚನಾಕಾಲ ಸುಮಾರು ಕ್ರಿ.ಶ. ೧೦೦೫.

ತನ್ನ ಆಶ್ರಯದಾತನಾದ ಮಾಲವಾಧಿಪತಿ ಸಿಂಧುರಾಜ ನವ ಸಾಹಸಾಂಕನ ಚರಿತ್ರೆಯೆಂಬ ಹೆಸರಿನಿಂದ ಕವಿಯು ಈ ಕಾವ್ಯವನ್ನು ರಚಿಸಿದ್ದರೂ ಇದರ ಐತಿಹಾಸಿಕ ಮೌಲ್ಯ ತೀರ ಕಮ್ಮಿ. ರಾಜನು ಶಶಿಪ್ರಭೆ ಯೆಂಬ ರಾಜಕುಮಾರಿಯನ್ನು ಪಡೆದ ಪ್ರಕರಣವು ಕಟ್ಟುಕಥೆಯಂತೆ ಕಾಣುತ್ತದೆ.

ಪದ್ಮಗುಪ್ತನ ಅನೇಕ ಶ್ಲೋಕಗಳು ಸುಭಾಷಿತಾವಳೀ, ಶಾರ್ಙ್ಗಧರ ಪದ್ಧತಿ, ಸುವೃತ್ತತಿಲಕ, ಔಚಿತ್ಯವಿಚಾರಚರ್ಚಾ, ದಶರೂಪಕ ಮುಂತಾದ ಗ್ರಂಥಗಳಲ್ಲಿ ಉದಾಹೃತವಾಗಿವೆ. ಪದ್ಮಗುಪ್ತನಿಗೆ ಪರಿಮಳ ಕಾಳಿದಾಸನೆಂಬ ಹೆಸರಿದ್ದುದಾಗಿ ಕೆಲವು ವಿದ್ವಾಂಸರ ಅಭಿಪ್ರಾಯ.

ಬಿಲ್ಹಣನ **ವಿಕ್ರಮಾಂಕದೇವಚರಿತ** (ಕ್ರಿ.ಶ. ೧೧ನೆಯ ಶತಮಾನ)

[ ಇತರ ಕೃತಿಗಳು— ಚೋರಪಂಚಾಶಿಕಾ, ಕರ್ಣಸುಂದರೀನಾಟಿಕಾ, ರಾಮಚರಿತ ]

ವಿಕ್ರಮಾಂಕದೇವಚರಿತವು ೧೮ ಸರ್ಗಗಳ ಮಹಾಕಾವ್ಯ. ಕಲ್ಯಾಣ ದಲ್ಲಿ ಆಳಿದ ಚಾಳುಕ್ಯವಂಶೀಯ ಆರನೆಯ ವಿಕ್ರಮಾದಿತ್ಯ (ಕ್ರಿ.ಶ. ೧೦೭೬– ೧೧೨೭) ರಾಜನ ಆಶ್ರಿತನಾದ ಬಿಲ್ಹಣ ಕವಿಯು ನಾನಾ ಬಗೆಯಾಗಿ ತನಗೆ ಉಪಕಾರಮಾಡಿದ್ದ ರಾಜನಲ್ಲಿ ತನಗಿದ್ದ ಗೌರವ ಕೃತಜ್ಞತೆಗಳನ್ನು ಸೂಚಿಸಲು ಈ ಕಾವ್ಯವನ್ನು ರಚಿಸಿದನು. ಈ ರಾಜನ ವಂಶಕ್ಕೆ ಸಂಬಂಧಿಸಿದ ಅನೇಕ

ಉಪಯುಕ್ತ ವಿಷಯಗಳು ಈ ಕಾವ್ಯದಿಂದ ನಮಗೆ ತಿಳಿದುಬರುತ್ತವೆ. ಈ ರಾಜನು ೧೦೮೮ ರಲ್ಲಿ ದಕ್ಷಿಣದೇಶದಮೇಲೆ ನಡೆಸಿದ ದಂಡಯಾತ್ರೆಯ ವಿಚಾರವು ಈ ಕಾವ್ಯದಲ್ಲಿ ಉಕ್ತವಾಗಿಲ್ಲದಿರುವುದರಿಂದ ಇದರ ರಚನಾಕಾಲ ಕ್ರಿ.ಶ. ೧೦೮೮ ಕ್ಕಿಂತ ಹಿಂದಿನದಾಗಿರಬೇಕು.

ಬಿಲ್ಹಣನು ಕಾಶ್ಮೀರದ ಕವಿ. ಈ ಕಾವ್ಯದ ೧೮ ನೆಯ ಸರ್ಗದಲ್ಲಿ ಕವಿಯು ತನ್ನ ಜೀವನಚರಿತದ ವಿವರಗಳನ್ನು ಕೊಟ್ಟಿದ್ದಾನೆ. ಇವನ ಪೂರ್ವಜರು ಮಧ್ಯದೇಶದ ಬ್ರಾಹ್ಮಣರು. ಕಾಶ್ಮೀರದ ಗೋಪಾದಿತ್ಯರಾಜನಿಂದ ಆಹ್ವಾನಿತರಾಗಿ ಕಾಶ್ಮೀರಕ್ಕೆ ಬಂದು ಅಲ್ಲೇ ನೆಲಸಿದ ಸಂಸ್ಕೃತ ವಿದ್ವಾಂಸರು; ವೇದವೇದಾಂತವೇತ್ತರು. ಬಿಲ್ಹಣನ ಪ್ರಪಿತಾಮಹ ಮುಕ್ತಿಕಲಶ; ಪಿತಾಮಹ ರಾಜಕಲಶ; ತಂದೆ (ಮಹಾಭಾಷ್ಯ ವ್ಯಾಖ್ಯಾತೃವಾದ) ಜ್ಯೇಷ್ಠಕಲಶ; ತಾಯಿ ನಾಗದೇವಿ. ಇಷ್ಟರಾಯ ಮತ್ತು ಆನಂದ ಇಬ್ಬರೂ ಇವನ ಸೋದರರು. ಬಿಲ್ಹಣನು ಬಾಲ್ಯದಲ್ಲೇ ವಿದ್ಯಾಪಾರಂಗತನಾಗಿ ಸರಿಯಾದ ಆಶ್ರಯವೊಂದನ್ನು ಹುಡುಕುತ್ತಾ ಕಾಶ್ಮೀರದಿಂದ ಹೊರಟು ಮಥುರಾ, ಕನೌಜ, ಪ್ರಯಾಗ ಮುಂತಾದ ಅನೇಕಕಡೆ ಸಂಚರಿಸಿ ಕೊನೆಗೆ ದಕ್ಷಿಣಭಾರತದ ಕಲ್ಯಾಣನಗರದಲ್ಲಿ ಚಾಲುಕ್ಯವಂಶದ ಪ್ರಖ್ಯಾತನಾದ ಆರನೆಯ ವಿಕ್ರಮಾದಿತ್ಯ ರಾಜನ ಆಸ್ಥಾನವನ್ನು ಸೇರಿದನು. (ಆ ವೇಳೆಗೆ ಧಾರಾನಗರದ ಭೋಜರಾಜನ ದೇಹಾಂತವಾಗಿ ಹೋಗಿತ್ತು). ಗುಣಗ್ರಾಹಿಯಾದ ವಿಕ್ರಮಾದಿತ್ಯನು ಬಿಲ್ಹಣನಿಗೆ 'ವಿದ್ಯಾಪತಿ' ಎಂಬ ಬಿರುದನ್ನೂ ತನ್ನ ಆಸ್ಥಾನದಲ್ಲೇ ಆಶ್ರಯವನ್ನೂ ಕೊಟ್ಟು ಸತ್ಕರಿಸಿದನು.

ಈ ಕಾವ್ಯದಲ್ಲಿ ಕಥೆಯನ್ನು ನಿರೂಪಿಸಿರುವ ರೀತಿ ಸ್ವಾರಸ್ಯದಿಂದ ಕೂಡಿದೆ. ವರ್ಣನೆಗಳು ಕಣ್ಣಿಗೆ ಕಟ್ಟಿದಂತಿವೆ. ಆದರೆ ಐತಿಹಾಸಿಕ ಘಟನೆಗಳೂ ಪ್ರಾಮಾಣಿಕ ವಿವರಗಳೂ ಕಮ್ಮಿ. ಕಾವ್ಯಶೈಲಿಯಲ್ಲಿ ರಚಿತವಾಗಿರುವುದರಿಂದ ಇದರಲ್ಲಿ ಉತ್ಪ್ರೇಕ್ಷೆಯೂ, ಅಸಹಜವಾದ ಘಟನೆಗಳೂ ಹೆಚ್ಚು.

ವಿಕ್ರಮಾಂಕದೇವ ಚರಿತವು ಚಾಳುಕ್ಯವಂಶದ ವಿವರಗಳಿಂದ ಪ್ರಾರಂಭನಾಗಿ ಆರನೆಯ ವಿಕ್ರಮಾದಿತ್ಯನು ಸಿಂಹಾಸನಾಧೀಶನಾದ ಬಗೆಯನ್ನು ವಿವರಿಸುತ್ತದೆ. ಏಳನೆಯ ಸರ್ಗದಿಂದ ಮುಂದಕ್ಕೆ ಆರು ಸರ್ಗಗಳಲ್ಲಿ ಶಿಲ್ಹಾರ ರಾಜಕುಮಾರಿಯಾದ ಚಂದ್ರಲೇಖೆಯ ಸ್ವಯಂವರವರ್ಣನೆ, ಅವಳೊಡನೆ ವಿಕ್ರಮಾದಿತ್ಯನ ವಿವಾಹ, ನವೋಢ ದಂಪತಿಗಳ ಸುಖಭೋಗಾದಿಗಳು ವಿವರಿಸಲ್ಪಟ್ಟಿವೆ. ಕೊನೆಯ ಸರ್ಗದಲ್ಲಿ ಕವಿಯ ವಿಚಾರವೇ ವಿಶೇಷವಾಗಿ ಉಕ್ತ



ವಾಗಿದೆಯೆಂದು ಈಗಾಗಲೇ ಹೇಳಿದ್ದೇವೆ. ಕಾವ್ಯದೃಷ್ಟಿಯಿಂದ ಬಿಲ್ಹಣನದು ವೈದರ್ಭೀ ರೀತಿ.

ಬಿಲ್ಹಣನ ಜತೆಯಲ್ಲೇ ವಿಕ್ರಮಾಂಕನ ಆಸ್ಥಾನಪಂಡಿತನಾಗಿದ್ದ ವಿಜ್ಞಾನೇಶ್ವರನೇ ಯಾಜ್ಞವಲ್ಕ್ಯಸ್ಮೃತಿಗೆ ಮಿತಾಕ್ಷರಟೀಕೆ ಬರೆದಿರುವವನು. ಬಿಲ್ಹಣನು ಚೋರಪಂಚಾಶಿಕಾ ಎಂಬ ಭಾವಗೀತಾತ್ಮಕ ಲಘುಕಾವ್ಯವನ್ನೂ ಕರ್ಣಸುಂದರೀ ಎಂಬ ನಾಟಿಕೆಯನ್ನೂ ರಚಿಸಿದ್ದಾನೆ. ರಾಮಚರಿತವೆಂಬ ಕಾವ್ಯವನ್ನೂ ಬರೆದಿರುವುದಾಗಿ ಕೆಲವು ವಿದ್ವಾಂಸರು ವಿಕ್ರಮಾಂಕದೇವಚರಿತದ ೧೮ನೆಯ ಸರ್ಗದ ಏಳನೆಯ ಶ್ಲೋಕದ ಆಧಾರದ ಮೇಲೆ ಊಹಿಸುತ್ತಾರೆ.

## ಕಲ್ಹಣನ **ರಾಜತರಂಗಿಣೀ** (ಕ್ರಿ.ಶ. ೧೨ನೆಯ ಶತಮಾನ)

ರಾಜತರಂಗಿಣಿಯು ಕಾಶ್ಮೀರದ ರಾಜರ ಸುವಿಸ್ತಾರವಾದ ಇತಿಹಾಸವನ್ನು ವಿವರಿಸುವ ಮಹಾಕಾವ್ಯವೆಂದು ಸುಪ್ರಸಿದ್ಧವಾಗಿದೆ. ಇತಿಹಾಸರಚನೆಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ಸಂಸ್ಕೃತದಲ್ಲಿ ಐತಿಹಾಸಿಕ ಮಹಾಕಾವ್ಯ ಬರೆದಿರುವವನು ಕಾಶ್ಮೀರದ ಕಲ್ಹಣಕವಿಯೊಬ್ಬನೇ ಎಂದು ಹೇಳಿದರೂ ತಪ್ಪಾಗದು. ಇತಿಹಾಸ ಬರೆಯುವವನಲ್ಲಿ ಅಗತ್ಯವಾಗಿರಬೇಕಾದುದು ನಿಷ್ಪಾಕ್ಷಿಕ ಮನೋಭಾವ. ಕಲ್ಹಣನೇ ಶ್ಲಾಘ್ಯ ಇತಿಹಾಸಕಾರನ ಲಕ್ಷಣವನ್ನು ತನ್ನ ರಾಜತರಂಗಿಣಿಯ ೧-೭ರಲ್ಲಿ ಹೀಗೆ ಹೇಳಿದ್ದಾನೆ.—

ಶ್ಲಾಘ್ಯಃ ಸ ಏವ ಗುಣವಾನ್ ರಾಗದ್ವೇಷಬಹಿಷ್ಕೃತಃ ।
ಭೂತಾರ್ಥಕಥನೇ ಯಸ್ಯ ಸ್ಥೇಯಸ್ಯೇವ ಸರಸ್ವತೀ ॥

ರಾಜತರಂಗಿಣಿಯಲ್ಲಿ ಕಲ್ಹಣನು ಕಾಶ್ಮೀರದ ಇತಿಹಾಸವನ್ನು ಅಶೋಕನ ಕಾಲದಿಂದ ಆರಂಭಿಸಿ ಬರೆದಿದ್ದಾನೆ. ಇದರ ಆದಿಭಾಗವನ್ನು ಪರಿಶೀಲಿಸಿದರೆ ಇದು ನೀಲಮತಪುರಾಣದ ಆಧಾರದಮೇಲೆ ರಚಿತವಾಗಿದೆಯೆನ್ನಬಹುದು. ಕಲ್ಹಣನು ಕ್ಷೇಮೇಂದ್ರವಿರಚಿತ ರಾಜಾವಳೀ (ನೃಪಾವಳೀ) ಎಂಬ ಐತಿಹಾಸಿಕ ಕಾವ್ಯವನ್ನು [3]ಅವಧಾನವಿಲ್ಲದೆ ಬರೆದುದೆಂದು ತಿರಸ್ಕರಿಸಿದ್ದಾನೆ. ತನ್ನ ಇತಿಹಾಸಕ್ಕೆ ೧೧ ಪ್ರಾಚೀನ 'ರಾಜಕಥೆ'ಗಳೂ ನೀಲಮತಪುರಾಣವೂ ಆಧಾರವೆಂದೂ ಘಟನಾವಳಿಗಳ ಕಾಲವನ್ನು ಶಾಸನಾದಿಗಳೊಡನೆ ಹೋಲಿಸಿ ನೋಡಿರುವುದಾಗಿಯೂ ಕಲ್ಹಣನೇ ಹೇಳಿಕೊಂಡಿದ್ದಾನೆ.

---

[3] ಕೇನಾಪ್ಯನವಧಾನೇನ ಕವಿಕರ್ಮಣಿ ಸತ್ಯಪಿ ।
ಅಂಶೋಽಪಿ ನಾಸ್ತಿ ನಿರ್ದೋಷಃ ಕ್ಷೇಮೇಂದ್ರಸ್ಯ ನೃಪಾವಲೌ ॥ —೧-೧೩

ರಾಜತರಂಗಿಣಿಯನ್ನು ಕ್ರಿ.ಶ. ೧೧೪೮-೧೧೫೦ರಲ್ಲಿ ಕಲ್ಹಣನು ರಚಿಸಿದನು. ಇದರಲ್ಲಿ ಎಂಟು ತರಂಗಗಳಿವೆ. ಕೊನೆಯ ತರಂಗದಲ್ಲಿ ಆಗ ಕಾಶ್ಮೀರದಲ್ಲಿ ಆಳುತ್ತಿದ್ದ ಜಯಸಿಂಹರಾಜನ ವಿಚಾರವಿದೆ. ಈ ಕಾವ್ಯದಲ್ಲಿ ಮಧ್ಯೆ ಮಧ್ಯೆ ಅನ್ಯದೇಶಗಳ ರಾಜರ ಮತ್ತು ಕವಿಗಳ ವಿಚಾರಗಳೂ ವರ್ಣಿತವಾಗಿವೆ. ಜಯಸಿಂಹನಿಂದ ಮುಂದಿನ ಇತಿಹಾಸವನ್ನು ತನ್ನ ಕಾಲದ ಅಂದರೆ ೧೪೬೭ರ ವರೆಗೆ ಜೋನರಾಜನೂ, ೧೪೮೬ರ ವರೆಗೆ ಜೋನರಾಜನ ಶಿಷ್ಯನಾದ ಶ್ರೀವರನೂ ಬರೆದಿದ್ದಾರೆ.

ಕಲ್ಹಣನೇ ಹೇಳಿಕೊಂಡಿರುವಂತೆ ಆತನ ತಂದೆ ಚಂಪಕನು ಕಾಶ್ಮೀರದ ರಾಜಾ ಹರ್ಷನ (ಕ್ರಿ.ಶ. ೧೦೮೯-೧೧೦೧) ಅಮಾತ್ಯನಾಗಿದ್ದನು. ಹರ್ಷನ ಬಳಿಕ ಜಯಸಿಂಹನು ರಾಜನಾಗಿ ೧೧೨೭ರಿಂದ ೧೧೫೯ರ ವರೆಗೆ ಆಳುತ್ತಿದ್ದನು. ಕಲ್ಹಣನಿಗೆ ರಾಜಾಶ್ರಯ ದೊರೆತಿದ್ದಂತೆ ಕಾಣುವುದಿಲ್ಲ. ಕಲ್ಹಣನು ಶೈವ. ಅವನು ರಚಿಸಿರುವ ಅರ್ಧನಾರೀಶ್ವರ ಸ್ತೋತ್ರವು ತುಂಬ ಸುಂದರವಾಗಿದೆ.

## ಇತರ ಐತಿಹಾಸಿಕ ಕಾವ್ಯಗಳು

೧. **ದ್ವ್ಯಾಶ್ರಯಕಾವ್ಯ** ಅಥವಾ **ಕುಮಾರಪಾಲಚರಿತವು** ಜೈನ ಕವಿ ಹೇಮಚಂದ್ರನಿಂದ (೧೦೮೮-೧೧೭೨) ರಚಿತವಾದ ಮಹಾಕಾವ್ಯ. ಇದರಲ್ಲಿ ೨೦ ಸರ್ಗಗಳು ಸಂಸ್ಕೃತದಲ್ಲೂ ೮ ಸರ್ಗಗಳು ಪ್ರಾಕೃತದಲ್ಲೂ ಇವೆ. ಗುಜರಾತಿನ ರಾಜಾ ಕುಮಾರಪಾಲನ ಮತ್ತು ಅವನ ಪೂರ್ವಜರ ಇತಿಹಾಸವೇ ಕಾವ್ಯದ ವಸ್ತುವಾಗಿದ್ದರೂ ಭಟ್ಟಿಕಾವ್ಯದ ರೀತಿಯಲ್ಲಿ ವ್ಯಾಕರಣ ಪ್ರಕ್ರಿಯೆಗಳನ್ನು ನಿರೂಪಿಸುವುದರಲ್ಲೇ ಕವಿಯು ತನ್ನ ದೃಷ್ಟಿಯನ್ನು ಕ್ರೋಡೀಕರಿಸಿರುವುದರಿಂದ ಈ ಕಾವ್ಯದಲ್ಲಿ ಕಾವ್ಯ ಸೌಂದರ್ಯವಾಗಲಿ ಐತಿಹಾಸಿಕ ಘಟನೆಗಳ ನಿರೂಪಣೆಯಾಗಲಿ ಇಲ್ಲವೇ ಇಲ್ಲ. ಈ ಕವಿಗೆ ಕುಮಾರಪಾಲನು ಆಶ್ರಯವಿತ್ತಿದ್ದನು.

೨. **ಸೋಮಪಾಲವಿಲಾಸವು** ಕಾಶ್ಮೀರದ ಬಳಿಯಿರುವ ರಾಜಪುರಿಯ ರಾಜನಾದ ಸೋಮಪಾಲನನ್ನು ಕುರಿತು ಜಲ್ಹಣನು ಬರೆದ ಕಾವ್ಯ. ಇದರ ರಚನಾಕಾಲ ಕ್ರಿ.ಶ. ೧೧೫೦.

೩. **ಪೃಥ್ವೀರಾಜವಿಜಯವು** ಸುಲ್ತಾನ್ ಶಿಹಾಬುದ್ದೀನ್ ಘೋರಿಯ ಮೇಲೆ ಪೃಥ್ವೀರಾಜನು ೧೧೯೧ರಲ್ಲಿ ಸಾಧಿಸಿದ ವಿಜಯವನ್ನು ವಿವರಿಸಿರುವ ಮಹಾಕಾವ್ಯ. ಇದು ಅಜ್ಮೀರದ ಪೃಥ್ವೀರಾಜನ ಸಮಕಾಲೀನನಾದ ಚಂದ್ರಕವಿ ಬರೆದುದು. ಈ ಕಾವ್ಯವು ಈಗ ಅಸಮಗ್ರವಾದ ಸ್ಥಿತಿಯಲ್ಲಿ ಉಪಲಬ್ಧವಾಗಿದೆ. ಇದರಲ್ಲಿ ಭಾಸಕವಿಯ ಹೆಸರು ಉಕ್ತವಾಗಿದೆ. ಕಾಶ್ಮೀರದ ಜೋನರಾಜನು (ಕ್ರಿ.ಶ. ೧೪೪೮) ಇದಕ್ಕೆ ಟೀಕೆಯನ್ನು ಬರೆದಿದ್ದಾನೆ.



೪. **ಹಮ್ಮೀರ ಮಹಾಕಾವ್ಯವು** ನಯಚಂದ್ರನಿಂದ ರಚಿತವಾದುದು. ಇದರಲ್ಲಿ ೧೪ ಸರ್ಗಗಳಿವೆ. ಚೌಹಾನ ರಾಜಾ ಹಮ್ಮೀರನು ಅಲ್ಲಾಉದ್ದೀನನ ಮೇಲೆ ವೀರಾವೇಶದಿಂದ ಯುದ್ಧಮಾಡಿ ಮಡಿದ ಕಥೆಯೇ ಕಾವ್ಯದ ವಸ್ತು. ಇದು ಕ್ರಿ.ಶ. ೧೩೧೦ರಲ್ಲಿ ರಚಿತವಾಯಿತೆಂದು ಹೇಳುತ್ತಾರೆ.

೫. **ಮಧುರಾವಿಜಯ** ಅಥವಾ ವೀರಕಂಪರಾಯಚರಿತವು ಅಸಮಗ್ರ ಸ್ಥಿತಿಯಲ್ಲಿ ಈಗ ಉಪಲಬ್ಧವಾಗಿದೆ. ವಿಜಯನಗರದ ಒಂದನೆಯ ಬುಕ್ಕರಾಯನ ಎರಡನೆಯ ಮಗ ಕಂಪಣನ ಮಡದಿಯೂ ಕವಯಿತ್ರಿಯೂ ಆಗಿದ್ದ ಗಂಗಾದೇವಿಯು ಈ ಕಾವ್ಯವನ್ನು ರಚಿಸಿದವಳು. ಈಕೆ ೧೪ನೆಯ ಶತಮಾನದವಳು. ಕಂಪಣನು ಮಧುರೆಯನ್ನು ಜಯಸಿದ ಪ್ರಕರಣವೇ ಕಾವ್ಯದ ವಸ್ತು. ಈ ಕಾವ್ಯವು ಸುಂದರವೂ ಲಲಿತವೂ ಆದ ಶೈಲಿಯಲ್ಲಿ ರಚಿತವಾಗಿದೆ.

೬. **ವೇಮಭೂಪಾಲಚರಿತ** ಅಥವಾ **ವೀರನಾರಾಯಣಚರಿತವು** ಗದ್ಯದಲ್ಲಿದೆ. ಇದು ೧೪೦೩ ರಿಂದ ೧೪೨೦ರ ವರೆಗೆ ಅಡ್ಡಂಕಿಯಲ್ಲಿ ಆಳಿದ ರೆಡ್ಡಿ ದೊರೆ ವೇಮಭೂಪಾಲ (ವೀರನಾರಾಯಣ)ನ ಸಾಹಸಗಳನ್ನು ಹೊಗಳಿ ಬರೆದ ಕಾವ್ಯ. ಇದನ್ನು ಬರೆದ ಕವಿ ಇದೇ ರಾಜನ ಆಶ್ರಿತನಾಗಿದ್ದ ವಾಮನ ಭಟ್ಟ ಬಾಣ. (ಪುಟ ೭೮ ನೋಡಿ.) ಈ ಗದ್ಯಕಾವ್ಯದಲ್ಲಿ ೪ ಉಚ್ಛ್ವಾಸಗಳಿವೆ.

೭. **ವರದಾಂಬಿಕಾಪರಿಣಯವು** ಚಂಪೂಕಾವ್ಯ. ಇದನ್ನು ರಾಜಾ ಅಚ್ಯುತರಾಯನ ಮಡದಿಯೂ ಸ್ವಯಂ ಕವಯಿತ್ರಿಯೂ ಆಗಿದ್ದ ತಿರುಮಲಾಂಬೆಯು ರಚಿಸಿ ಅದರಲ್ಲಿ ತನ್ನ ಪತಿಯು ವರದಾಂಬಿಕೆಯೆಂಬ ರಾಜಕುಮಾರಿಯನ್ನು ವಿವಾಹವಾದ ಪ್ರಕರಣವನ್ನು ವಿವರಿಸಿದ್ದಾಳೆ.

೮. **ರಘುನಾಥಾಭ್ಯುದಯವು** ೧೨ ಸರ್ಗಗಳ ಮಹಾಕಾವ್ಯ. ರಾಜಾ ರಘುನಾಥನ ಚರಿತ್ರೆಯನ್ನು ಅವನ ಮಡದಿಯೂ ಕವಯಿತ್ರಿಯೂ ಆದ ರಾಮಭದ್ರಾಂಬೆಯು ಈ ಕಾವ್ಯದಲ್ಲಿ ತುಂಬ ಹೃದಯಂಗಮವಾಗಿ ಚಿತ್ರಿಸಿದ್ದಾಳೆ.

# ಅಧ್ಯಾಯ ೫

## ಗದ್ಯಕಾವ್ಯ

ಉತ್ತಮ ಸಾಹಿತ್ಯವು ಮಾತ್ರ ಚಿರಂತನವಾಗಿ ಜನಪ್ರಿಯವಾಗಿ ಉಳಿಯ ಬಲ್ಲದು. ಕಾಲ ದೇಶ ಜನ ಪ್ರಯುಕ್ತವಾದ ಕಾರಣಗಳಿಂದ ರಚಿತವಾದ ಸಾಹಿತ್ಯ ಕೆಲಕಾಲ ಮಾತ್ರ ಪ್ರಸಿದ್ಧವಾಗಿದ್ದು ಕಾಲಾಂತರದಲ್ಲಿ ಕಣ್ಮರೆಯಾಗಿ ಬಿಡುತ್ತದೆ. ಅಂತೆಯೇ ಅನೇಕ ಪ್ರಾಚೀನ ಕವಿಗಳ ಕೃತಿಗಳೆಲ್ಲ ಲುಪ್ತವಾಗಿ ವಾಲ್ಮೀಕಿ, ಕಾಳಿದಾಸ ಮುಂತಾದವರ ಮಹಾಕಾವ್ಯಗಳು ಮಾತ್ರ ನಮಗೆ ಈಗ ಉಪಲಬ್ಧವಾಗಿವೆಯಲ್ಲದೆ ಈಗಲೂ ಪಂಡಿತ ಪಾಮರಪ್ರಿಯವಾಗಿವೆ. ಇದೇ ಮಾತು ಗದ್ಯಕಾವ್ಯಗಳಿಗೂ ಅನ್ವಯಿಸುತ್ತದೆ. ದಂಡಿ, ಸುಬಂಧು, ಬಾಣ ಇವರ ಕೃತಿಗಳೇ ಸುಬದ್ಧ ಗದ್ಯಕಾವ್ಯಗಳು. ಆದರೆ ಸಂಸ್ಕೃತ ಗದ್ಯ ಸಾಹಿತ್ಯದ ಇತಿಹಾಸದಲ್ಲಿ ಈ ಕೃತಿಗಳು ಮಧ್ಯಘಟ್ಟಕ್ಕೆ ಸೇರಿದುವು. ಇವುಗಳ ಕಾವ್ಯಗುಣಗಳೂ ಮೇಲ್ಮಟ್ಟವೂ ಹಿಂದಿನ ಸಾಮಾನ್ಯ ಕೃತಿಗಳೆಲ್ಲ ಲುಪ್ತವಾಗಲು ಕಾರಣವಾಗಿರಬೇಕು.

ಅತ್ಯಂತ ಪ್ರಾಚೀನ ಗದ್ಯ ರಚನೆಯ ಮಾದರಿಯನ್ನು ನಾವು ಕೃಷ್ಣ ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ ಕಾಣಬಹುದು. ಈ ಸಂಹಿತೆಯ ಗದ್ಯಭಾಗವು ಪದ್ಯಭಾಗಕ್ಕಿಂತ ಗಾತ್ರದಲ್ಲಿ ಕಮ್ಮಿಯಾಗಿಲ್ಲ. ಇದೇ ವೇದದ ಕಾಠಕ, ಮೈತ್ರಾಯಿಣೀ ಮುಂತಾದ ಸಂಹಿತೆಗಳಲ್ಲೂ ಗದ್ಯ ಇದೇ ಪ್ರಕಾರವಾಗಿದೆ. ಅಥರ್ವಣ ವೇದದಲ್ಲಿ ಆರನೆಯ ಒಂದು ಭಾಗ ಗದ್ಯರೂಪದಲ್ಲಿದೆ. ಬ್ರಾಹ್ಮಣಗಳೆಲ್ಲಾ ಗದ್ಯಾತ್ಮಕವಾಗಿಯೇ ಇವೆ. ಆರಣ್ಯಕಗಳಲ್ಲೂ ಗದ್ಯವೇ ಹೆಚ್ಚು. ಪ್ರಾಚೀನ ಉಪನಿಷತ್ತುಗಳೂ ಪ್ರಾಯಃ ಗದ್ಯದಲ್ಲಿಯೇ ರಚಿತವಾಗಿವೆ. ಹೀಗೆ ವೇದದಲ್ಲಿ ಗದ್ಯಪ್ರಯೋಗ ವ್ಯಾಪಕವಾಗಿಯೇ ಇರುವುದು ಗಮನಾರ್ಹ.

ಸೂತ್ರಗ್ರಂಥಗಳಲ್ಲಿ ಬೇರೊಂದು ವಿಧವಾದ ಗದ್ಯವನ್ನು ಕಾಣುತ್ತೇವೆ. ಈಗ ಉಪಲಬ್ಧವಾಗಿರುವ ಸೂತ್ರಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು ಯಾಸ್ಕರ ನಿರುಕ್ತ. ಈ ನಿರುಕ್ತದಲ್ಲಿ ಬ್ರಾಹ್ಮಣಗಳ ಗದ್ಯಗಳಲ್ಲಿರುವ ಎಲ್ಲ ಗದ್ಯ ಗುಣಗಳೂ ಇವೆ. ಗದ್ಯಾತ್ಮಕ ಕೃತಿಗಳ ರಚನೆ ಹೀಗೆಯೇ ಬೆಳೆಯುತ್ತ ಹೋಗಿದ್ದರೆ ಚೆನ್ನಾಗಿತ್ತು. ಆದರೆ ಕಾಲಕ್ರಮದಲ್ಲಿ ಭಾರತೀಯ ವಿದ್ವಾಂಸರು



ಅಭ್ಯಸಿಸುತ್ತಿದ್ದ ಶಾಸ್ತ್ರಾದಿಗಳು ಸಂಖ್ಯೆಯಲ್ಲಿ ಹೆಚ್ಚಿ ಎಲ್ಲವನ್ನೂ ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಬಹುದಾದಷ್ಟು ತೀರ ಸಂಗ್ರಹವಾದ ರೂಪದಲ್ಲಿ ವಿಷಯಗಳನ್ನು ಬರೆದಿಡಬೇಕಾಗಿ ಬಂದು ಅತಿ ನೂತನವೂ ಪರಿಣಾಮಕಾರಿಯೂ ಆದ ಸೂತ್ರರಚನೆಯು ಬಳಕೆಗೆ ತರಲ್ಪಟ್ಟಿತು. ಈ ಸೂತ್ರಗಳು ಗದ್ಯದಲ್ಲೇ ರಚಿತವಾಗುತ್ತಿದ್ದುವಾದರೂ, ಗದ್ಯಗ್ರಂಥಗಳ ರಚನೆಗೆ ಈ ಹೊಸ ಶೈಲಿ ಸಹಾಯಕವಾಗಲಿಲ್ಲ; ವಿಘಾತವುಂಟುಮಾಡಿತೆಂದೇ ಹೇಳಬೇಕು. ಆದರೆ ಈ ಗದ್ಯಾತ್ಮಕ ಸೂತ್ರ ಶೈಲಿಯಲ್ಲೂ ಕೆಲವು ಉಪಯುಕ್ತವಾದ ಸೊಗಸಾದ ಪತಂಜಲಿಯ ಮಹಾಭಾಷ್ಯಾದಿ ಗ್ರಂಥಗಳು ರಚಿತವಾದುವು. ಅಲ್ಲಿಂದೀಚೆಗೆ ವೇದಾಂತ ಸೂತ್ರಗಳಿಗೆ ಶಂಕರ – ರಾಮಾನುಜ – ಮಧ್ವಾದಿಗಳಿಂದ ರಚಿತವಾಗಿರುವ ಭಾಷ್ಯಗಳೂ, ಪ್ರಾಯಃ ಎಲ್ಲ ವ್ಯಾಖ್ಯಾನಸಾಹಿತ್ಯವೂ ಗದ್ಯದಲ್ಲೇ ಇದ್ದು, ಪದ್ಯಕ್ಕಿಂತ ಗದ್ಯವೇ ಸುಲಭ, ಸ್ಪಷ್ಟನಾಗಿ ಅರ್ಥವಾಗತಕ್ಕದ್ದು, ಎಂಬ ಮನೋಭಾವವುಂಟಾಗಲವಕಾಶವಾಗಿದೆ.

ಕಾವ್ಯದೃಷ್ಟಿಯಿಂದಲೂ ಗದ್ಯಕೃತಿಗಳು ಪತಂಜಲಿಯ (ಕ್ರಿ.ಪೂ. ೨ನೆಯ ಶತಮಾನ) ಕಾಲಕ್ಕೆ ಹಿಂದೆಯೇ ಇದ್ದುವೆಂಬುದು ಪತಂಜಲಿಯ ಮಹಾಭಾಷ್ಯದಲ್ಲೇ ಬರುವ ವಾಸವದತ್ತಾ, ಸುಮನೋತ್ತರ, ಭೈಮರಥೀ ಎಂಬ ಆಖ್ಯಾಯಿಕೆಗಳ ಉಲ್ಲೇಖದಿಂದ ಸ್ಪಷ್ಟವಾಗುತ್ತದೆ. ಬಾಣನೂ ತನ್ನ ಹರ್ಷ ಚರಿತದಲ್ಲಿ ಭಟ್ಟಾರಹರಿಚಂದ್ರನನ್ನು ಉತ್ತಮ ಗದ್ಯಕಾವ್ಯ ರಚಿಸಿದವನೆಂದು ನಿರ್ದೇಶಿಸಿದ್ದಾನೆ. ಇದನ್ನೆಲ್ಲಾ ಪರಿಶೀಲಿಸಿದರೆ ಪದ್ಯಕಾವ್ಯದಂತೆಯೇ ಗದ್ಯಕಾವ್ಯವೂ ಅವಿಚ್ಛಿನ್ನವಾಗಿ ಬಹಳ ಹಿಂದಿನಿಂದಲೂ ರಚಿತವಾಗುತ್ತಿತ್ತೆಂದು ಧಾರಾಳವಾಗಿ ಹೇಳಬಹುದು.

ಈಗ ಉಪಲಬ್ಧವಾಗಿರುವ ಸಂಸ್ಕೃತ ಗದ್ಯಸಾಹಿತ್ಯದಲ್ಲಿ ನಾಲ್ಕು ಬಗೆಯ ಕೃತಿಗಳನ್ನು ಆಧುನಿಕ ದೃಷ್ಟಿಯಿಂದ ಗುರುತಿಸಬಹುದು—(೧) ಕಥೆ (೨) ಆಖ್ಯಾಯಿಕೆ (೩) ಜನಪ್ರಿಯ ಕಥೆ (೪) ನೀತಿಬೋಧಕ ಕಥೆ. ಸಾಂಪ್ರದಾಯಿಕವಾಗಿ ಕಥೆ, ಆಖ್ಯಾಯಿಕೆ—ಎಂಬ ಈ [1]ಎರಡೇ ವಿಭಾಗಗಳನ್ನು ಕೆಲ

[1] ಅಗ್ನಿಪುರಾಣದಲ್ಲಿ ಐದು ವಿಭಾಗಗಳು ಉಕ್ತವಾಗಿವೆ. — ೧ ಆಖ್ಯಾಯಿಕಾ ೨ ಕಥಾ ೩ ಖಂಡಕಥಾ ೪ ಪರಿಕಥಾ ೫ ಕಥಾನಿಕಾ. ಅಲಂಕಾರ ಸಂಗ್ರಹದಲ್ಲಿ 'ಕಥಾ ಕಲ್ಪಿತವೃತ್ತಾಂತಾ ಸತ್ಯಾರ್ಥಾ ಆಖ್ಯಾಯಿಕಾ ಮತಾ' ಎಂದು ಹೇಳಿದೆ. ಇತರ ವಿವರಗಳಿಗೆ ಪುಟ ೮೩ ನೋಡಿ.

ಆಲಂಕಾರಿಕರು ಅಂಗೀಕರಿಸಿದ್ದರೂ ಗದ್ಯಕಾವ್ಯದಲ್ಲಿ ವಿಭಾಗಗಳು ಇಲ್ಲವೇ ಇಲ್ಲವೆಂದು ಮತ್ತೆ ಕೆಲವರು ವಾದಿಸುತ್ತಾರೆ.

'ಕಥಾ'ರೂಪದ ಗದ್ಯಕಾವ್ಯವೇ ಸಂಸ್ಕೃತ ಸಾಹಿತ್ಯದಲ್ಲಿ ಗಣ್ಯಸ್ಥಾನ ಪಡೆದಿರುವುದು. ಮೊದಮೊದಲು ಸಾಮಾನ್ಯಜನರಿಗೆ ರಂಜಕವಾಗುವ ಜನಪ್ರಿಯ ಗದ್ಯಕಥೆಗಳು ಬಳಕೆಯಲ್ಲಿದ್ದು, ಅವೇ ಕಾಲಕ್ರಮದಲ್ಲಿ ಕಾವ್ಯಗುಣಗಳನ್ನೂ ಸಂಸ್ಕೃತ ರಚನಾಶೈಲಿಯನ್ನೂ ಅಳವಡಿಸಿಕೊಂಡು ಗದ್ಯಕಾವ್ಯವೆನ್ನಬಹುದಾದ ಮಟ್ಟಕ್ಕೇರಿ, 'ಕಥಾ' ಎಂಬ ಹೆಸರನ್ನು ತಾಳಿರಬೇಕೆಂದು ಹೇಳಬಹುದು. ಈಗ ಕೆಲವು ಆಖ್ಯಾಯಿಕೆಗಳನ್ನು ಬಿಟ್ಟರೆ, ಈ ಬಗೆಯ ಕಥೆಗಳಿಗೇ ಗದ್ಯಕಾವ್ಯವೆಂಬ ಹೆಸರು ಮೀಸಲಾಗಿಬಿಟ್ಟಿದೆ. ಈ ಗದ್ಯಕಾವ್ಯಗಳು ಎಲ್ಲ ವಿಚಾರಗಳಲ್ಲೂ ಪದ್ಯಕಾವ್ಯದಂತೆಯೇ ರಚಿತವಾಗಿರುತ್ತವೆ. ಗದ್ಯದಲ್ಲಿ ಸಮಾಸಭೂಯಸ್ತ್ವರೂಪವಾದ ಓಜಸ್ಸಿಗೆ ಪ್ರಾಧಾನ್ಯವಿರುತ್ತದೆ. ಇಷ್ಟೇ ಅವೆರಡಕ್ಕೂ ಇರುವ ವ್ಯತ್ಯಾಸ. ಆದರೆ ಪದ್ಯರೂಪದಲ್ಲಿಲ್ಲದಿದ್ದರೂ ಗದ್ಯಕಾವ್ಯದ ಹಲಕೆಲವು ಭಾಗಗಳು ವೃತ್ತಗಂಧಿಯಾಗಿರುತ್ತವೆ. ಇವುಗಳಲ್ಲೂ ಕಥಾಭಾಗ ಕಮ್ಮಿ. ವರ್ಣನೆಗಳು ಹೆಚ್ಚು. ಪದ್ಯಕಾವ್ಯಕ್ಕಿಂತ ಗದ್ಯಕಾವ್ಯದಲ್ಲಿ ಶಬ್ದಾಲಂಕಾರಗಳ ಬಳಕೆ ವಿಶೇಷ. ಇಷ್ಟೆಲ್ಲ ಇದ್ದರೂ ಕಾಳಿದಾಸಾದಿ ಕೆಲವು ಮಹಾಕವಿಗಳು ಗದ್ಯಕಾವ್ಯಗಳನ್ನು ರಚಿಸಿಲ್ಲದಿರುವುದು ಗಮನಾರ್ಹ.

### ದಂಡಿಯ **ದಶಕುಮಾರಚರಿತ** ( ಕ್ರಿ. ಶ. ೬–೭ನೆಯ ಶತಮಾನ )

ದಶಕುಮಾರಚರಿತವು ಮಗಧರಾಜನ ಕುಮಾರ ರಾಜವಾಹನ, ವಿದೇಹ ರಾಜನ ಇಬ್ಬರು ಕುಮಾರರು, ಮಗಧರಾಜನ ಏಳುಜನ ಮಂತ್ರಿಗಳ ಏಳು ಕುಮಾರರು, — ಹೀಗೆ ಒಟ್ಟು ಹತ್ತು ಕುಮಾರರ ಸಾಹಸಗಳ ಕಥೆ. ಈಗ ಉಪಲಬ್ಧವಾಗಿರುವ ಗದ್ಯಕಾವ್ಯಗಳಲ್ಲಿ ದಶಕುಮಾರಚರಿತವೇ ಅತ್ಯಂತ ಪ್ರಾಚೀನವೆಂದು ಹೇಳಬಹುದು. ಇದರ ವಸ್ತು ಕವಿಕಲ್ಪಿತವಾದ್ದರಿಂದ ಇದು ಮೇಲೆ ಹೇಳಿದ **ಕಥಾ**ಪ್ರಭೇದಕ್ಕೆ ಸೇರಿದುದೆಂದು ಸ್ಥೂಲವಾಗಿ ಹೇಳಬೇಕು. ಇದನ್ನು ಬರೆದ ಕವಿ ದಂಡಿ.

ದಶಕುಮಾರಚರಿತದಲ್ಲಿ ಮೂರು ಭಾಗಗಳಿವೆ — (೧) ಐದು ಉಚ್ಛ್ವಾಸಗಳ ಪೂರ್ವಪೀಠಿಕಾ (೨) ಎಂಟು ಉಚ್ಛ್ವಾಸಗಳ ಪ್ರಧಾನ ಭಾಗ ಮತ್ತು (೩) ಒಂದು ಉಚ್ಛ್ವಾಸದ ಉತ್ತರಪೀಠಿಕೆ. ಈ ಮೂರು ಭಾಗಗಳ ಶೈಲಿಗಳೂ ಭಿನ್ನಭಿನ್ನವಾಗಿವೆ. ಎರಡನೆಯ ಪ್ರಧಾನ ಭಾಗವೂ ಕಥೆಯ



ಮಧ್ಯೆ ಆರಂಭವಾಗುತ್ತದೆ; ಪೂರ್ಣವಾಗುವುದಕ್ಕೆ ಮುಂಚಿತವಾಗಿಯೇ ಇದ್ದಕ್ಕಿದ್ದಂತೆ ನಿಂತುಹೋಗುತ್ತದೆ. ಈಗ ಪ್ರಸಿದ್ಧವಾಗಿರುವ ಪೂರ್ವ ಮತ್ತು ಉತ್ತರ ಪೀಠಿಕೆಗಳಲ್ಲದೆ ಬೇರೆಯವರಿಂದ ರಚಿತವಾಗಿರುವ ಇನ್ನೂ ಕೆಲವು ದೊರಕುತ್ತವೆ. ಪ್ರಧಾನಭಾಗಕ್ಕೂ ಪೀಠಿಕೆಗಳ ಭಾಗಕ್ಕೂ ಕಥಾನಿರೂಪಣೆಯಲ್ಲೂ ಇತರ ವಿಚಾರಗಳಲ್ಲೂ ಹೊಂದಾಣಿಕೆಯೇ ಇಲ್ಲ. ಈ ಅಂಶಗಳನ್ನು ಗಮನಿಸಿಯೇ ದಂಡಿಕವಿ ವಿರಚಿತ ದಶಕುಮಾರಚರಿತೆಯ ಆದಿ ಮತ್ತು ಅಂತ್ಯ ಭಾಗಗಳು ಕಾಲಕ್ರಮದಲ್ಲಿ ಲುಪ್ತವಾಗಿ ಹೋದುದರಿಂದ ಆ ಕಥೆಯ ಸರಣಿಯನ್ನು ಬಲ್ಲ ಬೇರೊಬ್ಬ ಕವಿಯು ಪೂರ್ವೋತ್ತರ ಪೀಠಿಕೆಗಳೆಂಬ ಹೆಸರಿನಿಂದ ಹಾಗೆ ಲುಪ್ತವಾಗಿದ್ದ ಕಥಾಭಾಗವನ್ನೂ ಬರೆದು ಸೇರಿಸಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯ ಸರಿಯೆನ್ನುವುದಾದರೆ ದಶಕುಮಾರಚರಿತದ ಮಧ್ಯಭಾಗದ ಎಂಟು ಉಚ್ಛ್ವಾಸಗಳು **ಮಾತ್ರ** ದಂಡಿಯಿಂದ ರಚಿತವಾದುವೆಂದು ಹೇಳಬೇಕಾಗುತ್ತದೆ.

ದಂಡಿಯ ವಿಚಾರವಾಗಿ ಸರಿಯಾಗಿ ಏನೂ ತಿಳಿದುಬಂದಿಲ್ಲ. ಅವನ ದಶಕುಮಾರಚರಿತವನ್ನು ಪರಾಮರ್ಶಿಸಿದರೆ ಅವನು ಪ್ರಾಯಃ ದಕ್ಷಿಣಭಾರತದವನೆಂದೂ ವಾತ್ಸ್ಯಾಯನ ಕಾಮಸೂತ್ರದಲ್ಲೂ ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ನುರಿತ ಪಂಡಿತನಾಗಿದ್ದನೆಂದೂ ರಾಜಮನೆತನದವರ ಮತ್ತು ಐಶ್ವರ್ಯವಂತರ ನಡೆನುಡಿಗಳನ್ನು ಚೆನ್ನಾಗಿ ಬಲ್ಲವನಾಗಿದ್ದನೆಂದೂ ತೋರುತ್ತದೆ. ದಂಡಿನ್ ಪದ 'ಸನ್ಯಾಸಿ' ಎಂಬ ಅರ್ಥ ಕೊಡುವುದರಿಂದ ಈತನು ಸನ್ಯಾಸಿಯಾಗಿದ್ದನೆಂಬ ಭಾವನೆ ಪಾಶ್ಚಾತ್ಯ ವಿದ್ವಾಂಸರಲ್ಲಿ ಉದಯಿಸಿದ್ದುದು ನಿರಾಧಾರವೆಂದು ಈಗ ಸಿದ್ಧಾಂತವಾಗಿದೆ. ದಂಡಿಯನ್ನು ಆಚಾರ್ಯದಂಡೀ ಎಂದೂ ವ್ಯವಹರಿಸುತ್ತಾರೆ. ಇದಕ್ಕೆ ಕಾರಣ ದಂಡಿಯೂ ಭಾಮಹನಂತೆ ಆಲಂಕಾರಿಕ. ಭಾಮಹನನ್ನು ಭಾಮಹಾಚಾರ್ಯನೆಂದು ಕರೆಯುವುದಾದರೆ ದಂಡಿಯು ಆಚಾರ್ಯದಂಡಿಯೇ ಆಗಬೇಕಾದುದು ಸಹಜ.

ದಂಡಿಯು ಎಂಟನೆಯ ಶತಮಾನದ ವಾಮನನಿಗಿಂತ ಹಿಂದಿನವನು. ದಂಡಿಯ ಕಾವ್ಯಾಲಂಕಾರದಲ್ಲಿ ಐದನೆಯ ಶತಮಾನದ ಪ್ರವರಸೇನನಿಂದ ರಚಿತವಾದ ಸೇತುಬಂಧ ಕಾವ್ಯದ ಪ್ರಾಕೃತದ ಉಲ್ಲೇಖವಿರುವುದರಿಂದ, ಅವನು ಅದಕ್ಕಿಂತ ಅರ್ವಾಚೀನ. ಆದ್ದರಿಂದ ದಂಡಿಯು ಈ ಎರಡು ಅವಧಿಗಳ

ಮಧ್ಯೆ ಇದ್ದಿರಬೇಕು. ಅಲ್ಲದೆ ಏಳನೆಯ ಶತಮಾನದ ಬಾಣ ಸುಬಂಧುಗಳ ಗದ್ಯಕ್ಕಿಂತ ಈತನ ಗದ್ಯ ಲಲಿತವಾಗಿರುವುದರಿಂದ ಇವನು ಅವರಿಬ್ಬರಿಗಿಂತ ಹಿಂದಿನವನೆಂದು ಹೇಳಬಹುದು. ಇವನ ಕಾವ್ಯಾದರ್ಶವು ಭಾಮಹನ ಕಾವ್ಯಾಲಂಕಾರಕ್ಕಿಂತ ಹಿಂದಿನದೆಂಬ ಭಾವನೆಯೂ ಕೆಲವರಲ್ಲಿದ್ದು, ಆ ಪ್ರಕಾರವಾಗಿಯೂ ದಂಡಿಯು ಪ್ರಾಯಃ ಆರನೆಯ ಶತಮಾನದವನೆಂದೇ ಹೇಳಬೇಕಾಗುತ್ತದೆ.

ದಂಡಿಯ ಗದ್ಯವು ಪದಲಾಲಿತ್ಯಕ್ಕೆ ಹೆಸರಾದುದು (ಪುಟ ೬೧ ಅಡಿಟಿಪ್ಪಣಿ ೫ ನೋಡಿ). ದಶಕುಮಾರಚರಿತದ ಏಳನೆಯ ಉಚ್ಛ್ವಾಸದಲ್ಲಿ ಓಷ್ಠ್ಯಾಕ್ಷರವೊಂದೂ ಬಳಸಲ್ಪಡದಿರುವುದು ಗಮನಾರ್ಹ.

ಕಾವ್ಯಾದರ್ಶವೆಂಬ ಅಲಂಕಾರಶಾಸ್ತ್ರ ಗ್ರಂಥವನ್ನೂ ಅವಂತಿಸುಂದರೀ ಕಥೆಯೆಂಬ ಮತ್ತೊಂದು ಗದ್ಯಕಾವ್ಯವನ್ನೂ ದಂಡಿ ಬರೆದಿರುವುದಾಗಿ ನಂಬಲಾಗಿದೆ. ಆದರೆ ಕೆಲವು ವಿದ್ವಾಂಸರು ದಶಕುಮಾರಚರಿತದ ಕರ್ತೃವೇ ಕಾವ್ಯಾದರ್ಶ ರಚಿಸಿದವನಲ್ಲವೆಂದು ಅಭಿಪ್ರಾಯಪಡುತ್ತಾರೆ.

## ಅವಂತಿಸುಂದರೀ ಕಥಾ ಮತ್ತು ಕಥಾಸಾರ

ಅವಂತಿಸುಂದರೀಕಥೆಯು ಮೊದಲಬಾರಿಗೆ ೧೯೨೪ರಲ್ಲಿ ಪ್ರಕಟಿತವಾಗಿ ಅದು ದಂಡಿವಿರಚಿತವೆಂದು ನಿರೂಪಿತವಾಯಿತು. ಅದರ ಹೆಸರೇ ಸೂಚಿಸುವಂತೆ ಅದು ಒಂದು 'ಕಥಾ'. ಆದರೆ ಅದು ಉಪಲಬ್ಧವಾಗಿರುವ ಸ್ಥಿತಿಯಲ್ಲಿ ಅಸಮಗ್ರವಾಗಿದೆ; ಮತ್ತು ಕಥಾಸಾರವೆಂಬ ಪದ್ಯಭಾಗದ ಜತೆಯಲ್ಲಿದೆ. ಈ ಕಥಾಸಾರದಲ್ಲಿ ಕವಿಯ ಹೆಸರನ್ನು ದಂಡಿಯೆಂದು ಹೇಳಿರುವುದಲ್ಲದೆ ಅವನ ಮತ್ತು ಅವನ ಪೂರ್ವಜರನ್ನು ಕುರಿತ ವೃತ್ತಾಂತಗಳೂ ಇವೆ. ಅದರಂತೆ ದಂಡಿಯು ಕಿರಾತಾರ್ಜುನೀಯ ಬರೆದ ಭಾರವಿಯ ಪ್ರಪೌತ್ರ. ಕಾಂಚಿಯಲ್ಲಿ ಪಲ್ಲವರಾಜ ನರಸಿಂಹವರ್ಮನು ಪುನಃ ಪ್ರತಿಷ್ಠಿತನಾದಮೇಲೆ ಅವನ ಆಸ್ಥಾನ ಕವಿಯಾಗಿ ದಂಡಿಯು ಅವಂತಿಸುಂದರೀಕಥೆಯನ್ನು ರಚಿಸಿದನಂತೆ. ಈ ಅವಂತಿಸುಂದರೀಕಥೆಯು ದಶಕುಮಾರಚರಿತದ ಪೂರ್ವಪೀಠಿಕೆಯೆಂದೇ ಹೇಳಬಹುದು. ಒಬ್ಬನೇ ಕವಿ ಒಂದೇ ಕಥೆಯನ್ನು ಎರಡು ಬೇರೆ ಬೇರೆ ಕಾವ್ಯಗಳಲ್ಲಿ ಹೇಳುವುದು ಅಸಹಜವಾದ್ದರಿಂದ ಅವಂತಿಸುಂದರೀಕಥೆಯು



ದಂಡಿವಿರಚಿತವಲ್ಲವೆಂದೂ ೭ನೆಯ ಶತಮಾನದ ಕವಿಯೊಬ್ಬನಿಂದ ರಚಿತವಾಗಿರಬೇಕೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

## ಬಾಣನ **ಕಾದಂಬರೀ** (ಕ್ರಿ.ಶ. ೭ನೆಯ ಶತಮಾನ)

ಕಾದಂಬರಿಯು ಒಂದು 'ಕಥಾ'. ಇದು ಬಾಣಕವಿ ವಿರಚಿತವಾದುದು. ಬಾಣಕವಿಯು ಹರ್ಷನ (ಕ್ರಿ.ಶ. ೬೦೪–೬೪೮) ಆಸ್ಥಾನಕವಿಯಾಗಿದ್ದುದರಿಂದ ಅವನ ಕಾಲ ೭ನೆಯ ಶತಮಾನವೆಂಬುದರಲ್ಲಿ ವಿವಾದವೇ ಇಲ್ಲ. ಬಾಣನು ತನ್ನ ವಿಚಾರವಾಗಿ ಹರ್ಷಚರಿತದಲ್ಲಿ ಹೇಳಿಕೊಂಡಿರುವ ಅಂಶಗಳನ್ನು (ಪುಟ ೮೩, ೮೪) ಹಿಂದೆ ಪ್ರಸ್ತಾಪಿಸಿದ್ದೇವೆ.

ಕ್ರಿ. ಶ. ಏಳನೆಯ ಶತಮಾನದಲ್ಲಿ ಸಂಸ್ಕೃತ ಸಾಹಿತ್ಯವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಶ್ರೀಹರ್ಷನ ಆಸ್ಥಾನದಲ್ಲಿ ಬಾಣನ ಜತೆಯಲ್ಲೇ ಮಯೂರಕವಿಯೂ ಜೈನಕವಿ ಮಾನತುಂಗನೂ ಇದ್ದರು. ಮಯೂರನ ಸೂರ್ಯಶತಕವೂ ಮಾನತುಂಗನ ಭಕ್ತಾಮರಸ್ತೋತ್ರವೂ ಸುಪ್ರಸಿದ್ಧವಾಗಿವೆ. ಗುಜರಾತಿನ ರಾಜಧಾನಿಯಾದ ವಲಭಿಯಲ್ಲಿದ್ದ ಭಟ್ಟಿಕಾವ್ಯದ ಕರ್ತೃವಾದ ಭಟ್ಟಿಕವಿಯೂ, ನ್ಯಾಯವಾರ್ತಿಕ ಬರೆದಿರುವ ಉದ್ಯೋತಕರನೂ ಇದೇ ಶತಮಾನದವರು. ದಶಕುಮಾರಚರಿತ ಬರೆದ ದಂಡಿಯೂ ಬಾಣನಿಗೆ ಸ್ವಲ್ಪಕಾಲ ಹಿಂದೆ ಇದ್ದವನು. ಇಂತಹ ಮಹತ್ವಪೂರ್ಣ ಶತಮಾನದಲ್ಲಿ ಬಾಣಭಟ್ಟನು ಗದ್ಯಕಾವ್ಯವಾದ 'ಕಾದಂಬರಿ'ಯನ್ನು ತನ್ನದೇ ಆದ ರೀತಿಯಲ್ಲಿ ಬರೆದು ಸಂಸ್ಕೃತ ಸಾಹಿತ್ಯದಲ್ಲಿ ಗದ್ಯಕ್ಕೆ ಒಂದು ಗಣ್ಯಸ್ಥಾನವನ್ನು ದೊರಕಿಸಿಕೊಟ್ಟಿರುವುದಲ್ಲದೆ ಅಲ್ಲಿಂದೀಚಿನ ಗದ್ಯಲೇಖಕರಿಗೆ ಆದರ್ಶವಾಗಿಬಿಟ್ಟಿದ್ದಾನೆ.

ಕಾದಂಬರಿಯ ಕಥೆ ಸ್ವಲ್ಪ ಜಟಿಲವೆಂದೇ ಹೇಳಬೇಕು. ಅದು ಪ್ರಧಾನ ಪುರುಷರಿಬ್ಬರ ಎರಡು ಐಹಿಕ ಜನ್ಮಗಳ ವೃತ್ತಾಂತಗಳನ್ನೊಳಗೊಂಡಿದೆ. ಕಥೆಯನ್ನು ಒಂದು ಗಿಣಿಯು ಶೂದ್ರಕರಾಜನಿಗೆ ಹೇಳುತ್ತಿರುವಂತೆ ಈ ಗದ್ಯಕಾವ್ಯ ರಚಿತವಾಗಿರುವುದಲ್ಲದೆ ಎರಡು ಮೂರು ಕಥಾವ್ಯೂಹಗಳು ಪರಸ್ಪರ ಹೆಣೆದುಕೊಂಡುಬಿಟ್ಟಿದ್ದರೂ ಒಟ್ಟಿನಲ್ಲಿ ಕವಿಯ ಕಲ್ಪನೆ ಪರಮಾವಧಿಯನ್ನು ಮುಟ್ಟಿ ಒಂದೊಂದು ಘಟ್ಟದಲ್ಲೂ ಸ್ವಾರಸ್ಯ ಹೆಚ್ಚುತ್ತಲೇ ಹೋಗುತ್ತದೆ. ಬಾಣನು ಈ ಕಥೆಯನ್ನು ಗಿಣಿಯೊಂದರ ಬಾಯಿಂದ ಹೇಳಿಸಿ ಅದನ್ನು ಕೇಳುತ್ತಿರುವ ಶೂದ್ರಕರಾಜನೇ ಕಥೆಯ ನಾಯಕನಾದ ಚಂದ್ರಾಪೀಡನಾಗುವುದೂ

ಈ ಕಥಾಶ್ರವಣದಿಂದ ಕಥಾನಾಯಿಕೆಯಾದ ಕಾದಂಬರಿಯ ಮೇಲೆ ಅವನಿಗಿದ್ದ (ಪೂರ್ವಜನ್ಮದ) ಪ್ರೀತಿಯು ಪುನರುಜ್ಜೀವಿತಗೊಳ್ಳುವುದೂ ಕಥಾಸಂವಿಧಾನದ ಚಮತ್ಕಾರವನ್ನು ತೋರಿಸುತ್ತದೆ.

ಕಾದಂಬರೀ ಕಥೆಯು ಸೋಮದೇವನ ಕಥಾಸರಿತ್ಸಾಗರದಲ್ಲೂ ಬರುತ್ತದೆ. ಆದರೆ ಬಾಣನು ಹೇಳಿರುವುದಕ್ಕೂ ಅಲ್ಲಿರುವುದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಪ್ರಾಯಃ ಈ ಎರಡಕ್ಕೂ ಮೂಲ ಗುಣಾಢ್ಯನ ಬೃಹತ್ಕಥೆಯೇ ಆಗಿದ್ದಿರಬಹುದು.

ಬಾಣನು ಕಾದಂಬರಿಯನ್ನು ಪೂರ್ಣವಾಗಿ ರಚಿಸಲಿಲ್ಲ. ಅದು ಇನ್ನೂ ಅಸಮಗ್ರವಾಗಿರುವಾಗಲೇ ಅವನು ದೈವಾಧೀನನಾದುದರಿಂದ ಅದನ್ನು ಆತನ ಮಗನಾದ [2]ಪುಲಿಂದನು ಬರೆದು ಪೂರ್ಣಗೊಳಿಸಿದ್ದಾನೆ. ಈ ಭಾಗಕ್ಕೆ 'ಉತ್ತರ ಕಾದಂಬರೀ' ಅಥವಾ ಕಾದಂಬರಿಯ ಉತ್ತರಭಾಗವೆನ್ನುತ್ತಾರೆ. ಬಾಣನಿಂದಲೇ ರಚಿತವಾದ ಪೂರ್ವಭಾಗಕ್ಕೆ 'ಪೂರ್ವ ಕಾದಂಬರೀ' ಎಂದೂ ಹೇಳುವುದುಂಟು. ಉತ್ತರ ಕಾದಂಬರಿಯ ಆದಿಯಲ್ಲಿ ಬಾಣನ ಮಗನೇ ಹೀಗೆ ಹೇಳಿಕೊಂಡಿದ್ದಾನೆ.—

> ಯಾತೇ ದಿವಂ ಪಿತರಿ ತದ್ವಚಸೈವ ಸಾರ್ಧಂ
> ವಿಚ್ಛೇದಮಾಪ ಭುವಿ ಯಸ್ತು ಕಥಾಪ್ರಬಂಧಃ ।
> ದುಃಖಂ ಸತಾಂ ತದಸಮಾಪ್ತಿಕೃತಂ ವಿಲೋಕ್ಯ
> ಪ್ರಾರಬ್ಧ ಏಷ ಚ ಮಯಾ ನ ಕವಿತ್ವದರ್ಪಾತ್ ॥

ಭಾರತೀಯ ಪಂಡಿತರಿಗೆ ಬಾಣನ ಶೈಲಿಯೆಂದರೆ ಅಚ್ಚುಮೆಚ್ಚು. ಆತನ ಪ್ರತಿಭೆ ಅಪ್ರತಿಮವಾದುದು. ಆತನ ಪದಜೋಡಣೆ, ವಾಕ್ಯಗಳ ಧಾಟಿ, ವರ್ಣನೆಯ ಸೊಗಸು, ಕಥಾನಿರೂಪಣೆಯಲ್ಲಿನ ಸ್ವಾರಸ್ಯ, ಅಲಂಕಾರಗಳ ಸುರಿಮಳೆ, ಯಮಕ ಅನುಪ್ರಾಸಗಳ ವೈಖರಿ, — ಮೊದಲಾದುವು ಬಾಣನ ಗದ್ಯದಲ್ಲಿರುವ ವೈಶಿಷ್ಟ್ಯ. ಬಾಣನ ಕಾದಂಬರಿಯಲ್ಲಿ ಬಾರದ ಪದವಿಲ್ಲ, ಬಳಸದ ಅಲಂಕಾರವಿಲ್ಲ, ವರ್ಣಿತವಾಗದ ಸನ್ನಿವೇಶಗಳಿಲ್ಲ, ನಿರೂಪಿತವಾಗದ ರಸವಿಲ್ಲ. ಮಾನವಸಹಜವಾದ ಭಾವಾವೇಶಗಳೂ ಹೃದಯಾಂತರಾಳದ ಹೋರಾಟಗಳೂ ಸ್ಪಷ್ಟವಾಗಿ ಕಣ್ಣಿಗೆ ಕಟ್ಟಿದಂತೆ ಸ್ವಾಭಾವಿಕವಾದ ರೀತಿಯಲ್ಲಿ

[2] ಇವನನ್ನು ಭೂಷಣಭಟ್ಟಬಾಣನೆಂದೇ ವ್ಯವಹರಿಸುವುದು ವಾಡಿಕೆಯಾಗಿದೆ. ಇವನ ವಾಸ್ತವಿಕ ಹೆಸರು ಸರಿಯಾಗಿ ಎಲ್ಲೂ ಉಕ್ತವಾಗಿಲ್ಲ.



ಚಿತ್ರಿತವಾಗಿವೆ. ಆದ್ದರಿಂದಲೇ ಇತ್ತೀಚಿನ ಕವಿಗಳು ಏನು ಬರೆದರೂ ಅದೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಬಾಣನು ಹೇಳಿಯಾಗಿರುವುದೇ. ಹೀಗಾಗಿ 'ಬಾಣೋಚ್ಛಿಷ್ಟಂ ಜಗತ್ ಸರ್ವಂ' ಎಂಬ ಉಕ್ತಿ ಯಥಾರ್ಥವೇ ಆಗಿಬಿಟ್ಟಿದೆ.

ಕಾದಂಬರಿಯನ್ನು ಬಾಣನು ಬರೆದ ಮೇಲೆ ಅಷ್ಟೇ [3]ಸ್ವಾರಸ್ಯನಾದ ಬೇರೊಂದು ಕಥೆ ಬಹಳ ಕಾಲದವರೆಗೆ ರಚಿತವಾಗಲೇ ಇಲ್ಲ. ಇತ್ತೀಚೆಗೆ ಈ ಇಪ್ಪತ್ತನೆಯ ಶತಮಾನದಲ್ಲಿ ಆಂಗ್ಲಭಾಷೆಯ ನಾವೆಲ್‌ಗಳ ಪ್ರಭಾವದಿಂದ ಬಂಗಾಳಿ ಭಾಷೆಯಲ್ಲಿ ಮೊದಮೊದಲು ಸ್ವಾರಸ್ಯವಾದ ಹೊಸರೀತಿಯ ಕಥೆಗಳು ಬಂದು ಕನ್ನಡದಲ್ಲೂ ಭಾಷಾಂತರಗೊಂಡಾಗ ಅವನ್ನು 'ಕಾದಂಬರಿ'ಗಳೆಂದೇ ಕರೆಯಲಾರಂಭಿಸಲಾಯಿತು. ಬಾಣರಚಿತ ಕಥೆಯ ಸ್ವಾರಸ್ಯವು ಆ ಕಥೆಯ ಹೆಸರೇ ಆ ಜಾತಿಯ ಸಾಹಿತ್ಯಕ್ಕೆಲ್ಲ ಬರುವಂತಾಗಲು ಕಾರಣವೆನ್ನುವುದರಲ್ಲಿ ಸಂದೇಹವೇ ಇಲ್ಲ.

ಬಾಣರಚಿತ ಹರ್ಷಚರಿತದ ವಿಚಾರವನ್ನು ಈಗಾಗಲೇ ಹೇಳಿಯಾಗಿದೆ. (ಪುಟ ೮೨ ನೋಡಿ). **ಚಂಡೀಶತಕ** ಮತ್ತು ಶಿವಶತಕ ಇವೆರಡೂ ಬಾಣನು ಬರೆದ ಎರಡು ಸ್ತೋತ್ರಗಳು. **ಮುಕುಟತಾಡಿತಕ** ಎಂಬ ಗ್ರಂಥವೂ ಬಾಣನದೆಂದೇ ಹೇಳುತ್ತಾರೆ. ಅದು ಈಗ ಉಪಲಬ್ಧವಾಗಿಲ್ಲ.

### ಸುಬಂಧುವಿನ **ವಾಸವದತ್ತ** (ಕಿ.ಶ. ೭ನೆಯ ಶತಮಾನ)

ವಾಸವದತ್ತ ಸುಬಂಧುವಿರಚಿತವಾದುದು. ಬಾಣನ ಹರ್ಷಚರಿತದಲ್ಲಿ 'ವಾಸವದತ್ತ'ದ [4]ಉಲ್ಲೇಖವಿದೆ. ಆದ್ದರಿಂದ ವಾಸವದತ್ತವನ್ನು ರಚಿಸಿದ ಸುಬಂಧು ಬಾಣನಿಗಿಂತ ಹಿಂದಿನವನೆಂದಂತಾಯಿತು. ಆದರೆ ಸುಬಂಧುವು ಆರನೆಯ ಶತಮಾನದ ಉದ್ಯೋತಕರನನ್ನೂ ಏಳನೆಯ ಶತಮಾನದ ಧರ್ಮಕೀರ್ತಿಯೆಂಬ ಜೈನ ತಾರ್ಕಿಕನನ್ನೂ ಉಲ್ಲೇಖಿಸುತ್ತಾನೆ. ಬಾಣನ ಕಾಲ ಏಳನೆಯ ಶತಮಾನದ ಆದಿ ಎಂಬುದರಲ್ಲಿ ಸಂದೇಹವೇ ಇಲ್ಲ. ಹೀಗಿರುವಾಗ

[3] ಕಾದಂಬರೀ ಶಬ್ದಕ್ಕೆ ಮದ್ಯವೆಂಬ ಅರ್ಥವೂ ಇದೆ. ಮದ್ಯದ ಸವಿ ಕಂಡವನಿಗೆ ಆಹಾರವೂ ರುಚಿಸದೆನ್ನುವಂತೆ ಕಾದಂಬರಿಯ ಸ್ವಾರಸ್ಯ ಕಂಡವನಿಗೂ ಆಹಾರವು ರುಚಿಸದು ಎಂಬುದು ನಿಜ. ಆದ್ದರಿಂದಲೇ 'ಕಾದಂಬರೀರಸಜ್ಞಾನಾಂ ಆಹಾರೋಽಪಿ ನ ರೋಚತೇ' ಎಂಬ ಮಾತು ಯಥಾರ್ಥ.

[4] ಕವೀನಾಮಗಲದ್ದರ್ಪೋ ನೂನಂ ವಾಸವದತ್ತಯಾ ।

ಸುಬಂಧುವು ಬಾಣನಿಗಿಂತ ಹಿಂದಿನವನೆಂದು ಹೇಳುವುದು ಹೇಗೆ? ಇದನ್ನು ಪರಿಶೀಲಿಸಿಯೇ ಕೆಲ ವಿದ್ವಾಂಸರು ಬಾಣ ಹೇಳಿರುವುದು ಸುಬಂಧು ಬರೆದ ವಾಸವದತ್ತವನ್ನಲ್ಲ; ಪತಂಜಲಿಯು ಮಹಾಭಾಷ್ಯದಲ್ಲಿ ಹೇಳಿರುವ ಪ್ರಾಚೀನ ಕಾವ್ಯ ಎಂದು ವಾದಿಸುತ್ತಾರೆ. ಅವರ ಅಭಿಪ್ರಾಯದಲ್ಲಿ ಸುಬಂಧು ಎಂಟನೆಯ ಶತಮಾನದವನು. ಸುಬಂಧುವಿನ ವಾಸವದತ್ತದ ಕೆಲವು ಭಾಗಗಳು ಬಾಣ ಮತ್ತು ಭವಭೂತಿಗಳಿಂದ ಎರವಲು ಪಡೆದಿರುವಂತೆ ಭಾಸವಾಗುವುದೂ ಈ ವಾದವನ್ನು ಪುಷ್ಟೀಕರಿಸುತ್ತದೆ.

ವಾಸವದತ್ತ ಒಂದು ಕಥೆ. ಈ ಕಥೆಗೂ ಪ್ರಸಿದ್ಧವಾದ ಉದಯನ ಚರಿತ್ರದ ವಾಸವದತ್ತೆಯ ಕಥೆಗೂ ಏನೂ ಸಂಬಂಧವಿಲ್ಲ. ಎರಡರಲ್ಲೂ ನಾಯಿಕೆಯ ಹೆಸರು ಮಾತ್ರ ಒಂದೇ. ಪ್ರಸಕ್ತ ಕಥೆಯಲ್ಲಿ ಕಂದರ್ಪಕೇತುವೇ ನಾಯಕ. ಈತನೂ ವಾಸವದತ್ತೆಯೂ ಪರಸ್ಪರ ಸೌಂದರ್ಯವನ್ನು ಮೊದಲು ಕನಸಿನಲ್ಲಿ ಕಂಡು ಅನುರಾಗಬದ್ಧರಾಗಿ ಕೆಲಕಾಲದಮೇಲೆ ಭೇಟಿಯಾಗುವುದೂ, ಬಳಿಕ ದಿವ್ಯಾಶ್ವವೊಂದರ ಸಹಾಯದಿಂದ ವಿಂಧ್ಯಪರ್ವತಕ್ಕೆ ಪ್ರಣಯಿಗಳಿಬ್ಬರೂ ಬಂದು ಸೇರುವುದೂ, ಕಾರಣಾಂತರದಿಂದ ಅಲ್ಲಿ ವಾಸವದತ್ತೆ ಮುನಿಶಾಪದಿಂದ ಶಿಲೆಯಾಗುವುದೂ, ಸ್ವಲ್ಪ ಕಾಲದ ಬಳಿಕ ಶಾಪವಿಮೋಚನೆಯಾದಮೇಲೆ ಇಬ್ಬರೂ ನಾಯಕನ ರಾಜಧಾನಿಯನ್ನು ಸೇರಿ ಸುಖವಾಗಿರುವುದೂ ಕಥಾವಸ್ತು.

ಸುಬಂಧುವಿನ ಗದ್ಯಶೈಲಿಗೂ ಬಾಣನ ಶೈಲಿಗೂ ಅಜಗಜಾಂತರ; ಈತನ ಕಥಾನಿರೂಪಣೆ ಸ್ವಾರಸ್ಯವಾಗಿದ್ದರೂ ಭಾಷೆ ಕ್ಲಿಷ್ಟ, ದುರ್ಬೋಧ; ಉದ್ದಕ್ಕೂ ಬರುವ ಪ್ರತ್ಯಕ್ಷರಶ್ಲೇಷ ಮತ್ತು ಪದವಿನ್ಯಾಸಗಳನ್ನು ಅರ್ಥಮಾಡಿಕೊಳ್ಳುವುದೇ ಒಂದು ಸಾಹಸ. ಸುಬಂಧು ಪ್ರಯೋಗಿಸಿರುವ ಎಷ್ಟೋ ಅಲಂಕಾರಗಳೂ ಪ್ರಕಟಿಸಿರುವ ಭಾವಗಳೂ ಅಶ್ಲೀಲತೆಯಿಂದ ಕೂಡಿವೆಯೆಂಬುದನ್ನು ಹೇಳದೆ ವಿಧಿಯಿಲ್ಲ. ಹೀಗೆಂದ ಮಾತ್ರಕ್ಕೆ ಸುಬಂಧುವಿನ ಕಾವ್ಯ ನಿಕೃಷ್ಟವೆನ್ನುವಹಾಗೂ ಇಲ್ಲ. ಇದು ತೀರ ಚಿಕ್ಕ ಗದ್ಯಕಾವ್ಯವಾದುದರಿಂದ ದೋಷಗಳು ಮೇಲೆದ್ದು ಕಾಣುತ್ತವೆ. ಗುಣಗಳು ಮರೆಯಾಗಿಬಿಡುತ್ತವೆ.

### ಧನಪಾಲನ **ತಿಲಕಮಂಜರೀ** (ಕ್ರಿ.ಶ. ೧೦ನೆಯ ಶತಮಾನ)

ತಿಲಕಮಂಜರಿಯು ಧನಪಾಲಕವಿಯಿಂದ ಕ್ರಿ.ಶ. ೯೭೩ರಲ್ಲಿ ರಚಿತವಾಯಿತು. ಜೈನರಲ್ಲಿ ಪ್ರಚಲಿತವಾಗಿರುವ ಒಂದು ಉಪಾಖ್ಯಾನವನ್ನು



ಆಧಾರವಾಗಿಟ್ಟುಕೊಂಡು ಕವಿಯು ಈ ಕಥೆಯನ್ನು ತನ್ನದೇ ಆದ ರೀತಿಯಲ್ಲಿ ರಚಿಸಿದ್ದಾನೆ. ತಿಲಕಾ ಎಂಬ ರಾಜಕುಮಾರಿಯೂ ಸಮರಕೇತುವೆಂಬ ರಾಜಕುಮಾರನೂ ಪರಸ್ಪರ ಪ್ರಣಯಿಗಳಾಗಿ ವಿವಾಹಿತರಾದುದೇ ಕಥೆಯ ವಸ್ತು.

ಧಾರಾ ನಗರದ ಭೋಜರಾಜನು ತನಗೆ ಆಶ್ರಯದಾತನಾಗಿದ್ದನೆಂದೂ ತನ್ನ ತಂದೆ ಸರ್ವದೇವನೆಂಬ ಪಂಡಿತನೆಂದೂ ಧನಪಾಲನೇ ಹೇಳಿಕೊಂಡಿದ್ದಾನೆ. ವಾಲ್ಮೀಕಿ, ವ್ಯಾಸ, ಪ್ರವರಸೇನ, ಕಾಳಿದಾಸ, ಬಾಣ, ಮಾಘ, ಭಾರವಿ, ಭವಭೂತಿ, ವಾಕ್ಪತಿರಾಜ, ರಾಜಶೇಖರ ಮುಂತಾದ ಕವಿಗಳ ಹೆಸರನ್ನೂ ತಿಲಕಮಂಜರಿಯ ಪ್ರಾರಂಭದಲ್ಲಿ ಉಲ್ಲೇಖಿಸಿದ್ದಾನೆ. ಬೃಹತ್ಕಥೆ ಮತ್ತು ತರಂಗವತೀ ಎಂಬೆರಡು ಗ್ರಂಥಗಳನ್ನು ನಾಮತಃ ನಿರ್ದೇಶಿಸಿದ್ದಾನೆ.

### ಸೊಡ್ಢಲನ **ಉದಯಸುಂದರೀಕಥಾ** (ಕ್ರಿ.ಶ. ೧೧ನೆಯ ಶತಮಾನ)

ಉದಯಸುಂದರೀ ಕಥೆಯಲ್ಲಿ ೮ ಉಚ್ಛ್ವಾಸಗಳಿವೆ. ಪ್ರತಿಷ್ಠಾನದ ರಾಜನಾದ ಮಲಯವಾಹನನಿಗೂ ನಾಗಕನ್ನಿಕೆಯಾದ ಉದಯಸುಂದರಿಗೂ ವಿವಾಹ ನಡೆದ ಪ್ರಕರಣವು ಈ 'ಕಥಾ'ರೂಪವಾದ ಗದ್ಯಕಾವ್ಯದಲ್ಲಿ ನಿರೂಪಿತವಾಗಿದೆ. ಲಾಟಾಧಿಪತಿಯಾದ ವತ್ಸರಾಜನ ಆಶ್ರಿತನಾದ ಸೊಡ್ಢಲನು ಆ ರಾಜನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೧೦೨೬–೧೦೮೦) ಈ ಗ್ರಂಥವನ್ನು ರಚಿಸಿರಬೇಕು. ಉದಯಸುಂದರೀಕಥೆಯ ಮೊದಲನೆಯ ಉಚ್ಛ್ವಾಸದಲ್ಲಿ ಕವಿಯು ತನ್ನ ವಂಶದ ವಿವರಗಳನ್ನೂ ಈ ಕಥೆಯನ್ನು ಬರೆಯಲೊದಗಿದ ಸಂದರ್ಭವನ್ನೂ ತಿಳಿಸಿದ್ದಾನೆ. ಈ ಉಚ್ಛ್ವಾಸಕ್ಕೆ ಕವಿವಂಶನಿವೇದನವೆಂದು ಹೆಸರು. ಉಳಿದ ಉಚ್ಛ್ವಾಸಗಳಿಗೂ ಹೆಸರುಗಳಿವೆ. ಅವು—(೨) ಶುಕಲಾಭ (೩) ಚಿತ್ರಸಂದರ್ಶನ (೪) ಕುಮಾರಕೇಸರಿಸಮಾಗಮ (೫) ತಾಪಸೀರಕ್ಷಣ (೬) ತಾರಾವಳೀದರ್ಶನ (೭) ಉಭಯಮೇಳಕ (೮) ಸರ್ವಾನಂದ.

ಉದಯಸುಂದರೀಕಥೆಯು ಕಾದಂಬರಿಯಂತೆ ಬರೀ ಗದ್ಯಕಾವ್ಯವಲ್ಲ. ಗದ್ಯಪದ್ಯಮಿಶ್ರವಾದ ಚಂಪೂರೂಪವಾಗಿದೆ. ಅಲ್ಲದೆ ಇದರ ಗದ್ಯಭಾಗಕ್ಕಿಂತ ಪದ್ಯಭಾಗವೇ ಚೆನ್ನಾಗಿದೆಯೆಂದು ಹೇಳಬೇಕು. ಕೆಲವುಕಡೆ ಪದಪ್ರಯೋಗಗಳು ಲಲಿತವಾಗಿಯೂ ಸರಸವಾಗಿಯೂ ಇವೆ; ವರ್ಣನೆಗಳು ರಮ್ಯವಾಗಿಯೂ ಶಬ್ದಚಮತ್ಕಾರಗಳು ಮೋಹಕವಾಗಿಯೂ ಇವೆ.

### ಒಡೆಯದೇವನ **ಗದ್ಯಚಿಂತಾಮಣಿ** (ಕ್ರಿ.ಶ. ೧೨ನೆಯ ಶತಮಾನ)

**ಗದ್ಯಚಿಂತಾಮಣಿ**ಯು ೧೧ ಲಂಬಕಗಳಲ್ಲಿ ಜೀವಂಧರ ಚರಿತವನ್ನು ವಿವರಿಸಿರುವ ಗದ್ಯಕಾವ್ಯ. ಇದನ್ನು ರಚಿಸಿದವನು 'ವಾದೀಭಸಿಂಹ'ನೆಂದು ಪ್ರಸಿದ್ಧನಾದ ದಿಗಂಬರ ಜೈನಕವಿ ಒಡೆಯದೇವ. ಈ ಕಾವ್ಯದ ರಚನಾಕಾಲ ಕ್ರಿ.ಶ. ೧೨೦೦. ಇದೇ ಕವಿಯು ಇದೇ ಜೀವಂಧರಚರಿತವನ್ನು ಹನ್ನೊಂದೇ ಲಂಬಕಗಳ **ಕ್ಷತ್ರಚಿಂತಾಮಣಿ** ಎಂಬ ಚಂಪೂಕಾವ್ಯವಾಗಿಯೂ ರಚಿಸಿದ್ದಾನೆ. ಒಂದೇ ಕಥೆಯನ್ನು ಎರಡು ಕಾವ್ಯಗಳಾಗಿ ರಚಿಸಿರುವುದು ಸ್ವಲ್ಪ ವಿಚಿತ್ರವಾಗಿ ಕಾಣುವುದು ಸಹಜ. ಕ್ಷತ್ರಚಿಂತಾಮಣಿಯ ರಚನೆ ಸ್ವಲ್ಪ ಪ್ರೌಢಶೈಲಿಯಲ್ಲಿದ್ದು ಪಂಡಿತಮಾನ್ಯವಾಗಿದೆ. ಗದ್ಯಚಿಂತಾಮಣಿಯ ಶೈಲಿ ಲಲಿತವಾಗಿದೆ. ಇದರಲ್ಲಿ ಕವಿಯು ಬಾಣನ ಕಾದಂಬರಿಯನ್ನೂ ಹರಿಚಂದ್ರನ ಜೀವಂಧರ ಚರಿತ ಚಂಪೂವನ್ನೂ ಅನುಕರಣಮಾಡಿದ್ದಾನೆ. ಆದ್ದರಿಂದ ಅವುಗಳ ಭಾವಗಳೂ ಎಷ್ಟೋ ಪದ ಸಮೂಹಗಳೂ ಅದೇ ಧಾಟಿಯಲ್ಲಿ ಗದ್ಯಚಿಂತಾಮಣಿಯಲ್ಲಿ ಕಂಡುಬರುತ್ತವೆ. ಜೀವಂಧರನಿಗೆ ಅವನ ಗುರು ಮಾಡಿದ ಉಪದೇಶವು ಕಾದಂಬರಿಯಲ್ಲಿರುವ ಶುಕನಾಸೋಪದೇಶದ ಮಾದರಿಯಲ್ಲೇ ಇದೆ.

### ಇತರ **ಗದ್ಯಕಾವ್ಯಗಳು** (ಕ್ರಿ.ಶ. ೧೪ರಿಂದ ೧೭ನೆಯ ಶತಮಾನ)

**ಕೃಷ್ಣಚರಿತವು** ಬಾಲಭಾರತವನ್ನು ಬರೆದ ಅಗಸ್ತ್ಯನಿಂದ ಕ್ರಿ.ಶ. ೧೩೨೦ ರಲ್ಲಿ ರಚಿತವಾಯಿತು. ೧೫ನೆಯ ಶತಮಾನದ **ವೇಮಭೂಪಾಲಚರಿತದ** ವಿಚಾರವಾಗಿ (ಪುಟ ೮೯ರಲ್ಲಿ) ಈಗಾಗಲೇ ಹೇಳಿದ್ದೇವೆ. **ಮುದ್ರಾರಾಕ್ಷಸಪೂರ್ವಸಂಕಥಾನಕ**ವೆಂಬ ಸುಪ್ರಸಿದ್ಧ ಮುದ್ರಾರಾಕ್ಷಸ ನಾಟಕದ ಗದ್ಯ ರೂಪವು ೧೭ನೆಯ ಶತಮಾನದ ಅನಂತಶರ್ಮನಿಂದ ವಿರಚಿತವಾದುದು. ಈ ಕವಿಗಳಲ್ಲಾಗಲೀ ಇತರ ಗದ್ಯಲೇಖಕರಲ್ಲಾಗಲಿ ಕಂಡುಬರುವುದು ಬಾಣನ ಶೈಲಿಯ ಅಂಧಾನುಕರಣ ಮಾತ್ರ.

# ಅಧ್ಯಾಯ ೬

## ಜನಪ್ರಿಯ ಕಥೆ ಮತ್ತು ನೀತಿಬೋಧಕ ಕಥೆ

ಕವಿಕಲ್ಪಿತವಾದ ವೃತ್ತಾಂತವುಳ್ಳ ಗದ್ಯಕಾವ್ಯವೇ 'ಕಥಾ' ಎಂದು ಹಿಂದೆಯೇ ಹೇಳಿದೆ. ಜನಪ್ರಿಯ ಕಥೆಯಲ್ಲೂ ನೀತಿಬೋಧಕ ಕಥೆಯಲ್ಲೂ ಕೂಡ ವಾಸ್ತವವಾದ ಅಂಶಗಳಿರುವುದಿಲ್ಲ. ಇವುಗಳ ವಸ್ತುವೂ ಕವಿ ಕಲ್ಪಿತವಾದುದೇ. ಇಂತಹ ಕಥೆಗಳು ಭಾರತದೇಶದಲ್ಲಿ ಅನಾದಿಕಾಲದಿಂದಲೂ ಬಳಕೆಯಲ್ಲಿವೆ. ಮನುಷ್ಯರು, ದೇವತೆಗಳು, ರಾಕ್ಷಸರು, ಭೂತಭೇತಾಳಪಿಶಾಚಾದಿಗಳು ಮೃಗಪಕ್ಷಿಗಳು ಇಂತಹ ಕಥೆಗಳಲ್ಲಿ ಕಂಡುಬರುವ ಪಾತ್ರಗಳು. ಕಥೆಗಳು ಭೂತ ಭವಿಷ್ಯತ್ ವರ್ತಮಾನ ಕಾಲಗಳಿಗೆ ಸಂಬಂಧಿಸಿದಂತಿದ್ದು ಭೂಮಿಯಮೇಲೂ ಅಂತರಿಕ್ಷದಲ್ಲೂ ಪಾತಾಳದಲ್ಲೂ ಅಥವಾ ಇತರ ಲೋಕಗಳಲ್ಲೂ ನಡೆದಂತೆ ನಿರೂಪಿತವಾಗಿರುವುದು ಈ ಕಥೆಗಳ ವೈಲಕ್ಷಣ್ಯ. ಮೊದಲೇ ಇವೆಲ್ಲ ಕಟ್ಟು ಕಥೆಗಳು. ಇಂತಹ ಕಥೆಗಳಿಗೆ ಯಾವ ವಿಧವಾದ ನಿಯಮಗಳಾಗಲಿ ಎಲ್ಲೆ ಕಟ್ಟಾಗಲಿ ಇಲ್ಲ. ಆದ್ದರಿಂದ ಕಥೆ ಹೇಳುವವನ ಕಲ್ಪನಾಶಕ್ತಿ ಹೇಗೆ ಹೇಗೆ ಬೆಳೆಯುತ್ತದೋ ಸಾಗುತ್ತದೋ ಹಾಗೆ ಹಾಗೆ ಕಥೆಯೂ ಭೂಲೋಕದಿಂದ ಅಂತರಿಕ್ಷಕ್ಕೆ ಅಥವಾ ಸ್ವರ್ಗಲೋಕಕ್ಕೆ ಅಲ್ಲಿಂದ ಪಾತಾಳಕ್ಕೆ ಹೋಗಿಬಂದು ನಾನಾ ಮಟ್ಟದ ಜೀವಿಗಳನ್ನು ಕಲೆಹಾಕಿ ಬೇರ್ಪಡಿಸಿ ಮುಂದುವರಿಯುತ್ತದೆ. ಕಥೆ ಸ್ವಾರಸ್ಯವಾಗಿರಬೇಕೆಂಬುದರ ಮೇಲೆಯೇ ಜನಪ್ರಿಯ ಕಥೆಗಳನ್ನು ರಚಿಸುವವನ ದೃಷ್ಟಿ. ಕಥೆ ನೀತಿಬೋಧಕವಾಗಿರಬೇಕೆಂಬುದೇ ನೀತಿ ಕಥೆಗಳನ್ನು ರಚಿಸುವವನ ಪ್ರಧಾನೋದ್ದೇಶ. ಇತರ ರಚನಾವಿಧಾನಗಳು ಪ್ರಾಯಃ ಎರಡಕ್ಕೂ ಸಮಾನ. ಎರಡೂ ಗದ್ಯದಲ್ಲೇ ಬರೆಯಲ್ಪಡುತ್ತಿದ್ದುವು. ಆದರೆ ನೀತಿಕಥೆಗಳಲ್ಲಿ ನೀತಿಬೋಧೆಯನ್ನು ವ್ಯಾಪಕವಾಗಿಯೂ ಪರಿಣಾಮಕಾರಿಯಾಗಿಯೂ ಮಾಡುವ ಉದ್ದೇಶದಿಂದ ಕಥಾನಿರೂಪಣೆಯ ಮಧ್ಯೆ ಪುರಾಣೇತಿಹಾಸ ಸ್ಮೃತಿ ಮುಂತಾದುವುಗಳಲ್ಲಿ ಪ್ರತಿಪಾದಿತವಾಗಿರುವ ನೀತಿ ಅಥವಾ ಧರ್ಮಬೋಧಕ ವಿಚಾರಗಳನ್ನೊಳಗೊಂಡ ಆದೇ ಶ್ಲೋಕಗಳನ್ನೋ ಅಥವಾ ಸುಭಾಷಿತದ ರೀತಿಯಲ್ಲಿ ಸ್ವರಚಿತವಾದ ಶ್ಲೋಕಗಳನ್ನೋ ಸೇರಿಸುವ ಪದ್ಧತಿ ಬಳಕೆಗೆ ಬಂದಿರುವುದು ಕಾಣಿಸುತ್ತದೆ. ಜನಪ್ರಿಯ ಕಥೆ

ಗಳು ಬಹಳ ಕಾಲದವರೆಗೆ ಒಂದೇ ರೀತಿಯಲ್ಲಿ ರಚಿತವಾಗುತ್ತಿದ್ದು ಜೈನಬೌದ್ಧ ಲೇಖಕರಿಗೆ ತಮ್ಮ ತಮ್ಮ ಸಿದ್ಧಾಂತಗಳನ್ನು, ಜಾತಕಾದಿ ಕಥೆಗಳನ್ನು ರಚಿಸಿ, ಆ ಮೂಲಕ ಜನಸಾಮಾನ್ಯರಲ್ಲಿ ಹರಡಲು ಸ್ಫೂರ್ತಿ ನೀಡಿದುವೆಂಬುದರಲ್ಲಿ ಸಂದೇಹವಿಲ್ಲ. ಜನಪ್ರಿಯಕಥಾಸಾಹಿತ್ಯವು ಈ ರೀತಿ ಮತಬೋಧೆಯ ಅಡ್ಡ ದಾರಿ ಹಿಡಿಯದಿದ್ದರೆ, ಸಂಸ್ಕೃತದಲ್ಲಿ ಕಥಾಸಾಹಿತ್ಯ ಅಪಾರವಾಗಿ ಬೆಳೆಯುತ್ತಿತ್ತೆಂದು ಧಾರಾಳವಾಗಿ ಹೇಳಬಹುದು. ಜನಪ್ರಿಯ ಕಥೆಗಳು ಮೊದಮೊದಲು ಜನಸಾಮಾನ್ಯರ ಭಾಷೆಯಾದ ಪ್ರಾಕೃತದಲ್ಲಿ—ಗದ್ಯರೂಪವಾಗಿ—ರಚಿತವಾಗುತ್ತಿತ್ತೆಂದು ಹೇಳಬೇಕು. ಗುಣಾಢ್ಯನ ಬೃಹತ್ಕಥೆ ಪೈಶಾಚೀ (ಪ್ರಾಕೃತ ಪ್ರಭೇದ) ಭಾಷೆಯಲ್ಲಿ ರಚಿತವಾಗಿದ್ದುದು ಈ ಮಾತನ್ನು ಪುಷ್ಟೀಕರಿಸುತ್ತದೆ. ನೀತಿಬೋಧಕಕಥೆಗಳಲ್ಲಿ ಹೇರಳವಾದ ಉಪಕಥೆಗಳು ಸೇರಿಕೊಂಡಿದ್ದುವೆಂದೂ ಜನಪ್ರಿಯ ಕಥೆಗಳಲ್ಲಿ ಕಥಾವ್ಯೂಹಗಳು ಒಂದರೊಡನೊಂದು ಹೆಣೆದುಕೊಂಡಿದ್ದುವೆಂದೂ ತೋರುತ್ತದೆ.

ಸಂಸ್ಕೃತದಲ್ಲಿ ರಚಿತನಾಗುತ್ತಿದ್ದ ಕಥೆಗಳ ಶೈಲಿಯೇ ಇತರ ದೇಶದ ಲೇಖಕರಿಂದಲೂ ಅನುಕರಣಮಾಡಲ್ಪಡುತ್ತಿದ್ದುವು. ಅರೇಬಿಯನ್ ನೈಟ್ಸ್ ಕಥೆಗಳನ್ನು ಇದಕ್ಕೆ ನಿದರ್ಶನವಾಗಿ ಕೊಡಬಹುದು. ಕಾಲಕ್ರಮದಲ್ಲಿ ಜನಪ್ರಿಯ ಕಥೆಗಳು ಮತಬೋಧಕಕಥೆಗಳಾಗಿ ಮಾರ್ಪಾಟಾದಂತೆಯೇ ನೀತಿಬೋಧಕ ಕಥೆಗಳೂ ತಮ್ಮ ಕಥಾರೂಪವನ್ನು ದೂರಮಾಡಿ ಕೇವಲ ಪದ್ಯಾತ್ಮಕವಾದ ನೀತಿಕಾವ್ಯಗಳಾಗಿ ರೂಪಾಂತರ ಹೊಂದಿದುವು. ಪಂಚತಂತ್ರದ ಕಾಲದಿಂದೀಚೆಗೆ ನೀತಿಬೋಧಕ ಕಥೆಗಳು ಸ್ವತಂತ್ರವಾಗಿ ರಚಿತವಾಗದಿರುವುದಕ್ಕೆ ಇದೇ ಕಾರಣ.

## ಜನಪ್ರಿಯ ಕಥೆಗಳು

### ಗುಣಾಢ್ಯನ ಬೃಹತ್ಕಥೆ (ಕ್ರಿ.ಶ. ೧ನೆಯ ಶತಮಾನ)

ನಮಗೆ ತಿಳಿದಿರುವ ಜನಪ್ರಿಯ ಕಥೆಗಳಲ್ಲಿ ಗುಣಾಢ್ಯನ ಬೃಹತ್ಕಥೆಯೇ ಅತ್ಯಂತ ಪ್ರಾಚೀನ. ಆದರೆ ಆ ಬೃಹತ್ಕಥೆಯು ಈಗ ಲುಪ್ತವಾಗಿಹೋಗಿದೆ. ಸುಬಂಧು, ಬಾಣ, ದಂಡಿ ಮುಂತಾದ ಕವಿಗಳು ಬೃಹತ್ಕಥೆಯನ್ನು ನಿರ್ದೇಶಿಸಿದ್ದಾರೆ. ಅದರೊಳಗಿನ ಉದಯನ ಚರಿತವನ್ನು ಭಾಸ ಕಾಳಿದಾಸಾದಿಗಳು



ತಮ್ಮ ಕೃತಿಗಳಲ್ಲಿ ನಿರೂಪಿಸಿದ್ದಾರೆ ಅಥವಾ ಬಳಸಿಕೊಂಡಿದ್ದಾರೆ. ಆಂಧ್ರಭೃತ್ಯವಂಶದ ಶಾತವಾಹನನೆಂಬುವವನನ್ನು ಗುಣಾಢ್ಯನ ಆಶ್ರಯದಾತನೆಂದು ಸೋಮದೇವನು ಹೇಳಿದ್ದಾನೆ. ಈ ಕಾರಣಗಳಿಂದ ಬೃಹತ್ಕಥೆಯು ಕ್ರಿ.ಶ. ಒಂದನೆಯ ಶತಮಾನದಲ್ಲಿ ರಚಿತವಾಗಿದ್ದಿರಬೇಕೆಂದು ಹೇಳಬಹುದು. ಗುಣಾಢ್ಯನ ಬೃಹತ್ಕಥೆಯಲ್ಲಿ ೧೮ ಲಂಬಕಗಳೂ ಒಟ್ಟು ಒಂದು ಲಕ್ಷ ಶ್ಲೋಕಗಳೂ ಇದ್ದುವೆಂದು ನಂಬಲಾಗಿದೆ. ಈ ಬೃಹತ್ಕಥೆಯ ರಚನೆಯ ಬಗ್ಗೆ ಅನೇಕ ಕಥೆಗಳು ಹುಟ್ಟಿಕೊಂಡಿವೆ. ಆ ಪೈಕಿ ಸೋಮದೇವನು ತನ್ನ ಕಥಾಸರಿತ್ಸಾಗರದಲ್ಲಿ ಹೇಳಿರುವ ಕಥೆ ಹೀಗಿದೆ —

ಸಪ್ತವಿದ್ಯಾಧರಚಕ್ರವರ್ತಿಗಳ ಕಥೆಯನ್ನು ಒಂದು ದಿನ ಶಿವನು ಏಕಾಂತದಲ್ಲಿ ಪಾರ್ವತಿಗೆ ಹೇಳುತ್ತಿದ್ದುದನ್ನು ಪುಷ್ಪದಂತನೆಂಬ ಸೇವಕನು ಮರೆಯಲ್ಲಿದ್ದು ಕೇಳಿದ್ದಲ್ಲದೆ ತನ್ನ ಹೆಂಡತಿಯಾದ ಜಯಾ ಎಂಬುವಳಿಗೆ ಅದೆಲ್ಲವನ್ನೂ ತಿಳಿಸಿದನು. ಜಯಾ ಪಾರ್ವತಿಯ ಚೇಟಿ. ಅವಳು ತನ್ನ ಸಖಿಯರಿಗೆಲ್ಲ ಆ ಕಥೆಯನ್ನು ಹೇಳಿಬಿಟ್ಟಳು. ಕ್ರಮೇಣ ಇದು ಪಾರ್ವತಿಯ ಕಿವಿಗೇ ಬಿತ್ತು. ಆಗ ಅವಳು ಪುಷ್ಪದಂತನನ್ನು ಭೂಲೋಕದಲ್ಲಿ ಹುಟ್ಟುವಂತೆ ಶಪಿಸಿಬಿಟ್ಟಳು. ಮಧ್ಯೆ ಪ್ರವೇಶಿಸಿದ ಅವನ ಸೋದರ ಮಾಲ್ಯವಂತನೂ ಅದೇ ರೀತಿ ಶಪ್ತನಾದನು. ಆದರೆ ಜಯೆಯು ಪಾರ್ವತಿಯಲ್ಲಿ ಮೊರೆಯಿಡಲು ಅದನ್ನು ಮನ್ನಿಸಿ, ಪುಷ್ಪದಂತನು ತಾನು ಕೇಳಿದ್ದ ಕಥೆಗಳನ್ನು ವಿಂಧ್ಯಾಟವಿಯಲ್ಲಿ ವಾಸಿಸುತ್ತಿದ್ದ ಕಾಣಭೂತಿಯೆಂಬ ಪಿಶಾಚಕ್ಕೆ ಹೇಳಿ ತಿಳಿಸಿದರೆ ಅವನು ಶಾಪದಿಂದ ಬಿಡುಗಡೆ ಹೊಂದಬಹುದೆಂದೂ, ಕಾಣಭೂತಿಯಿಂದ ಅದೇ ಕಥೆಗಳನ್ನು ಮಾಲ್ಯವಂತನು ಕೇಳಿ ತಿಳಿದುಕೊಂಡು ಅದನ್ನು ಭೂಲೋಕದಲ್ಲಿ ಪ್ರಚುರಪಡಿಸಿದರೆ ಅವನೂ ಶಾಪವಿಮುಕ್ತನಾಗುವುದಾಗಿಯೂ ಪಾರ್ವತಿ ಜಯೆಗೆ ತಿಳಿಸಿದಳು. ಅದರಂತೆ ಪುಷ್ಪದಂತನು ನವನಂದರ ಕೊನೆಯ ಅಮಾತ್ಯನಾದ ವರರುಚಿಯಾಗಿ ಭೂಲೋಕದಲ್ಲಿ ಹುಟ್ಟಿದನು; ಕೊನೆಗೆ ಅಧಿಕಾರ ನೀಗಿ ವಿಂಧ್ಯಾಟವಿಗೆ ಹೋಗಿ ಕಾಣಭೂತಿಯನ್ನು ಸಂಧಿಸಿ ಅವನಿಗೆ ಸಪ್ತವಿದ್ಯಾಧರ ಚಕ್ರವರ್ತಿಗಳ ಕಥೆಯನ್ನು ಹೇಳಿ ಶಾಪದಿಂದ ಬಿಡುಗಡೆ ಹೊಂದಿದನು. ಮಾಲ್ಯವಂತನು ಗುಣಾಢ್ಯನಾಗಿ ಹುಟ್ಟಿ ಪ್ರತಿಷ್ಠಾನದ ಶಾತವಾಹನನ ಅಮಾತ್ಯನಾದನು; ರಾಜನಿಗೆ ಸಂಸ್ಕೃತ ಕಲಿಸುವ ವಿಚಾರದಲ್ಲಿ ತನ್ನ ಪ್ರತಿಕಕ್ಷಿಯೊಡನೆ ವಿವಾದಮಾಡಿ ಸಾಹಿತ್ಯೋದ್ದೇಶಗಳಿಗಾಗಿ ತಾನು ಸಂಸ್ಕೃತವನ್ನು ಪಯೋಗಿಸುವುದಿಲ್ಲವೆಂದು ಶಪಥಮಾಡಿ ರಾಜಸೇವೆಯನ್ನು ತ್ಯಜಿಸಿಬಿಟ್ಟನು. ಅಲ್ಲಿಂದ

ಅವನು ವಿಂಧ್ಯಾಟವಿಗೆ ಹೋಗಿ ಕಾಣಭೂತಿಯಿಂದ ಸಪ್ತವಿದ್ಯಾಧರ ಚಕ್ರವರ್ತಿಗಳ ಕಥೆಗಳನ್ನು ಕೇಳಿ ತಿಳಿದುಕೊಂಡು ಅವನ್ನು ಪೈಶಾಚೀ (ಪ್ರಾಕೃತ) ಭಾಷೆಯಲ್ಲಿ ಬರೆದಿಟ್ಟನು. ಈ ಕೃತಿಯನ್ನು ಗುಣಾಢ್ಯನ ಶಿಷ್ಯರು ರಾಜನಿಗೆ ತೋರಿಸಿದಾಗ ಅವನು ಅದನ್ನು ಅಲ್ಲಗಳೆಯಲು ಗುಣಾಢ್ಯನು ಆ ಏಳು ಕಥೆಗಳನ್ನೂ ಒಂದೊಂದಾಗಿ ಅಗ್ನಿಯೊಳಕ್ಕೆ ಎಸೆಯಲಾರಂಭಿಸಿದನು. ಶಿಷ್ಯರ ಬಲವಂತದಮೇಲೆ ಕೊನೆಯ ಕಥೆಯನ್ನು ಮಾತ್ರ ಬೆಂಕಿಗೆ ಹಾಕದೆ ಉಳಿಸಿದನು. ಹೀಗೆ ಉಳಿದ ಕಥೆಯೇ ಬೃಹತ್ಕಥೆ. ಕೌಶಾಂಬಿಯ ಉದಯನ ರಾಜನ ಮಗ ನರವಾಹನದತ್ತನ ಸಾಹಸಗಳ ಕಥೆಯೇ ಬೃಹತ್ಕಥೆಯ ವಸ್ತು. ನರವಾಹನನು ಮದನಮಂಜೂಷಿಕಾ ಎಂಬ ವಿದ್ಯಾಧರ ರಾಜಕುಮಾರಿಯನ್ನು ಮದುವೆಯಾದುದು, ಮಾನಸವೇಗನು ಅವಳನ್ನು ಅಪಹರಿಸಿದುದು, ತನ್ನ ಗೆಳೆಯನಾದ ಗೋಮುಖನ ಸಹಾಯದಿಂದ ನರವಾಹನನು ಅವಳನ್ನು ಪುನಃ ಪಡೆದು ವಿದ್ಯಾಧರ ಚಕ್ರವರ್ತಿಯಾದುದು — ಇದೇ ಕಥೆಯ ಸ್ಥೂಲರೂಪ. ಇದು ತೀರ ಕಮ್ಮಿಯಾಗಿ ಕಂಡರೂ ಉಪಕಥೆಗಳೂ ಅವುಗಳ ವ್ಯೂಹಗಳೂ ಸೇರಿಕೊಂಡು ಪ್ರಧಾನಕಥೆಯು ಜಟಿಲವಾಗಿ ಬೃಹದಾಕಾರ ತಾಳಿರುವಂತೆ ಕಾಣಿಸುತ್ತದೆ.

ಪೈಶಾಚೀ ಭಾಷೆಯಲ್ಲಿ ಗದ್ಯಾತ್ಮಕವಾಗಿ ರಚಿತವಾದ ಬೃಹತ್ಕಥೆ ಈಗ ಲುಪ್ತವಾಗಿಬಿಟ್ಟದೆಯೆಂದು ಮೇಲೆಯೇ ಹೇಳಿದ್ದೇವೆ. ಆದರೆ ಈ ಕಥೆಯು ಪದ್ಯಾತ್ಮಕವಾದ ಮೂರು ಸಂಗ್ರಹಗಳ ರೂಪದಲ್ಲಿ ಉಪಲಬ್ಧವಾಗಿವೆ. ಇವುಗಳ ರಚನಾಕಾಲ ಕ್ರಿ.ಶ. ೯ ಮತ್ತು ೧೧ ನೆಯ ಶತಮಾನಗಳ ಮಧ್ಯದ ಅವಧಿ. ಇವುಗಳಲ್ಲಿ (೧) ಮೊದಲನೆಯದು ನೇಪಾಳದ ಬುಧಸ್ವಾಮಿಯಿಂದ ೯ ನೆಯ ಶತಮಾನದಲ್ಲಿ ರಚಿತವಾದ ಬೃಹತ್ಕಥಾಶ್ಲೋಕ ಸಂಗ್ರಹ (೨) ಎರಡನೆಯದು ೧೦೪೭ರಲ್ಲಿ ಕಾಶ್ಮೀರದ ಕ್ಷೇಮೇಂದ್ರನು ರಚಿಸಿದ ಬೃಹತ್ಕಥಾಮಂಜರೀ ಮತ್ತು (೩) ಮೂರನೆಯದು ೧೦೭೦ರಲ್ಲಿ ಕಾಶ್ಮೀರದ ಸೋಮದೇವನಿಂದ ರಚಿತವಾದ ಕಥಾಸರಿತ್ಸಾಗರ. ಇವು ಮೂರೂ ಸಂಸ್ಕೃತದಲ್ಲಿವೆ; ಪದ್ಯಾತ್ಮಕವಾಗಿವೆ. ಮೂಲ ಬೃಹತ್ಕಥೆಯು ಗೋದಾವರೀ ತೀರದಲ್ಲಿರುವ ಮತ್ತು ಗುಣಾಢ್ಯನು ವಾಸಿಸುತ್ತಿದ್ದ ಪ್ರತಿಷ್ಠಾನದ ನೆರೆಯ ವಿಂಧ್ಯಪ್ರದೇಶದಲ್ಲಿ ಬಳಕೆಯಲ್ಲಿದ್ದ ಪ್ರಾಕೃತಪ್ರಭೇದವಾದ ಪೈಶಾಚಿಭಾಷೆಯಲ್ಲಿ ರಚಿತವಾಗಿತ್ತೆಂದು ನಂಬಲಾಗಿದೆ.



ಬೃಹತ್ಕಥೆಯು ಪಂಡಿತಪಾಮರರೆಲ್ಲರ ಮೆಚ್ಚುಗೆಯನ್ನು ಗಳಿಸಿ ಅಲ್ಲಿಂದೀಚೆನ ಕವಿಪರಂಪರೆಗಳಿಗೆ ಸ್ಫೂರ್ತಿನೀಡಿದ್ದಲ್ಲದೆ ಉಪಜೀವ್ಯ ಕಾವ್ಯವಾಗಿ ಪ್ರಸಿದ್ಧಿಗೆ ಬಂದಿತು; ಈ ಕಾರಣದಿಂದಾಗಿ ಗೋವರ್ಧನನು ಗುಣಾಢ್ಯನನ್ನು ವ್ಯಾಸ ವಾಲ್ಮೀಕಿಗಳ ಪಂಕ್ತಿಗೇ ಸೇರಿಸಿ ಪ್ರಶಂಸಿಸಿದ್ದಾನೆ.

**ಬೃಹತ್ಕಥಾ ಶ್ಲೋಕಸಂಗ್ರಹವು** ಕ್ರಿ.ಶ. ೯ನೆಯ ಶತಮಾನದಲ್ಲಿದ್ದನೆಂದು ನಂಬಲಾಗಿರುವ ಬುಧಸ್ವಾಮಿಯಿಂದ ರಚಿತವಾದ ಪದ್ಯಾತ್ಮಕ ಕಥಾ ಸಂಗ್ರಹ. ಇದರ ಮಾತೃಕೆಯು ನೇಪಾಳದಲ್ಲಿ ಕ್ರಿ.ಶ. ೧೮೯೩ರಲ್ಲಿ ದೊರಕಿತು. ಆದ್ದರಿಂದ ಇದನ್ನು ಬೃಹತ್ಕಥೆಯ ನೇಪಾಳೀ ಪಾಠವೆಂದು ಪರಿಗಣಿಸಲಾಗಿದೆ. ಈಗ ಉಪಲಬ್ಧವಾಗಿರುವ ರೂಪದಲ್ಲಿ ಇದು ಅಸಮಗ್ರ. ಇದರಲ್ಲಿ ಒಟ್ಟು ೪೫೩೯ ಶ್ಲೋಕಗಳಿರುವ ೨೮ ಸರ್ಗಗಳು ಮಾತ್ರ ಇವೆ. ಇಷ್ಟರೊಳಗಿನ ಕಥಾಭಾಗವನ್ನು ಗಮನಿಸಿ ಒಟ್ಟು ಗ್ರಂಥದಲ್ಲಿ ೨೫೦೦೦ ಶ್ಲೋಕಗಳಾದರೂ ಇದ್ದಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಇದರಲ್ಲಿ ವಿಸ್ತೃತ ವರ್ಣನೆಗಳಿಲ್ಲದಿರುವುದೂ ಹೇರಳವಾದ ಪ್ರಾಕೃತಪದಪ್ರಯೋಗಗಳನ್ನೊಳಗೊಂಡಿರುವುದೂ ಪ್ರಾಯಃ ಇದು ಮೂಲ ಬೃಹತ್ಕಥೆಯ ಸಂಸ್ಕೃತರೂಪವೇ ಇರಬಹುದೆಂಬ ಅಭಿಪ್ರಾಯಕ್ಕೆ ಪೋಷಕವಾಗಿದೆ. ಕೆಲವು ವಿದ್ವಾಂಸರಂತು ಕ್ಷೇಮೇಂದ್ರನೂ ಸೋಮದೇವನೂ ಈ ಶ್ಲೋಕಸಂಗ್ರಹದ ಆಧಾರದ ಮೇಲೆಯೇ ತಮ್ಮ ಬೃಹತ್ಕಥಾಮಂಜರಿ-ಕಥಾಸರಿತ್ಸಾಗರಗಳನ್ನು ರಚಿಸಿದ್ದಾರೆಂದು ಭಾವಿಸುತ್ತಾರೆ.

**ಬೃಹತ್ಕಥಾಮಂಜರಿಯು** ಗುಣಾಢ್ಯನ ಬೃಹತ್ಕಥೆಯ ಮತ್ತೊಂದು ಪದ್ಯಾತ್ಮಕ ಸಂಗ್ರಹ. ಇದನ್ನು ಕಾಶ್ಮೀರದ ಕವಿ ಕ್ಷೇಮೇಂದ್ರನು ರಚಿಸಿದ್ದಾನೆ. ಇದರಲ್ಲಿ ೧೮ ಲಂಬಕಗಳಾಗಿ ವಿಭಕ್ತವಾದ ೭೫೦೦ ಶ್ಲೋಕಗಳಿವೆ. ಈ ಕವಿಯ ರಾಮಾಯಣಮಂಜರೀ ಭಾರತಮಂಜರಿಗಳಂತೆಯೇ ಈ ಬೃಹತ್ಕಥಾಮಂಜರಿಯೂ ತೀರ ಸಂಗ್ರಹರೂಪವಾಗಿದ್ದು ಕಥಾನಿರೂಪಣೆಯಲ್ಲಿ ಸ್ಪಷ್ಟತೆಯೂ ಇಲ್ಲ, ತೀವ್ರತೆಯೂ ಇಲ್ಲ.

ಈ ಬೃಹತ್ಕಥಾಮಂಜರಿಗೂ ಬುಧಸ್ವಾಮಿಯ ಶ್ಲೋಕಸಂಗ್ರಹಕ್ಕೂ ಬಹಳ ವ್ಯತ್ಯಾಸವಿದೆ. ಶ್ಲೋಕಸಂಗ್ರಹದಲ್ಲಿಲ್ಲದ ಅನೇಕ ಕಥೆಗಳು ಈ ಮಂಜರಿಯಲ್ಲಿರುವುದು ಗಮನಾರ್ಹ. ಉದಾಹರಣೆಗೆ ವಿಕ್ರಮ ಮತ್ತು ಭೇತಾಳನ ಕಥೆ ಈ ಮಂಜರಿಯಲ್ಲಿದೆ, ಶ್ಲೋಕಸಂಗ್ರಹದಲ್ಲಿಲ್ಲ.

ಕ್ಷೇಮೇಂದ್ರನು ಬಹು ವಿದ್ಯಾಪಾರಂಗತ. ಈತನು ಮೂರು ಮಂಜರಿಗಳನ್ನಲ್ಲದೆ ಇನ್ನೂ ೪ಂಕ್ಕಿಂತ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾನೆಂದು ನಂಬಲಾಗಿದೆ. (ಪುಟ ೭೦-೭೧ ನೋಡಿ)

**ಕಥಾಸರಿತ್ಸಾಗರವೂ** ಬೃಹತ್ಕಥೆಯ ಮತ್ತೊಂದು ಪದ್ಯಾತ್ಮಕ ಸಂಗ್ರಹ. ಇದನ್ನು ಕಾಶ್ಮೀರದ ಸೋಮದೇವನು ಕ್ರಿ.ಶ. ೧೦೭೦ರ ಸುಮಾರಿನಲ್ಲಿ ರಚಿಸಿದನು. ಬೃಹತ್ಕಥಾಮಂಜರಿಯಲ್ಲಿರುವಂತೆಯೇ ಇದರಲ್ಲೂ ೧೮ ಲಂಬಕಗಳಿವೆ. ಕಥಾಸರಿತ್ಸಾಗರ ಎಂಬ ಹೆಸರಿನ ಸಾರ್ಥಕತೆಗಾಗಿ ಈ ಲಂಬಕಗಳನ್ನು ೧೨೪ ತರಂಗಗಳನ್ನಾಗಿ ಪುನಃ ವಿಂಗಡಿಸಲಾಗಿದೆ. ಇದರಲ್ಲಿ ಒಟ್ಟು ೨೪೦೦೦ ಶ್ಲೋಕಗಳಿವೆ. ನೇಪಾಳದ ಶ್ಲೋಕಸಂಗ್ರಹದಲ್ಲಿಲ್ಲದ ಅನೇಕ ಕಥೆಗಳು ಈ ಕಥಾಸರಿತ್ಸಾಗರದಲ್ಲೂ ಇವೆಯಲ್ಲದೆ ಬೌದ್ಧಜಾತಕಕಥೆಗಳೂ ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ. ಗುಣಾಢ್ಯನು ಬೃಹತ್ಕಥೆಯನ್ನು ರಚಿಸಿದ ಸಂದರ್ಭವು ಕಥಾಸರಿತ್ಸಾಗರದಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆ. (ಪುಟ ೧೦೩ ನೋಡಿ). ಆರು ವಿದ್ಯಾಧರ ಚಕ್ರವರ್ತಿಗಳ ಕಥೆಗಳೂ ಅಗ್ನಿಯಲ್ಲಿ ದಗ್ಧವಾಗಿ ಹೋದಬಳಿಕ ಉಳಿದುದು ಏಳನೆಯ ಕಥೆಯಾದ ನರವಾಹನದತ್ತ ಚರಿತವೆಂಬ ಒಂದು ಲಕ್ಷ ಶ್ಲೋಕಗಳ ಗ್ರಂಥವೆಂದು ಸೋಮದೇವನು ಹೇಳಿದ್ದಾನೆ. ಸೋಮದೇವನ ಶೈಲಿ ಲಲಿತವಾಗಿದೆ, ಕಥಾನಿರೂಪಣೆ ಸ್ಪಷ್ಟವಾಗಿಯೂ ಸ್ವಾರಸ್ಯಪೂರ್ಣವಾಗಿಯೂ ಇದೆ.

### ಅವದಾನಗಳು (ಕ್ರಿ.ಶ. ೧ನೆಯ ಶತಮಾನ ?)

ಬೌದ್ಧಸಾಹಿತ್ಯದಲ್ಲಿ **ಅವದಾನ** ಶಬ್ದಕ್ಕೆ 'ವೀರೋಚಿತಕೃತಿ' ಎಂದರ್ಥ. ಆದ್ದರಿಂದಲೇ ಪ್ರಸಿದ್ಧ ಪುರುಷನೊಬ್ಬನು ಈ ಜನ್ಮದಲ್ಲಿ ಪ್ರಸಿದ್ಧನಾಗಿರುವುದಕ್ಕೆ ಅವನು ಹಿಂದಿನ ಜನ್ಮದಲ್ಲಿ ಮಾಡಿದ ವೀರೋಚಿತ ಕೃತಿಗಳೇ ಕಾರಣವೆಂಬುದನ್ನು ಪ್ರತಿಪಾದಿಸುವ ಕಥೆಗಳಿಗೆ **ಅವದಾನ**ಗಳೆಂಬ ಹೆಸರಾಯಿತು. ಇವುಗಳಲ್ಲಿ 'ಕರ್ಮ' ಮತ್ತು 'ಪುನರ್ಜನ್ಮ'ಗಳ ಸಿದ್ಧಾಂತವು ಪರಿಣಾಮಕಾರಿಯಾದ ರೀತಿಯಲ್ಲಿ ನಿರೂಪಿತವಾಗಿದೆ. ಇಂತಹ ಮೂರು ಅವದಾನ ಗ್ರಂಥಗಳನ್ನು ಇಲ್ಲಿ ಉದಾಹರಿಸುತ್ತೇವೆ.

೧) **ಅವದಾನಶತಕವು** ಮೇಲೆ ಹೇಳಿದ ರೀತಿಯ ೧೦೦ ಅವದಾನ ಕಥೆಗಳನ್ನೊಳಗೊಂಡ ಗದ್ಯಪ್ರಧಾನವಾದ ಕಾವ್ಯ. ಇದರಲ್ಲಿ ಮಧ್ಯೆ ಮಧ್ಯೆ



ಸಂಸ್ಕೃತ ಮತ್ತು ಪ್ರಾಕೃತ ಶ್ಲೋಕಗಳೂ ಬರುತ್ತವೆ. ಇದನ್ನು ಬರೆದ ಕವಿಯಾರೆಂಬುದು ಸರಿಯಾಗಿ ತಿಳಿದುಬಂದಿಲ್ಲ. ಕ್ರಿ.ಶ. ೩ನೆಯ ಶತಮಾನದ ಮಧ್ಯೆ ಇದು ಚೀನಾಭಾಷೆಗೆ ಪರಿವರ್ತಿತವಾಯಿತಾದ್ದರಿಂದ ಇದರ ರಚನಾ ಕಾಲ ಕ್ರಿ.ಶ. ೧ನೆಯ ಶತಮಾನವಿರಬೇಕೆಂದು ಭಾವಿಸಲಾಗಿದೆ

೨) **ದಿವ್ಯಾವದಾನವೂ** ಎಲ್ಲ ರೀತಿಯಲ್ಲೂ ಅವದಾನ ಶತಕದಂತೆಯೇ ಇರುವ ಅವದಾನಕಥೆಗಳ ಸಂಕಲನ. ಈ ಕಥೆಗಳ ಪೈಕಿ ಒಂದು ಕ್ರಿ.ಶ. ೨೬೫ರಲ್ಲಿ ಚೀನಾಭಾಷೆಗೆ ಪರಿವರ್ತಿತವಾಯಿತಾದ್ದರಿಂದ ಈ ಸಂಕಲನದ ರಚನಾಕಾಲವೂ ಸುಮಾರು ಕ್ರಿ.ಶ. ಮೊದಲನೆಯ ಶತಮಾನವೆನ್ನಬಹುದು.

೩) **ಅವದಾನಕಲ್ಪಲತೆಯು** ಕ್ಷೇಮೇಂದ್ರವಿರಚಿತವಾದುದು. ಇದರ ಕಾಲ ಕ್ರಿ.ಶ. ೧೦೫೦ ಎಂದು ಹೇಳಬಹುದು. ಇದರಲ್ಲಿ ೧೦೭ ಕಥೆಗಳಿವೆ. ಆ ಪೈಕಿ ಕೆಲವು ಅವದಾನಶತಕದಲ್ಲಿರುವುವೇ. (ಪುಟ ೭೧ ನೋಡಿ)

### ಬೌದ್ಧ ಜಾತಕಗಳು

ಮೇಲೆ ಹೇಳಿದ 'ಅವದಾನ'ಗಳಲ್ಲದೆ ಬೌದ್ಧರಲ್ಲಿ ಮೊದಲಿನಿಂದಲೂ ಜನಪ್ರಿಯವಾದ ಅನೇಕ ಕಥೆಗಳಿದ್ದುವು. ಬುದ್ಧನ ಪೂರ್ವಜನ್ಮಗಳ ಕಥೆಗಳೇ ಅವುಗಳಲ್ಲಿ ಪ್ರಧಾನವಾದುವು. ಅವುಗಳಿಗೆ ಜಾತಕಗಳೆಂಬ ಹೆಸರೇ ಮೊದಲಿನಿಂದ ರೂಢಿಯಲ್ಲಿತ್ತೆಂದು ತೋರುತ್ತದೆ. ಇಂತಹ ಜಾತಕ ಕಥೆಗಳು ೫೦೦ಕ್ಕಿಂತ ಹೆಚ್ಚಾಗಿದ್ದಿರಬೇಕೆಂದು ನಂಬಲಾಗಿದೆ. ಈ ಜಾತಕ ಕಥೆಗಳ ಆಧಾರದ ಮೇಲೆ ಅನೇಕ ಬೌದ್ಧಕವಿಗಳು ಕಾವ್ಯಾದಿಗಳನ್ನು ರಚಿಸಿದ್ದಾರೆ.

**ಜಾತಕಮಾಲಾ** ಎಂಬುದು ಬುದ್ಧನ ಪೂರ್ವಜನ್ಮ ವೃತ್ತಾಂತಗಳಲ್ಲಿ ಮುಖ್ಯವಾದುವುಗಳನ್ನು ನಿರೂಪಿಸುತ್ತದೆ. ಇದನ್ನು ಆರ್ಯಶೂರನೆಂಬ ಕವಿ ರಚಿಸಿದ್ದಾನೆ. ಇದರಲ್ಲೂ 'ಅವದಾನ'ಗಳಲ್ಲಿರುವಂತೆಯೇ ಗದ್ಯಗಳ ನಡುವೆ ಕೆಲವು ಶ್ಲೋಕಗಳು ಬರುತ್ತವೆ. ಇದು ಕ್ರಿ.ಶ. ೪೩೪ರಲ್ಲಿ ಚೀನಾಭಾಷೆಗೆ ಪರಿವರ್ತಿತವಾಯಿತು. ಆದ್ದರಿಂದ ಮೂಲಸಂಸ್ಕೃತ ಜಾತಕ ಮಾಲೆಯು ಅದಕ್ಕಿಂತ ಬಹಳ ಹಿಂದೆಯೇ ರಚಿತವಾಗಿರಬೇಕು. ಅದು ಕ್ರಿ.ಶ. ೩ನೆಯ ಶತಮಾನದಲ್ಲಿ ಬರೆಯಲ್ಪಟ್ಟಿತೆಂದು ಕೆಲವರು ಭಾವಿಸುತ್ತಾರೆ.

**ಸೂತ್ರಾಲಂಕಾರ** ಅಥವಾ **ಕಲ್ಪನಾಮಂಡಿತಕವು** ಜಾತಕ ಮತ್ತು ಅವದಾನಗಳ ಮತ್ತೊಂದು ಸಂಕಲನ. ಇದೂ ಗದ್ಯಾತ್ಮಕವಾಗಿದ್ದರೂ ಮಧ್ಯೆ

ಮಧ್ಯೆ ಪದ್ಯಗಳು ಸೇರಿವೆ. ಈ ಗ್ರಂಥವು ಅಸಮಗ್ರಸ್ಥಿತಿಯಲ್ಲಿ ದೊರೆತಿದೆ. ಇದನ್ನು ಇತ್ತೀಚಿನವರೆಗೂ ಅಶ್ವಘೋಷರಚಿತವೆಂದೇ ಭಾವಿಸಲಾಗಿತ್ತು. ಈಗ ಆದು ಅಶ್ವಘೋಷನಿಗಿಂತ ಅರ್ವಾಚೀನನಾದ ಕುಮಾರಲಾಟ ಬರೆದುದೆಂದು ಹೇಳಲಾಗುತ್ತಿದೆ.

**ವೇತಾಳಪಂಚವಿಂಶತಿ** (ಕ್ರಿ.ಶ. ೧೨ನೆಯ ಶತಮಾನ)

ಪ್ರಾಚೀನ ಜನಪ್ರಿಯಕಥೆಗಳಲ್ಲಿ ಬೃಹತ್ಕಥೆಯ ಬಳಿಕ ವೇತಾಳ ಪಂಚವಿಂಶತಿಯೇ ಉಲ್ಲೇಖಾರ್ಹವಾದುದು. ಇವೆರಡರ ನಡುವೆ ಎಷ್ಟು ಕಾಲದ ಅಂತರವಿದೆಯೆಂಬುದನ್ನು ಹೇಳಲಾಗುವುದಿಲ್ಲ. ಈ ವೇತಾಳ ಕಥೆಗಳ ಮೂಲವೂ ಬೃಹತ್ಕಥೆಯೇ ಆಗಿರಬಹುದು. ಬೃಹತ್ಕಥಾಮಂಜರಿ ಮತ್ತು ಕಥಾಸರಿತ್ಸಾಗರಗಳಲ್ಲಿ ಈ ಕಥೆಗಳಿವೆ; ಶ್ಲೋಕಸಂಗ್ರಹದಲ್ಲಿಲ್ಲ.

ವೇತಾಳಪಂಚವಿಂಶತಿಯ ಅನೇಕ ಪಾಠಗಳು ಪ್ರಚಲಿತವಾಗಿವೆ. ೧೨ನೆಯ ಶತಮಾನದ ಶಿವದಾಸ ವಿರಚಿತವಾದುದು ಗದ್ಯಪದ್ಯಾತ್ಮಕವಾಗಿದೆ. ಜಂಭಾಲದತ್ತ ಪ್ರಣೀತವಾದುದು ಬರೀ ಗದ್ಯದಲ್ಲಿದೆ. ಅಜ್ಞಾತನೊಬ್ಬನು ಬರೆದ ಗದ್ಯಕೃತಿಯೂ ಒಂದಿದೆ. ವಲ್ಲಭದೇವವಿರಚಿತವೆಂದು ಹೇಳಲಾಗುತ್ತಿರುವ ವೇತಾಳಪಂಚವಿಂಶತಿಯ ಸಂಗ್ರಹರೂಪವೂ ಒಂದಿದೆ.

ವೇತಾಳಪಂಚವಿಂಶತಿಯು ಸಂಸ್ಕೃತದಲ್ಲಿ ರಚಿತವಾಗಿರುವ ಸ್ವಾರಸ್ಯವಾದ ೨೫ ಕಥೆಗಳ ಸಂಕಲನ. ಇದರಲ್ಲಿನ ಕಥಾನಿರೂಪಣೆ ಸೊಗಸಾಗಿದೆ, ಸುವ್ಯವಸ್ಥಿತವಾಗಿದೆ. ಒಂದೊಂದು ಕಥೆಯೂ ರೋಮಾಂಚಕಾರಿಯೂ, ಕುತೂಹಲ ಜನಕವೂ, ಬುದ್ಧಿವರ್ಧಕವೂ ಆಗಿದೆ. ರಾಜಾ ವಿಕ್ರಮ (ಸೇನ)ನು ಸಿದ್ಧನೊಬ್ಬನಿಗೆ ಸಹಾಯಮಾಡಲು ಶ್ಮಶಾನದಲ್ಲಿ ವೃಕ್ಷವೊಂದರಿಂದ ನೇತಾಡುತ್ತಿದ್ದ ಒಂದು ಶವವನ್ನು ಮೌನವಾಗಿ ತಂದುಕೊಡಲು ಒಪ್ಪಿ ಪ್ರಯತ್ನಿಸುತ್ತಾನೆ. ಆದರೆ ಆ ಶವದಲ್ಲಿ ನೆಲಸಿದ್ದ ವೇತಾಳವು ವಿಚಿತ್ರವಾದ ಕಥೆಯೊಂದನ್ನು ಹೇಳುತ್ತಾ ಕೊನೆಗೆ ಬುದ್ಧಿಪರೀಕ್ಷೆ ಮಾಡುವಂತಹ ಪ್ರಶ್ನೆಯೊಂದನ್ನು ಕೇಳಿ ರಾಜನ ಮೌನಭಂಗವನ್ನು ಸಾಧಿಸಿಬಿಡುತ್ತದೆ. ರಾಜನ ಉತ್ತರವೂ ನ್ಯಾಯ ಸಮ್ಮತವಾಗಿ ಸ್ವಾರಸ್ಯವಾಗಿರುತ್ತದೆ. ವೇತಾಳವು ಅಂತಹ ೨೫ ಕಥೆಗಳನ್ನು ಹೇಳುತ್ತದೆ. ಅವುಗಳ ಸಂಕಲನವೇ ವೇತಾಳ ಪಂಚವಿಂಶತಿ. ಎಲ್ಲ ಕಥೆಗಳೂ ಸಾಹಿತ್ಯದ ದೃಷ್ಟಿಯಿಂದಲೂ ಸುಂದರವಾಗಿವೆ.



**ಸಿಂಹಾಸನ-ದ್ವಾತ್ರಿಂಶಿಕಾ**

ಸಿಂಹಾಸನದ್ವಾತ್ರಿಂಶಿಕಾ, ವಿಕ್ರಮಾರ್ಕಚರಿತ, ದ್ವಾತ್ರಿಂಶತ್ ಪುತ್ಥಳಿಕಾ—ಈ ಮೂರೂ ಒಂದೇ ಕಥೆಯ ಬೇರೆ ಬೇರೆ ಹೆಸರುಗಳು. ಇದರಲ್ಲಿ ವೇತಾಳಪಂಚವಿಂಶತಿಯ ಮಾದರಿಯ ೩೨ ಕಥೆಗಳಿವೆ. ಇದನ್ನು ಬರೆದ ಕವಿಯ ಹೆಸರಾಗಲೀ ಕಾಲವಾಗಲೀ ತಿಳಿದುಬಂದಿಲ್ಲ. ಭೂಮಿಯಲ್ಲಿ ಹೂತುಹೋಗಿದ್ದ ವಿಕ್ರಮಾದಿತ್ಯನ ಸಿಂಹಾಸನವನ್ನು ಭೋಜರಾಜನು ಅಗೆದು ಹೊರತೆಗಿಸಿ ಅದನ್ನು ಹತ್ತಲು ಬಂದಾಗ, ಆ ಸಿಂಹಾಸನದ ಹದಿನಾರು ಹಂತಗಳ ಎಡಬಲಗಳಲ್ಲಿದ್ದ ೩೨ ಪುತ್ಥಳಿಗಳಲ್ಲಿ ಒಂದೊಂದೂ ಒಂದೊಂದು ಕಥೆಯನ್ನು ಹೇಳಿ ವಿಕ್ರಮಾದಿತ್ಯನ ವೈಶಿಷ್ಟ್ಯವನ್ನು ಕೊಂಡಾಡಿ ಅಂತಹ ಅರ್ಹತೆ ಭೋಜನಲ್ಲಿದ್ದರೆ ಮಾತ್ರ ಅವನು ಅದನ್ನು ಆರೋಹಿಸಬಹುದೆಂದು ಪರ್ಯಾಯವಾಗಿ ತಿಳಿಸಿದಂತೆ ಒಟ್ಟು ಕಥೆ ರಚಿತವಾಗಿದೆ. ೩೨ ಕಥೆಗಳೂ ತುಂಬ ಸ್ವಾರಸ್ಯವಾಗಿವೆ.

ಈ ಸಿಂಹಾಸನದ್ವಾತ್ರಿಂಶಿಕೆಯ ಎರಡು ಮೂಲಪ್ರಭೇದಗಳಿವೆ—(೧) ದಾಕ್ಷಿಣಾತ್ಯ-ಪ್ರಭೇದ (೨) ಉತ್ತರದೇಶದ ಪ್ರಭೇದ. ಉತ್ತರದ ಪ್ರಭೇದದಲ್ಲೂ ಮೂರು ಬೇರೆ ಬೇರೆ ಪಾಠಗಳಿವೆ.—(೧) ಹದಿನಾಲ್ಕನೆಯ ಶತಮಾನದ ಕ್ಷೇಮಂಕರಮುನಿಯ ಜೈನಪಾಠ (೨) ವರರುಚಿ ಪ್ರಣೀತವೆನ್ನಲಾದ ಬಂಗಾಳೀ ಪಾಠ, ಮತ್ತು (೩) ಅಜ್ಞಾತ (ವಿರಚಿತ) ಪಾಠ. ದಕ್ಷಿಣದೇಶದ ಮೂಲದಲ್ಲಿ ಎರಡು ಪಾಠಗಳು ಉಪಲಬ್ಧವಾಗಿವೆ. ಎರಡಕ್ಕೂ ವಿಕ್ರಮಚರಿತವೆಂದೇ ಹೆಸರು. ಆದರೆ ಒಂದು ಗದ್ಯದಲ್ಲೂ ಮತ್ತೊಂದು ಪದ್ಯದಲ್ಲೂ ಇದೆ. ಮೂಲಪಾಠ ಹೇಗಿತ್ತೆಂಬುದನ್ನು ತಿಳಿಯಲು ಈ ಪಾಠಗಳೊಂದೂ ಸಹಕಾರಿಗಳಾಗಿಲ್ಲ.

**ಶುಕಸಪ್ತತಿ** (ಕ್ರಿ.ಶ. ೧೧ನೆಯ ಶತಮಾನ)

ಶುಕಸಪ್ತತಿಯಲ್ಲಿ ತುಂಬ ಆಕರ್ಷಕವಾದ ಎಪ್ಪತ್ತು ಕಥೆಗಳಿವೆ. ಒಬ್ಬ ಪ್ರಮದೆಯು, ಅವಳ ಪತಿಯು ಪರದೇಶಸಂಚಾರದಲ್ಲಿದ್ದಾಗ, ಅನ್ಯಪುರುಷರ ಸಂಪರ್ಕಕ್ಕಾಗಿ ಯತ್ನಿಸುತ್ತಿರಲು, ಅವಳ ಸಾಕುಗಿಳಿಯು ಪ್ರತಿರಾತ್ರಿಯೂ ಒಂದೊಂದು ಸ್ವಾರಸ್ಯವಾದ ಕಥೆಯನ್ನು ಹೇಳುತ್ತಾ ರಾತ್ರಿಯೆಲ್ಲಾ ಕಳೆದು ಹೋಗುವಂತೆ ೭೦ ದಿವಸಗಳ ಕಾಲ (ಅವಳ ಪತಿ ಹಿಂದಿರುಗುವವರೆಗೆ)

ಅವಳನ್ನು ತಡೆಯಿತೆಂಬ ಚೌಕಟ್ಟಿನೊಳಗೆ ಈ ಕಥೆಗಳು ಅಳವಡಿಸಲ್ಪಟ್ಟಿವೆ. ಈ ಎಪ್ಪತ್ತು ಕಥೆಗಳೂ ಸಂಭೋಗಶೃಂಗಾರಪ್ರಧಾನವಾಗಿದ್ದರೂ ನೀತಿ ಬೋಧಕವಾಗಿರುವುದು ಶುಕಸಪ್ತತಿಯ ವೈಶಿಷ್ಟ್ಯ.

ಶುಕಸಪ್ತತಿಯು ಲಲಿತವಾದ ಗದ್ಯದಲ್ಲಿ ರಚಿತವಾಗಿದೆ. ಇದನ್ನು ರಚಿಸಿದ ಕವಿಯ ವಿಚಾರವಾಗಿ ಏನೂ ತಿಳಿದುಬಂದಿಲ್ಲ. ಹೇಮಚಂದ್ರನು (೧೦೮೮-೧೧೭೨) ಶುಕಸಪ್ತತಿಯನ್ನು ಉಲ್ಲೇಖಿಸಿರುವುದರಿಂದ ಇದು ಕ್ರಿ. ಶ. ಹತ್ತನೇ ಶತಮಾನದ ವೇಳೆಗೆ ಪ್ರಸಿದ್ಧವಾಗಿದ್ದಿರಬೇಕು. ಇದು ೧೪ನೆಯ ಶತಮಾನದಲ್ಲಿ ಪರ್ಷಿಯನ್ ಭಾಷೆಗೆ ಅನುವಾದಗೊಂಡಿತು.

ಶುಕಸಪ್ತತಿಯು ಎರಡು ರೂಪಗಳಲ್ಲಿ ಉಪಲಬ್ಧವಾಗಿದೆ. ಒಂದು ತುಂಬ ಸಂಗ್ರಹವಾದುದು. ಅದರಲ್ಲಿ ಕಥಾನಿರೂಪಣೆ ಸ್ಪಷ್ಟವಾಗಿಲ್ಲದೆ ಇರುವುದರಿಂದ ಪ್ರಾಯಃ ಅದು ಮೂಲಗ್ರಂಥದ ಸಂಗ್ರಹವಿರಬೇಕೆಂದು ಭಾವಿಸಬೇಕಾಗುತ್ತದೆ. ಇನ್ನೊಂದು ಕಾವ್ಯಗುಣಗಳನ್ನೊಳಗೊಂಡು ಸ್ವಾರಸ್ಯವಾದ ರೀತಿಯಲ್ಲಿ ನಿರೂಪಿತವಾಗಿ ಆಕರ್ಷಕವಾಗಿದೆ.

## **ಭೋಜಪ್ರಬಂಧ** (ಕ್ರಿ.ಶ. ೧೬ನೆಯ ಶತಮಾನ)

ಭೋಜಪ್ರಬಂಧವನ್ನು ಭೋಜಚರಿತವೆಂದೂ ಕರೆಯುವುದುಂಟು. ಇದು ಧಾರಾನಗರದ ಭೋಜರಾಜನ (ಕ್ರಿ.ಶ. ೧೦೧೮-೧೦೬೩) ಔದಾರ್ಯವನ್ನೂ ವಿದ್ವತ್ತನ್ನೂ ಸ್ತುತಿಸುವುದಕ್ಕಾಗಿ ಬರೆಯಲ್ಪಟ್ಟಿದ್ದರೂ ಐತಿಹಾಸಿಕ ದೃಷ್ಟಿಯಿಂದ ಅಪ್ರಯೋಜಕ; ಕಾವ್ಯದೃಷ್ಟಿಯಿಂದ ಮಾತ್ರ ಉಪಯುಕ್ತವಾದುದು. ಇದರ ಗದ್ಯ ಅಷ್ಟೇನೂ ಪ್ರಭಾವಶಾಲಿಯಾಗಿಲ್ಲ. ಪದ್ಯಭಾಗ ಮಾತ್ರ ತುಂಬ ಮನೋಹರವಾಗಿದೆ.

ಭೋಜಪ್ರಬಂಧವನ್ನು ರಚಿಸಿದ ಕವಿ ಕ್ರಿ.ಶ. ೧೬ನೆಯ ಶತಮಾನದ ಬಲ್ಲಾಳಸೇನ. ಅನೇಕ ಶತಾಬ್ದಿಗಳ ಅಂತರದಲ್ಲಿ ಕಾವ್ಯ ರಚಿಸಿದ ಕಾಳಿದಾಸ, ಭವಭೂತಿ, ಮಾಘ, ಬಾಣ, ದಂಡಿ, ಮಯೂರ ಮುಂತಾದ ಕವಿಗಳನ್ನು ಭೋಜರಾಜನ ಆಸ್ಥಾನದಲ್ಲಿದ್ದರೆಂದು ಬಲ್ಲಾಳಸೇನ ಈ ಭೋಜಚರಿತದಲ್ಲಿ ನಿರೂಪಿಸಿರುವುದರಿಂದ ಆ ಕವಿಗಳ ಬಗ್ಗೆ ಈತನಾಡಿರುವ ಮಾತು ಎಷ್ಟು ವಿಶ್ವಸನೀಯವೆಂಬುದನ್ನು ನಿಷ್ಕರ್ಷಿಸಲು ಸಾಧ್ಯವೇ ಇಲ್ಲ.

ಭೋಜಚರಿತದಲ್ಲಿ ಎರಡು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಭೋಜನು ಮುಂಜನ ಬಳಿಕ ಮಾಳವಾಧಿಪತಿಯಾದುದು ವರ್ಣಿತವಾಗಿದೆ.



ಎರಡನೆಯ ಭಾಗದಲ್ಲಿ ಭೋಜನ ಆಸ್ಥಾನದಲ್ಲಿ ಸೇರುತ್ತಿದ್ದ ಅನೇಕ ಕವಿಗಳ ಗೋಷ್ಠಿಯನ್ನೂ ಅವರ ಪ್ರೌಢಿಮೆಯನ್ನೂ ವಿವರಿಸುವ ವಿವಿಧ ಸನ್ನಿವೇಶಗಳು ಬಹಳ ಚೆನ್ನಾಗಿ ನಿರೂಪಿತವಾಗಿವೆ. ಆ ಕವಿಗಳ ಪ್ರತಿಭೆಯನ್ನು ಎತ್ತಿ ಹಿಡಿಯುವ ಬಗೆಬಗೆಯ ಆಕರ್ಷಕ ಶ್ಲೋಕಗಳೂ ಹೇರಳವಾಗಿವೆ. ಇವರಲ್ಲಿನ ಸಮಸ್ಯಾಪೂರಣಗಳು ಲೋಕಪ್ರಿಯವಾಗಿವೆ.

ಮೇರುತುಂಗ, ರಾಜವಲ್ಲಭ, ವತ್ಸರಾಜ, ಶುಭಶೀಲ ಮತ್ತು ಪದ್ಮಗುಪ್ತರು ಬರೆದ ಬೇರೆ ಬೇರೆ ಭೋಜಚರಿತಗಳೂ ಇವೆ. ಇವೆಲ್ಲ ಅಷ್ಟು ಪ್ರಸಿದ್ಧವಾಗಿಲ್ಲ.

## ಇತರ ಜನಪ್ರಿಯ ಕಥೆಗಳು

೧) **ಭರಟಕದ್ವಾತ್ರಿಂಶಿಕೆ**ಯಲ್ಲಿ ೩೨ ಕಥೆಗಳಿವೆ. ಇವೆಲ್ಲ ಶೈವ ಭರಟಕರ ಕಥೆಗಳು. ಇದರ ಕವಿಯ ಅಥವಾ ರಚನಾಕಾಲದ ವಿಚಾರ ತಿಳಿದು ಬಂದಿಲ್ಲ. ಇದರಲ್ಲಿ ಮಧ್ಯೆ ಮಧ್ಯೆ ದೇಶಭಾಷೆಯ ಪದ್ಯಗಳೂ ಸೇರಿಕೊಂಡಿವೆ.

೨) **ಪುರುಷಪರೀಕ್ಷೆ**ಯು ಮೈಥಿಲಕೋಕಿಲನೆಂದು ಪ್ರಸಿದ್ಧನಾದ ವಿದ್ಯಾಪತಿಯಿಂದ ರಚಿತವಾದುದು. ಪುರುಷ ಗುಣಗಳನ್ನು ನಿರೂಪಿಸುವ ೪೪ ಕಥೆಗಳು ಇದರಲ್ಲಿವೆ.

೩) **ಕಥಾರತ್ನಾಕರ**ದಲ್ಲಿ ವಿಟ, ಧೂರ್ತ, ಮೂರ್ಖ ಮತ್ತು ಬಿನ್ನಾಣಗಾತಿಯರ ನಡವಳಿಕೆಗಳನ್ನು ವಿವರಿಸುವ ಬಗೆಬಗೆಯ ೨೫೮ ಸಣ್ಣ ಕಥೆಗಳಿವೆ. ಇದನ್ನು ರಚಿಸಿದವನು ೧೭ನೆಯ ಶತಮಾನದ ಹೇಮವಿಜಯಗಣಿ.

೪) **ಜೈನಕಥಾನಕ**ಗಳು ಹೇರಳವಾಗಿವೆ. ಅವುಗಳೆಲ್ಲ ಕೊನೆಯಲ್ಲಿ ಉಪದೇಶಾತ್ಮಕವಾಗಿವೆ.

೫) **ಕಥಾರ್ಣವ**ದಲ್ಲಿ ೩೫ ಕಥೆಗಳಿವೆ. ವೇತಾಳಪಂಚವಿಂಶತಿಯನ್ನು ರಚಿಸಿರುವ ಶಿವದಾಸನೇ ಇದನ್ನು ಬರೆದವನು.

೬) **ಕಥಾಕೌತುಕ**ವು ಜೋನರಾಜನ ಶಿಷ್ಯನಾದ ವೀರಕವಿ (ಕ್ರಿ. ಶ. ೧೪೫೧) ಪ್ರಣೀತ. ಇದು ೧೫ ಅಧ್ಯಾಯಗಳಲ್ಲಿ ಜುಲೇಖಾಯೂಸಫರ ಕಥೆಯನ್ನು ವಿವರಿಸುವ ಪದ್ಯಾತ್ಮಕ ಕಾವ್ಯ.

## ನೀತಿಬೋಧಕ ಕಥೆಗಳು

### ಪಂಚತಂತ್ರ (ಕ್ರಿ.ಶ. ೩ನೆಯ ಶತಮಾನ)

ಭಾರತೀಯ ಸಾಹಿತ್ಯ ಭಂಡಾರದಲ್ಲಿ ಸಂಸ್ಕೃತ ಪಂಚತಂತ್ರವು ಅತ್ಯಂತ ಮುಖ್ಯವೂ ಸ್ವಾರಸ್ಯಪೂರ್ಣವೂ ಆದ ಉಪದೇಶಾತ್ಮಕ ಕಲ್ಪಿತ ಕಥೆ. ಇದರಲ್ಲಿ ಅರ್ಥಶಾಸ್ತ್ರದ ಐದು ತಂತ್ರಗಳನ್ನು ನಿರೂಪಿಸಿರುವುದರಿಂದ ಇದಕ್ಕೆ ಪಂಚತಂತ್ರವೆಂಬ ಹೆಸರಾಯಿತು. ಇದು ಗದ್ಯಾತ್ಮಕವಾಗಿಯೇ ರಚಿತವಾಗಿದ್ದರೂ ಮಧ್ಯೆ ಮಧ್ಯೆ ಬೋಧಪ್ರದವಾದ ಅನೇಕ ಶ್ಲೋಕಗಳು ಸೇರಿಕೊಂಡಿವೆ. ಇದನ್ನು ಬರೆದ ವಿಷ್ಣುಶರ್ಮನು ಬ್ರಾಹ್ಮಣ; ಶ್ರುತಿಸ್ಮೃತಿಪುರಾಣೇತಿಹಾಸಾದಿಗಳಲ್ಲಿ ನಿಷ್ಣಾತ; ಅರ್ಥಶಾಸ್ತ್ರದಲ್ಲಿ ಚೆನ್ನಾಗಿ ನುರಿತವನು. ದಾಕ್ಷಿಣಾತ್ಯದಲ್ಲಿದ್ದ ಮಹಿಳಾರೋಪ್ಯ ನಗರದ ರಾಜನಾದ ಅಮರಶಕ್ತಿಯು ಒಂದು ದಿನ ನೆರೆದ ರಾಜಸಭೆಯಲ್ಲಿ ತನ್ನ ದುರ್ವಿನೀತರಾದ ಪುತ್ರರಿಗೆ ನೀತಿಶಾಸ್ತ್ರವನ್ನು ಕಲಿಸಿ ಯೋಗ್ಯರನ್ನಾಗಿ ಮಾಡಬೇಕೆಂದು ವಿಷ್ಣುಶರ್ಮನನ್ನು ಪ್ರಾರ್ಥಿಸಿದುದಾಗಿಯೂ, ವಿಷ್ಣುಶರ್ಮನು ಆರೇ ತಿಂಗಳಲ್ಲಿ ಆ ಕೆಲಸವನ್ನು ಸಾಧಿಸುವುದಾಗಿ ಶಪಥಮಾಡಿ ಒಪ್ಪಿಕೊಂಡು ಮಿತ್ರಭೇದ, ಮಿತ್ರಸಂಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ, ಅಪರೀಕ್ಷಿತಕಾರಿತ ಎಂಬ ಐದು ತಂತ್ರಗಳನ್ನು ರಚಿಸಿ ರಾಜಪುತ್ರರಿಂದ ಅವುಗಳನ್ನು ಓದಿಸಿದನೆಂದೂ, ಅವರೂ ಅದರ ಅಧ್ಯಯನದಿಂದ ಆರೇ ತಿಂಗಳಲ್ಲಿ ನೀತಿಶಾಸ್ತ್ರಪಟುಗಳಾದರೆಂದೂ ಪಂಚತಂತ್ರದ ಕಥಾಮುಖದಿಂದಲೇ ತಿಳಿದುಬರುತ್ತದೆ. ಈ ಕಥಾಮುಖದ ಉಪಸಂಹಾರ ಶ್ಲೋಕ ಹೀಗಿದೆ.—

[1] ಅಧೀತೇ ಯ ಇದಂ ನಿತ್ಯಂ ನೀತಿಶಾಸ್ತ್ರಂ ಶೃಣೋತಿ ಚ ।
ನ ಪರಾಭವಮಾಪ್ನೋತಿ ಶಕ್ರಾದಪಿ ಕದಾಚನ ॥

ಈ ಅಮರಶಕ್ತಿಯಾಗಲಿ ವಿಷ್ಣುಶರ್ಮನಾಗಲಿ ಯಾರು ಎಂಬುದು ತಿಳಿದುಬಂದಿಲ್ಲ. ಖೋಸ್ರು ಅನುಶೀರ್ವ್ರ (ಕ್ರಿ.ಶ. ೫೩೧-೭೯) ಎಂಬ ಧೊರೆಯ ಆಜ್ಞೆಯ ಮೇರೆಗೆ ಬುರ್ಝೊ ಎಂಬ ಪರ್ಷಿಯದ ಹಕೀಮನೊಬ್ಬನು ಇದನ್ನು ಪೆಹ್ಲವಿ ಭಾಷೆಗೆ ಅನುವಾದಮಾಡಿದನು. ಮೂಲಸಂಸ್ಕೃತ ಪಂಚತಂತ್ರವೂ

1 ಈ ನೀತಿಶಾಸ್ತ್ರವನ್ನು ಯಾವನು ನಿತ್ಯವೂ ಓದುತ್ತಾನೋ ಮತ್ತು ಕೇಳುತ್ತಾನೋ ಅವನು ಎಂದೆಂದಿಗೂ ಇಂದ್ರನಿಂದಲೂ ಕೂಡ ಪರಾಭವ ಹೊಂದುವುದಿಲ್ಲ.



ಅದರ ಈ ಪೆಹ್ಲವೀ ಅನುವಾದವೂ ಲುಪ್ತವಾಗಿ ಹೋಗಿದೆ. ಈಗ ಉಪಲಬ್ಧವಾಗಿರುವುದು ಬಡ್ ಎಂಬುವವನು ಕ್ರಿ.ಶ. ೫೭೦ರಲ್ಲಿ ರಚಿಸಿದ ಇದರ ಹಳೇ ಸಿರಿಯನ್ ರೂಪ ಮತ್ತು ಕ್ರಿ.ಶ. ೭೫೦ರಲ್ಲಿ ಅಬ್ದುಲ್ಲಾ ಇಕ್ಬಲ್ ಮಾಗಪ್ಘಾ ಬರೆದ ಅರಬ್ಬೀ ಭಾಷಾಂತರದ ರೂಪ ಮಾತ್ರ. ಈ ಅರಬ್ಬೀ ರೂಪವೇ ಯೂರೋಪಿನ [2]ಅನೇಕ ಭಾಷೆಗಳಿಗೆ ಪರಿವರ್ತಿತವಾಯಿತು. ಪಂಚತಂತ್ರದ ಮತ್ತೊಂದು ಸಂಸ್ಕರಣ ಗುಣಾಢ್ಯನ ಬೃಹತ್ಕಥೆಯಲ್ಲಿದ್ದಿರಬೇಕು. ಏಕೆಂದರೆ ಕಥಾಸರಿತ್ಸಾಗರ ಮತ್ತು ಬೃಹತ್ಕಥಾಮಂಜರಿಗಳಲ್ಲಿ ಈ ಕಥೆಗಳು ಉಕ್ತವಾಗಿವೆ. ಪಂಚತಂತ್ರದ ಕಾಶ್ಮೀರೀ ಸಂಸ್ಕರಣವು **ತಂತ್ರಾಖ್ಯಾಯಿಕಾ** ಎಂಬ ಹೆಸರಿನಿಂದ ಉಪಲಬ್ಧವಾಗಿದೆ. ಇದು ಲಲಿತವಾದ ಗದ್ಯದಲ್ಲಿ ರಚಿತವಾಗಿದ್ದು ಸಿರಿಯಾ ಭಾಷೆಯಲ್ಲಿರುವ ಪಾಠವನ್ನು ಸರಿಸುಮಾರಾಗಿ ಹೋಲುತ್ತದೆ. ಹಿತೋಪದೇಶವನ್ನೂ ನೇಪಾಳೀ ಪಂಚತಂತ್ರವನ್ನೂ ದಾಕ್ಷಿಣಾತ್ಯ ಪಂಚತಂತ್ರದ ಪ್ರತಿನಿಧಿಗಳೆನ್ನಬಹುದು. ಹೀಗೆ ಭಾರತದಲ್ಲೇ ಪಂಚತಂತ್ರದ ಮೂಲರೂಪ ಲುಪ್ತವಾಗಿ ಬೇರೆ ಆಧಾರಗಳಲ್ಲಿ ಸಿಕ್ಕುವ ಅದರ ಅರ್ವಾಚೀನ ಸಂಸ್ಕರಣಗಳು ಭಿನ್ನಭಿನ್ನವಾಗಿರುವುದರಿಂದ ಪಂಚತಂತ್ರದ ಮೇಲೆ ವಿಪುಲವಾದ ಚರ್ಚೆಗೆ ಅವಕಾಶವಾಗಿ ಲೇಖನಗಳು ಹೊರಬಂದಿವೆ.

ಪಂಚತಂತ್ರದ ಸಿರಿಯಾ ಅನುವಾದ ಕ್ರಿ.ಶ. ೫೭೦ರಲ್ಲಿ ಬರೆಯಲ್ಪಟ್ಟಿತು. ಆದ್ದರಿಂದ ಪಂಚತಂತ್ರ ಅದಕ್ಕಿಂತ ಎಷ್ಟೋ ಹಿಂದೆ ರಚಿತವಾಗಿದ್ದಿರಬೇಕು. ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ರಚಿತವಾಯಿತೆಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಪಂಚತಂತ್ರ ರಚಿತವಾದುದು ಕಾಶ್ಮೀರದಲ್ಲಿ ಎಂದೂ ಮಗಧದೇಶದಲ್ಲಿ ಎಂದೂ ಮತಭೇದವಿದೆ. ಈ ಗ್ರಂಥದಲ್ಲಿ ಬೌದ್ಧಪ್ರಭಾವ ಅಲ್ಲಲ್ಲಿ ಕಂಡುಬರುತ್ತದೆಯಾದರೂ, ಇದನ್ನು ಬರೆದವನು ವೈಷ್ಣವನೇ ಎಂದು ಎಲ್ಲರೂ ಒಪ್ಪುತ್ತಾರೆ. ಪಂಚತಂತ್ರದ ಅರಬ್ಬೀ ಸಂಸ್ಕರಣಕ್ಕೆ **ಕಲಿಲಾಹ್ ದಮನಾಹ್** ಎಂದೂ ಪೆಹ್ಲವೀ ಸಂಸ್ಕರಣಕ್ಕೆ **ಕಲಿಲಾಗ್ ದಮನಾಗ್** ಎಂದೂ ಹೆಸರಿರುವುದರಿಂದ ಸಂಸ್ಕೃತ ಮೂಲರೂಪಕ್ಕೂ **ಕರಟಕ ದಮನಕ** ಎಂಬ ಹೆಸರೇ ಇದ್ದಿರಬಹುದೆಂಬ ಊಹೆಗೆ ಅವಕಾಶವಾಗಿದೆ.

2 ಗ್ರೀಕ್‌ಗೆ ಕ್ರಿ.ಶ. ೧೦೮೦ರಲ್ಲಿ, ಹೀಬ್ರೂಗೆ ೧೧೦೦ರಲ್ಲಿ, ಲ್ಯಾಟಿನ್‌ಗೆ ೧೨೭೦ರಲ್ಲಿ, ಜರ್ಮನ್‌ಗೆ ೧೪೮೦ರಲ್ಲಿ, ಇಟಾಲಿಯನ್‌ಗೆ ೧೫೫೨ರಲ್ಲಿ, ಫ್ರೆಂಚ್‌ಗೆ ೧೬೭೮ರಲ್ಲಿ ಪಂಚತಂತ್ರ ಅನುವಾದಗೊಂಡಿತು.

ಪಂಚತಂತ್ರದ ಕಥಾಮುಖದ ಉಪಸಂಹಾರ ಶ್ಲೋಕದಲ್ಲಿ ಪಂಚತಂತ್ರವನ್ನು 'ನೀತಿಶಾಸ್ತ್ರ'ವೆಂದೇ ಕರೆಯಲಾಗಿದೆ. ಇದರಲ್ಲಿ ಐದು ಭಾಗಗಳಿವೆ. ಒಂದೊಂದೂ ನೀತಿಶಾಸ್ತ್ರದ ಒಂದೊಂದು ತಂತ್ರವನ್ನು ನಿರೂಪಿಸುತ್ತದೆ. ಮೊದಲನೆಯ ಭಾಗವಾದ 'ಮಿತ್ರಭೇದ'ವು ಕರಟಕ ದಮನಕ ಎಂಬ ಎರಡು ನರಿಗಳು ಗಾಢಮಿತ್ರರಾಗಿದ್ದ ಒಂದು ಸಿಂಹ ಮತ್ತು ವೃಷಭಗಳಿಗೆ ವೈಮನಸ್ಯ ತಂದುಹಾಕಿ ತಾವು ಸುಖವಾಗಿದ್ದ ಕಥೆಯ ಮೂಲಕ ಭೇದತಂತ್ರವನ್ನು ಪ್ರತಿಪಾದಿಸುತ್ತದೆ. ಎರಡನೆಯ 'ಮಿತ್ರಲಾಭ'ವು ಒಳ್ಳೆಯ ಸ್ನೇಹದ ಫಲವನ್ನು ಆಮೆ, ಜಿಂಕೆ, ಕಾಗೆ ಮತ್ತು ಇಲಿ—ಇವುಗಳ ಕಥೆಯನ್ನು ಹೇಳಿ ವಿವರಿಸುತ್ತದೆ. ಮೂರನೆಯ 'ಕಾಕೋಲೂಕೀಯ'ವು ಕಾಗೆ ಮತ್ತು ಗೂಬೆಗಳ ಕಥೆಯ ಮೂಲಕ ಜನ್ಮತಃ ಶತ್ರುಗಳಾದವರ ಸ್ನೇಹಬಂಧನದ ಅಪಾಯಗಳನ್ನು ತಿಳಿಸುತ್ತದೆ. ನಾಲ್ಕನೆಯ 'ಲಬ್ಧಪ್ರಣಾಶ'ವು ಕಪಿ ಮತ್ತು ಮೊಸಳೆಯ ಕಥೆಯ ಮೂಲಕ ನಮ್ಮ ಲೋಪದೋಷಗಳಿಂದ ನಾವು ನಮ್ಮಲ್ಲಿದ್ದುದನ್ನೂ ಹೇಗೆ ಕಳೆದುಕೊಳ್ಳಬೇಕಾಗುತ್ತದೆಂಬುದನ್ನೂ, ಐದನೆಯ 'ಅಪರೀಕ್ಷಿತಕಾರಿತ'ವು ಎಲ್ಲ ಪೂರ್ವಾಪರ ವಿಚಾರಗಳನ್ನೂ ಕೂಲಂಕಷವಾಗಿ ಪರಿಶೀಲಿಸದೆ ಯಾವ ಕೆಲಸವನ್ನೇ ಆಗಲಿ ದುಡುಕಿ ಮಾಡಿದರೆ ಉಂಟಾಗುವ ಕಷ್ಟನಷ್ಟಗಳನ್ನೂ ಅನೇಕ ಕಥೆಗಳ ಮೂಲಕ ಪ್ರತಿಪಾದಿಸಿ ತೋರಿಸುತ್ತದೆ.

ಪ್ರಪಂಚದ ಎಲ್ಲ ಭಾಗಗಳಲ್ಲೂ ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಅಚ್ಚಾಗಿ ಪ್ರಚಲಿತವಾಗಿರುವ ಪುಸ್ತಕವೆಂದರೆ, ಬೈಬಲ್ ಅನ್ನು ಬಿಟ್ಟರೆ, ಪಂಚತಂತ್ರವೇ ಎಂದು ಹೇಳಬಹುದು. ಹೆರ್ಟಲ್ ಎಂಬ ವಿದ್ವಾಂಸನು ಐವತ್ತು ಬೇರೆ ಬೇರೆ ಭಾಷೆಗಳಲ್ಲಿ ಪ್ರಚಲಿತವಾಗಿರುವ ಪಂಚತಂತ್ರದ ಕಥೆಗಳಲ್ಲಿ ಕಂಡುಬರುವ ಇನ್ನೂರಕ್ಕಿಂತ ಹೆಚ್ಚು ಪ್ರಭೇದಗಳನ್ನು ಗುರ್ತಿಸಿದ್ದಾನೆ.

## **ಹಿತೋಪದೇಶ** (ಕ್ರಿ.ಶ. ೧೧-೧೨ನೆಯ ಶತಮಾನ)

ಹಿತೋಪದೇಶವು ಪಂಚತಂತ್ರದಂತೆಯೇ, ಅದೇ ಆಧಾರದ ಮೇಲೆಯೇ ರಚಿತವಾಗಿರುವ, ಮತ್ತೊಂದು ಲೋಕಪ್ರಿಯ ಉಪದೇಶಾತ್ಮಕ ಕಥಾಸಂಕಲನ. ಇದರಲ್ಲಿರುವ ೪೫ ಕಥೆಗಳಲ್ಲಿ ೨೫ ಕಥೆಗಳು ಪಂಚತಂತ್ರದಲ್ಲಿರುವುವೇ. ಕಥಾಮುಖವೂ ಕಥೆಯ ಸಂವಿಧಾನವೂ ಪಂಚತಂತ್ರದಂತೆಯೇ ಇದೆ. ಪಂಚತಂತ್ರದಲ್ಲಿರುವ ಐದು ಭಾಗಗಳಿಗೆ ಬದಲಾಗಿ ಹಿತೋಪದೇಶದಲ್ಲಿ ನಾಲ್ಕೇ ಭಾಗಗಳಿವೆ. ಹಿತೋಪದೇಶದಲ್ಲಿ ಮೂರ್ಖ ರಾಜಪುತ್ರರ ತಂದೆಯ ಹೆಸರನ್ನು ಪಾಟಲೀಪುತ್ರದ ಸುದರ್ಶನನೆಂದು ಹೇಳಿದೆ.



ಹಿತೋಪದೇಶವು ಧವಳಚಂದ್ರನ ಆಶ್ರಿತನಾದ ನಾರಾಯಣ ಪಂಡಿತನಿಂದ ರಚಿತವಾದುದು. ಇವರಿಬ್ಬರೂ ಐತಿಹಾಸಿಕವಾಗಿ ಯಾರೆಂಬುದು ಸ್ಪಷ್ಟವಾಗಿಲ್ಲ. ಬಂಗಾಳದಲ್ಲಿ ಮಾತ್ರ ವಾಡಿಕೆಯಲ್ಲಿರುವ ಕೆಲವು ಶಾಕ್ತ ಆಚರಣೆಗಳ ಉಲ್ಲೇಖವು ಹಿತೋಪದೇಶದಲ್ಲಿರುವುದರಿಂದ ಅದನ್ನು ಬರೆದ ನಾರಾಯಣ ಪಂಡಿತನೂ ಬಂಗಾಳದವನೇ ಆಗಿರಬಹುದು. ನಮಗೆ ಸಿಕ್ಕಿರುವ ಹಿತೋಪದೇಶದ ಅತ್ಯಂತ ಪ್ರಾಚೀನ ಹಸ್ತಲಿಖಿತ ಪ್ರತಿಯು ಕ್ರಿ.ಶ. ೧೩೭೩ರಲ್ಲಿ ಬರೆಯಲ್ಪಟ್ಟದ್ದುದು. ಈ ಕಾಲಕ್ಕಿಂತ ಎಷ್ಟೋ ಹಿಂದೆಯೇ ಗ್ರಂಥರಚನೆಯಾಗಿದ್ದಿರಬೇಕಾದ್ದರಿಂದ ೧೦ರಿಂದ ೧೨ನೆಯ ಶತಮಾನದೊಳಗೆ ಅದು ರಚಿತವಾಗಿರಬಹುದೆಂದು ಊಹಿಸಲಾಗಿದೆ.

ಪಂಚತಂತ್ರದ ಕೆಲವು ಕಥೆಗಳನ್ನೊಳಗೊಂಡು ಅದೇ ಆಧಾರದ ಮೇಲೆ ಹಿತೋಪದೇಶ ರಚಿತವಾಗಿದೆಯೆಂದ ಮಾತ್ರಕ್ಕೆ ಅದು ಪಂಚತಂತ್ರದ ಸಂಗ್ರಹವೆಂದು ತಿಳಿಯಬಾರದು. ಎರಡಕ್ಕೂ ಕಥಾಭಾಗದಲ್ಲಿ ಬಹಳ ವ್ಯತ್ಯಾಸವಿದೆ. ಪಂಚತಂತ್ರದಲ್ಲಿಲ್ಲದ ಅನೇಕ ಕಥೆಗಳು ಹಿತೋಪದೇಶದಲ್ಲಿವೆ. ಇದರಲ್ಲಿ ಶ್ಲೋಕಗಳ ಸಂಖ್ಯೆ ಬಹಳ ಹೆಚ್ಚಾಗಿದ್ದು ಉಪದೇಶಾತ್ಮಕ ನಿರೂಪಣೆಗಳು ಪ್ರಧಾನವಾಗಿವೆ.

ಹಿತೋಪದೇಶದಲ್ಲಿ (೧) ಮಿತ್ರಲಾಭ (೨) ಸುಹೃದ್ಭೇದ (೩) ವಿಗ್ರಹ (೪) ಸಂಧಿ ಎಂಬ ನಾಲ್ಕು ಭಾಗಗಳಿವೆ. ಪಂಚತಂತ್ರದ ಮೊದಲ ಎರಡು ಭಾಗಗಳ ಕ್ರಮ ಇಲ್ಲಿ ಹಿಂದುಮುಂದಾಗಿದೆ; ಮೂರನೆಯ ಭಾಗ ಸಂಧಿ ಮತ್ತು ವಿಗ್ರಹ ಎಂಬ ಎರಡು ಭಾಗಗಳಾಗಿ ಒಡೆಯಲ್ಪಟ್ಟಿದೆ. ನಾಲ್ಕು ಐದನೆಯ ಭಾಗಗಳು ಹಿತೋಪದೇಶದಲ್ಲಿ ಬಿಟ್ಟೇಹೋಗಿವೆ.

ಹಿತೋಪದೇಶದ ಶೈಲಿ ಸುಲಭ, ಲಲಿತ. ಸೊಗಸಾದ ಭಾವಗಳಿಂದಲೂ ಉದಾತ್ತ ನೀತಿಪರ ಸುಭಾಷಿತಗಳಿಂದಲೂ ಕೂಡಿ ಈ ಗ್ರಂಥವು ಕಿರಿಯರಿಂದ ಹಿರಿಯರವರೆಗೆ ಸರ್ವಾದರಣೀಯವಾಗಿದೆ.

# ಅಧ್ಯಾಯ ೨

## ಚಂಪೂಕಾವ್ಯಗಳು

ಗದ್ಯಪದ್ಯ ಮಿಶ್ರಿತವಾದ ಕಾವ್ಯಕ್ಕೆ ಚಂಪೂ ಎಂದು ಸಾಮಾನ್ಯವಾಗಿ ಹೇಳಬಹುದು. ಈ ಬಗೆಯ ಕಾವ್ಯದಲ್ಲಿ ಕವಿಯು ತನಗುಂಟಾದ ತತ್ಕಾಲದ ಸ್ಫೂರ್ತಿಗೆ ಅನುಗುಣವಾಗಿ ಪದ್ಯದಲ್ಲೋ ಗದ್ಯದಲ್ಲೋ ತನ್ನ ಪ್ರತಿಭೆಯನ್ನು ಪ್ರದರ್ಶಿಸಬಹುದು. ಶ್ರೋತೃಗಳಿಗೂ ಗದ್ಯಪದ್ಯಗಳ ವಿಭಿನ್ನ ಪದಸರಣಿಯ ಇಂಪು ಆಹ್ಲಾದವುಂಟುಮಾಡುತ್ತದೆಂಬುದರಲ್ಲಿ ಸಂದೇಹವಿಲ್ಲ. ಬರೀ ಗದ್ಯವಾಗಲಿ ಬರೀ ಪದ್ಯವಾಗಲಿ ಕೇಳುವವನಿಗೆ ಬೇಸರವುಂಟುಮಾಡಬಹುದು. ಗದ್ಯಪದ್ಯಮಿಶ್ರಣವನ್ನು ಭೋಜನು [1]ಗಾಯನ ಮತ್ತು ವಾದ್ಯಸಂಗೀತಗಳ ಮಿಶ್ರಣಕ್ಕೆ ಹೋಲಿಸಿದ್ದಾನೆ; ವೆಂಕಟಾಧ್ವರಿಯು [2]ಜೇನುತುಪ್ಪದಲ್ಲದ್ದಿದ ದ್ರಾಕ್ಷಿಯಂತೆ ಎಂದು ವರ್ಣಿಸಿದ್ದಾನೆ. ಪದ್ಯಗಳ ಮಧ್ಯೆ ಗದ್ಯಗಳು ಬೆರೆತಿರುವುದನ್ನು ನಾವು ವೇದದಲ್ಲಿ ಬರುವ ಆಖ್ಯಾನಗಳಲ್ಲೂ, ಬೌದ್ಧ ಜಾತಕಗಳಲ್ಲೂ, ಪುರಾಣಗಳಲ್ಲೂ, ಪಂಚತಂತ್ರಾದಿ ನೀತಿಪರ ಕಲ್ಪಿತಕಥೆಗಳಲ್ಲೂ ವಿಶೇಷವಾಗಿ ಕಾಣುತ್ತೇವೆ. ಅಂದಮಾತ್ರಕ್ಕೆ ಚಂಪೂಕಾವ್ಯದ ರಚನೆ ವೇದಗಳ ಕಾಲದಷ್ಟು ಪ್ರಾಚೀನ ಎಂದಂತಾಗುವುದಿಲ್ಲ. ಏತಕ್ಕೆಂದರೆ ಇಂತಹ ಕಡೆಗಳಲ್ಲಿ ಉಪದೇಶಾತ್ಮಕ ಅಥವಾ ನೀತಿಪರವೂ, ಜ್ಞಾಪಕದಲ್ಲಿಟ್ಟುಕೊಳ್ಳಲರ್ಹವೂ ಆದ ಅಂಶಗಳನ್ನು ಮಾತ್ರ ಶ್ಲೋಕರೂಪವಾಗಿ ರಚಿಸಿ ಗದ್ಯಗಳ ಮಧ್ಯೆ ಸೇರಿಸಲಾಗಿದೆಯೆಂಬುದು ಪರಿಶೀಲನೆಯಿಂದ ತಿಳಿಯಬಹುದಾದ ಅಂಶ. ಚಂಪೂಕಾವ್ಯಗಳಲ್ಲಿ ಈ ರೀತಿಯ ವ್ಯವಸ್ಥೆಯಿಲ್ಲ. ಕವಿಯ ಇಷ್ಟದಂತೆ ಗದ್ಯದಿಂದ ಪದ್ಯಕ್ಕೂ ಪುನಃ ಪದ್ಯದಿಂದ ಗದ್ಯಕ್ಕೂ ಕಾವ್ಯರಚನೆ ಬದಲಾಗುತ್ತ ಹೋಗಬಹುದು.

ಚಂಪೂ ಶಬ್ದವು [3]ಚಂಪ್ [೧೦ನೇ ಗಣ (ಉಣಾದಿ)-ಚಲಿಸು] ಧಾತುವಿನಿಂದ ಬಂದಿದೆ. ಈ ಶಬ್ದವನ್ನು ಸಾಮಾನ್ಯವಾಗಿ ಸ್ತ್ರೀಲಿಂಗದಲ್ಲೇ ಪ್ರಯೋಗಿಸ

1 ಗದ್ಯಾನುಬಂಧರಸಮಿಶ್ರಿತಪದ್ಯಸೂಕ್ತಿಃ ಹೃದ್ಯಾ ಹಿ ವಾದ್ಯಕಲಯಾ ಕಲಿತೇವ ಗೀತಿಃ ।— ಚಂಪೂರಾಮಾಯಣ I ೩.

2 ಸಂಗಃ ಕಸ್ಯ ಹಿ ನ ಸ್ವದೇತ ಮನಸೇ ಮಾಧ್ವೀಕಮೃದ್ವೀಕಯೋಃ ।
— ವಿಶ್ವಗುಣಾದರ್ಶ ೪.

3 ಚಂಪಯತಿ ಇತಿ ಚಂಪೂಃ—(ಸರಾಗವಾಗಿ) ಚಲಿಸುವಂತಹುದು.



ಲಾಗುತ್ತಿದೆ. ಕಾವ್ಯಾದರ್ಶ I ೩೧ ರಲ್ಲಿ ದಂಡಿಯು ಚಂಪೂಲಕ್ಷಣವನ್ನು 'ಗದ್ಯಪದ್ಯಮಯಿೀ ಕಾಚಿತ್ ಚಂಪೂರಿತ್ಯಭಿಧೀಯತೇ' ಎಂದು ಹೇಳಿದ್ದಾನೆ. ಇದರಿಂದ ಕ್ರಿ.ಶ. ೭ನೆಯ ಶತಮಾನದ ವೇಳೆಗೆ ಚಂಪೂಕಾವ್ಯಗಳು ಪ್ರಚಲಿತವಾಗಿದ್ದುವೆಂಬುದು ಸ್ಪಷ್ಟವಾಗುತ್ತದೆ. ಆದರೆ ಅಷ್ಟು ಹಿಂದಿನ ಕಾಲದ ಚಂಪೂ ಗ್ರಂಥವೊಂದೂ ನಮಗೆ ದೊರೆತಿಲ್ಲವಾದರೂ ಕ್ರಿಸ್ತಶಕದ ಆದಿ ಶತಮಾನಗಳಿಗೆ ಸೇರಿದ ಹರಿಷೇಣಪ್ರಶಸ್ತಿಯೇ ಮುಂತಾದುವುಗಳು ಚಂಪೂಕಾವ್ಯಗಳ ಧಾಟಿಯಲ್ಲೇ ರಚಿತವಾಗಿರುವುದು ಗಮನಾರ್ಹ. ಈಗ ಉಪಲಬ್ಧವಾಗಿರುವ ಚಂಪೂಕಾವ್ಯಗಳು ಕ್ರಿ.ಶ. ೯೦೦ಕ್ಕಿಂತ ಈಚಿನವು.

### ತ್ರಿವಿಕ್ರಮಭಟ್ಟನ **ನಳಚಂಪೂ** (ಕ್ರಿ.ಶ. ೯–೧೦ನೆಯ ಶತಮಾನ)

**ನಳಚಂಪೂ** ಅಥವಾ **ದಮಯಂತೀಕಥಾ** ತ್ರಿವಿಕ್ರಮಭಟ್ಟನಿಂದ ವಿರಚಿತವಾದುದು. ಇದೇ ಈಗ ನಮಗೆ ಸಿಕ್ಕಿರುವ ಚಂಪುಗಳಲ್ಲೆಲ್ಲಾ ಅತ್ಯಂತ ಹಳೆಯದು. ಇದರ ವಸ್ತು ನಳದಮಯಂತಿಯರ ಕಥೆ. ಗ್ರಂಥಾರಂಭದಲ್ಲಿ ಕವಿಯು ಶಿವಸ್ತುತಿಯನ್ನೂ ಕವಿ ಪ್ರಶಂಸೆ ಮತ್ತು ಖಲನಿಂದೆಯನ್ನೂ ಮಾಡಿದ್ದಾನೆ. ಬಳಿಕ ವಾಲ್ಮೀಕಿ, ವ್ಯಾಸ, ಬಾಣ, ಗುಣಾಢ್ಯರ ಪ್ರಶಂಸೆ ಮತ್ತು ಕವಿಯ ಸಂಕ್ಷಿಪ್ತ ಚರಿತೆ ಇವೆ. ಮೊದಲನೆಯ ಉಚ್ಛ್ವಾಸದಲ್ಲಿ ಕಥೆ ಆರಂಭವಾಗಿ ಏಳನೆಯ ಉಚ್ಛ್ವಾಸದಲ್ಲಿ ಅಸಮಗ್ರವಾಗಿ ನಿಂತುಹೋಗುತ್ತದೆ. ತ್ರಿವಿಕ್ರಮಭಟ್ಟನ ತಂದೆಯನ್ನು ಅವನ ಪರೋಕ್ಷದಲ್ಲಿ ಕವಿಯೊಬ್ಬನು ತಿರಸ್ಕಾರದಿಂದ ನಿರ್ದೇಶಿಸಿದನೆಂದೂ, ಆ ಕಾರಣದಿಂದಾಗಿ ತ್ರಿವಿಕ್ರಮಭಟ್ಟನು ಈ ನಳಚಂಪುವನ್ನು ಆಶುಕವಿತೆಯನ್ನಾಗಿ ಅಲ್ಲೇ ರಚಿಸಲಾರಂಭಿಸಿದನೆಂದೂ ಅದರ ಏಳನೆಯ ಉಚ್ಛ್ವಾಸ ರಚಿತವಾಗುತ್ತಿದ್ದಾಗ ಅವನ ತಂದೆಯೇ ಅಲ್ಲಿಗೆ ಬರಲು ಆ ಕೃತಿಯನ್ನು ಅಸಮಗ್ರವಾಗಿಯೇ ನಿಲ್ಲಿಸಿಬಿಟ್ಟನೆಂದೂ ತಿಳಿಸುವ ಒಂದು ದಂತಕಥೆಯಿದೆ.

ತ್ರಿವಿಕ್ರಮನ ಶೈಲಿ ಜಟಿಲವೆಂದೇ ಹೇಳಬೇಕು. ಈತನು ಬಾಣನನ್ನೂ ಸುಬಂಧುವನ್ನೂ ಅನುಕರಣಮಾಡಿದ್ದಾನೆಂಬುದು ಸ್ಪಷ್ಟ. 'ಕವೀನಾಂ ಆಗಲದ್ದರ್ಪೋ ನೂನಂ ವಾಸವದತ್ತಯಾ' ಎಂದು ಬಾಣನಿಂದಲೂ ಹೊಗಳಿಸಿಕೊಂಡಿದ್ದ ಪ್ರತ್ಯಕ್ಷರಶ್ಲೇಷಮಯವಾದ ವಾಸವದತ್ತೆಯನ್ನು ರಚಿಸಿದ ಸುಬಂಧು

ವಿನ ಶೈಲಿಯ ಕ್ಲಿಷ್ಟತೆಯನ್ನು ಹಿಂದೆ ಪ್ರಸ್ತಾಪಿಸಿದ್ದೇವೆ. ಸುಬಂಧು ಅಭಂಗ ಶ್ಲೇಷವನ್ನು ವಿಶೇಷವಾಗಿ ಬಳಸಿದ್ದರೆ ತ್ರಿವಿಕ್ರಮಭಟ್ಟನು 'ಭಂಗಶ್ಲೇಷವನ್ನೇ ಹೆಚ್ಚಾಗಿ ಬಳಸಿದ್ದಾನೆ. ಈತನಲ್ಲೂ ದೀರ್ಘಸಮಾಸಗಳಿದ್ದರೂ ಒಟ್ಟಿನಲ್ಲಿ ಕಾವ್ಯ ಸುರಸವಾಗಿದೆಯೆಂದೇ ಹೇಳಬೇಕು. ಅರುಣೋದಯಕಾಲವನ್ನು ಗಂಗಾ ಯಮುನಾ ಸಂಗಮಕ್ಕೆ ಹೋಲಿಸಿರುವ ಒಂದು ಶ್ಲೋಕದ ರಮಣೀಯತೆಯ ಕಾರಣದಿಂದ ಈತನಿಗೆ 'ಯಮುನಾ ತ್ರಿವಿಕ್ರಮ'ನೆಂಬ ಹೆಸರೂ ಬಂದಿದೆ. ತ್ರಿವಿಕ್ರಮಭಟ್ಟನು ಈ ಚಂಪೂಕಾವ್ಯವನ್ನು ಕರೆದಿರುವುದು 'ದಮಯಂತೀಕಥೆ' ಎಂದೇ. ನಳಚಂಪೂ ಎಂಬ ಹೆಸರು ಈಚಿನದು. ಇದರ ಒಂದೊಂದು ಉಚ್ಛ್ವಾಸದ ಕೊನೆಯಲ್ಲೂ 'ಇತಿ ತ್ರಿವಿಕ್ರಮಭಟ್ಟ ವಿರಚಿತಾಯಾಂ ದಮಯಂತೀ ಕಥಾಯಾಂ ಹರಿಚರಣ ಸರೋಜಾಂಕಿತಾಯಾಂ' ಎಂದಿದೆ. ಈ ಕವಿಗೆ ಸಿಂಹಾದಿತ್ಯನೆಂಬ ಹೆಸರೂ ಇತ್ತು. ಈತನ 'ದಮಯಂತೀಕಥೆ'ಗೆ ಚಂಡಪಾಲ, ಗುಣವಿನಯಗಣಿ, ದಾಮೋದರಭಟ್ಟ ಎಂಬ ಮೂವರಿಂದಲೂ ರಚಿತವಾದ ಪ್ರತ್ಯೇಕ ಟೀಕೆಗಳಿವೆ. ಇವುಗಳಲ್ಲಿ ಚಂಡಪಾಲನ 'ವಿಷಮಪದಪ್ರಕಾಶಿಕಾ' ಪ್ರಸಿದ್ಧವಾದುದು.

ಮದಾಲಸಾ ಚಂಪೂ ಮತ್ತು ರಾಷ್ಟ್ರಕೂಟರಾಜ ಮೂರನೆಯ ಇಂದ್ರನ (ನೌಸಾರಿ) ಪ್ರಶಸ್ತಿ ಇವೆರಡೂ ತ್ರಿವಿಕ್ರಮಭಟ್ಟನಿಂದಲೇ ರಚಿತವಾದುವು. ಈ ಪ್ರಶಸ್ತಿಯ ಕಾಲ ಕ್ರಿ.ಶ. ೯೧೫. ಆದ್ದರಿಂದ ಕವಿಯ ಕಾಲವೂ ೯ನೆಯ ಶತಮಾನದ ಅಂತ್ಯ ಮತ್ತು ೧೦ನೆಯ ಶತಮಾನದ ಆದಿ ಎಂಬುದರಲ್ಲಿ ಸಂದೇಹಕ್ಕೆ ಅವಕಾಶವಿಲ್ಲ.

### ಸೋಮದೇವಸೂರಿಯ **ಯಶಸ್ತಿಲಕಚಂಪೂ** (ಕ್ರಿ.ಶ. ೯೫೯)

ಯಶಸ್ತಿಲಕ ಅಥವಾ ಯಶೋಧರಚರಿತವೆಂಬ ಚಂಪೂಕಾವ್ಯವನ್ನು ಕ್ರಿ.ಶ. ೯೫೯ರಲ್ಲಿ ಸೋಮದೇವಸೂರಿಯು ಎಂಟು ಆಶ್ವಾಸಗಳಲ್ಲಿ ರಚಿಸಿದನು. ಸೋಮದೇವಸೂರಿಗೆ ಸೋಮಪ್ರಭಸೂರಿಯೆಂಬ ಹೆಸರೂ ಇದೆ. ಈತನು ದಿಗಂಬರ ಜೈನಕವಿ. ರಾಷ್ಟ್ರಕೂಟ ರಾಜಾಕೃಷ್ಣನ ಸಾಮಂತನಾದ ಮುಮ್ಮಡಿ ಚಾಲುಕ್ಯ ಅರಿಕೇಸರಿಯು ಸೋಮದೇವಸೂರಿಗೆ ಆಶ್ರಯವಿತ್ತಿದ್ದನು. ಈ ಕವಿಯು ತನ್ನ ಯಶಸ್ತಿಲಕಚಂಪೂವಿನ ಪ್ರತ್ಯಾಶ್ವಾಸದ ಸಮಾಪ್ತಿವಾಕ್ಯದಲ್ಲೂ ತನ್ನನ್ನು 'ಸಕಲತಾರ್ಕಿಕಲೋಕಚೂಡಾಮಣಿಯಾದ ಶ್ರೀಮನ್ನೇಮಿನಾಥನ ಶಿಷ್ಯ'ನೆಂದು ಹೇಳಿಕೊಂಡಿದ್ದಾನೆ. ಗ್ರಂಥಾಂತ್ಯವಾಕ್ಯದಲ್ಲಿ ತಾನು ಗಂಗಾಧರ ಗ್ರಾಮದವನೆಂದೂ ಗ್ರಂಥವು ಶಕಸಂವತ್ಸರ ೮೮೧ರಲ್ಲಿ ಅಂದರೆ ಕ್ರಿ.ಶ. ೯೫೯ರಲ್ಲಿ ರಚಿತವಾಯಿತೆಂದೂ ಹೇಳಿದ್ದಾನೆ.



ಈ ಚಂಪೂಕಾವ್ಯದ ಕಥಾವಸ್ತು ಅವಂತಿರಾಜನಾದ ಯಶೋಧರನ ಚರಿತೆ; — ಅವನ ಹೆಂಡತಿಯ ಒಳಸಂಚುಗಳು — ಅವನು ಅನೇಕ ಜನ್ಮಗಳನ್ನೆತ್ತುವುದು — ಕೊನೆಗೆ ಜೈನನಾಗುವುದು. ಯಶೋಧರನ ಚರಿತ್ರೆಯನ್ನು ಹೇಳುವ ನೆಪದಲ್ಲಿ ಜೈನ ಸಿದ್ಧಾಂತ ಸಂಪ್ರದಾಯಗಳು ಇಲ್ಲಿ ಸಾಂಗವಾಗಿ ನಿರೂಪಿತವಾಗಿವೆ. ಕೊನೆಯ ಮೂರು ಆಶ್ವಾಸಗಳು ಜೈನಮತ ಧರ್ಮದ ಕೈಪಿಡಿಯಂತಿವೆ.

ಸೋಮದೇವಸೂರಿಯು ಉಲ್ಲೇಖಿಸಿರುವ ಕೆಲವು ಕವಿಗಳ ಹೆಸರುಗಳು ಇನ್ನೂ ಅಪರಿಚಿತವಾಗಿಯೇ ಉಳಿದಿವೆ. ಈತನ ಇನ್ನೊಂದು ಕೃತಿಯಾದ 'ನೀತಿವಾಕ್ಯಾಮೃತ'ವು ಚಾಣಕ್ಯನ ಅರ್ಥಶಾಸ್ತ್ರವನ್ನೇ ಅನುಸರಿಸಿದೆ.

### ಹರಿಚಂದ್ರನ **ಜೀವಂಧರಚಂಪೂ** (ಕ್ರಿ.ಶ. ೯ನೆಯ ಶತಮಾನ?)

ಜೀವಂಧರಚಂಪೂಕಾವ್ಯವನ್ನು ಬರೆದ ಹರಿಚಂದ್ರನು ಯಾರು ಎಂಬುದೇ ಖಚಿತವಾಗಿ ಹೇಳುವಂತಿಲ್ಲ. ಬಾಣನು ಪ್ರಶಂಸಿಸಿರುವ (ಭಟ್ಟಾರ) ಹರಿಚಂದ್ರನೇ ಈತನೆನ್ನಲು ಆಧಾರಗಳಿಲ್ಲ. ಆದರೂ ಈ ಚಂಪೂಕಾರನನ್ನು ೬ನೆಯ ಶತಮಾನದವನೆಂದು ಹೇಳುತ್ತಾರೆ. ಈತನೇ ಧರ್ಮಶರ್ಮಾಭ್ಯುದಯವನ್ನು ಬರೆದ ಹರಿಚಂದ್ರನೆಂದು ಹೇಳುವುದಕ್ಕೂ ಆಗುವುದಿಲ್ಲ. ಹತ್ತನೆಯ ಶತಮಾನದ ವಾದೀಭಸಿಂಹನು ಈ ಹರಿಚಂದ್ರನನ್ನು ನಿರ್ದೇಶಿಸಿರುವುದರಿಂದ ಈತನ ಕಾಲ ಅದಕ್ಕಿಂತ ಹಿಂದೆ ಅಂದರೆ ೯ನೆಯ ಶತಮಾನವಾಗಿರಬಹುದು. ಈ ಜೀವಂಧರಚರಿತೆಯು ಗುಣಭದ್ರನ ಉತ್ತರಪುರಾಣದ ಆಧಾರದ ಮೇಲೆ ರಚಿತವಾಗಿದೆ. ಇದರಲ್ಲಿ ೧೧ ಲಂಬಕಗಳಿವೆ.

ಈ [4]ಹರಿಚಂದ್ರನು ಯಾವ ದೇಶದವನೆಂಬುದೂ ಇವನ ತಾಯಿ ತಂದೆಗಳಾರೆಂಬುದೂ ತಿಳಿದುಬಂದಿಲ್ಲ. ಇವನ ಕಾವ್ಯದ ಆದಿ ಅಂತ್ಯ ಶ್ಲೋಕ

---

4 ಸಂಸ್ಕೃತ ಕವಿಗಳಲ್ಲಿ ನಾಲ್ಕು ಜನ ಹರಿಚಂದ್ರರನ್ನು ಗುರುತಿಸಬಹುದು— (೧) ಭಟ್ಟಾರಹರಿಚಂದ್ರ (೨) ಪರಮಾರರಾಜ ನವಸಾಹಸಾಂಕನ ಮಂತ್ರಿಯಾಗಿದ್ದು ಚರಕಸಂಹಿತೆ ಮತ್ತು ಅಷ್ಟಾಂಗಹೃದಯಗಳಿಗೆ ಟೀಕೆ ಬರೆದಿರುವ ಹರಿಚಂದ್ರ (೩) ಧರ್ಮಶರ್ಮಾಭ್ಯುದಯ ರಚಿಸಿದವನು ಮತ್ತು (೪) ಜೀವಂಧರ ಚಂಪೂಕಾರ.

ಗಳನ್ನೂ ಕಥಾವಸ್ತುವನ್ನೂ ನೋಡಿದರೆ ಈತನು ಜೈನನೇ ಇರಬೇಕೆಂದು ಹೇಳಬಹುದು. ಗದ್ಯಪದ್ಯಾತ್ಮಕವಾದ ಚಂಪೂಕಾವ್ಯದ ಬಗ್ಗೆ ಈತನು ಬರೆದಿರುವ ಈ ಶ್ಲೋಕ ಉಲ್ಲೇಖಾರ್ಹ—

ಗದ್ಯಾವಲೀ ಪದ್ಯಪರಂಪರಾ ಚ ಪ್ರತ್ಯೇಕಮಪ್ಯಾವಹತಿ ಪ್ರಮೋದಂ।
ಹರ್ಷಪ್ರಕರ್ಷಂ ತನುತೇ ಮಿಲಿತ್ವಾ ದ್ರಾಗ್ಬಾಲ್ಯತಾರುಣ್ಯವತೀವ ಕಾಂತಾ॥

## ಭೋಜನ **ಚಂಪೂರಾಮಾಯಣ**

ಚಂಪೂರಾಮಾಯಣವೇ ಚಂಪೂಕಾವ್ಯಗಳಲ್ಲೆಲ್ಲಾ ಅತ್ಯಂತ ಜನಪ್ರಿಯವಾಗಿರುವುದು ಇದಕ್ಕೆ ಭೋಜಚಂಪೂ ಎಂಬ ಹೆಸರೂ ಇದೆ. ಬಾಲಕಾಂಡದಿಂದ ಸುಂದರಕಾಂಡದ ಕೊನೆಯವರೆಗೆ ಮಾತ್ರ ಭೋಜನೇ ರಾಮಾಯಣದ ಕಥೆಯನ್ನು ಚಂಪೂಪ್ರಬಂಧದ ರೂಪದಲ್ಲಿ ರಚಿಸಿದನೆಂದು ಹಿಂದಿನಿಂದಲೂ ಹೇಳಲಾಗುತ್ತಿದೆ. ಉಳಿದ ಯುದ್ಧಕಾಂಡವನ್ನು ಭಾರತಚಂಪೂತಿಲಕದ ಕರ್ತೃವಾದ ಲಕ್ಷ್ಮಣನು ಬರೆದಿದ್ದಾನೆ. ಈ ಕಾವ್ಯದ ಉತ್ತರಕಾಂಡದ ಭಾಗಕ್ಕೆ ಉತ್ತರಚಂಪೂ ಎಂಬ ಹೆಸರಿದೆ. ಬೇರೆ ಬೇರೆ ಕವಿಗಳಿಂದ ರಚಿತವಾದ ಹಲಕೆಲವು ಉತ್ತರಚಂಪೂಗಳು ಉಪಲಬ್ಧವಾಗಿವೆ. ಚಂಪೂರಾಮಾಯಣವು ಧಾರಾನಗರದ ಭೋಜನಿಂದ ರಚಿತವಾಯಿತೆಂಬುದು ಎಷ್ಟರಮಟ್ಟಿಗೆ ಸರಿಯೋ ಹೇಳಲಾಗುವುದಿಲ್ಲ. ಚಂಪೂರಾಮಾಯಣದ ಕಾಂಡಗಳ ಪರಿಸಮಾಪ್ತಿ ವಾಕ್ಯದಲ್ಲಿ 'ಇತಿ ಶ್ರೀ ವಿದರ್ಭರಾಜವಿರಚಿತೇ ಚಂಪೂರಾಮಾಯಣೇ ........' ಎಂದಿದೆ. ಧಾರಾನಗರದ ಭೋಜನ ಸರಸ್ವತೀಕಂಠಾಭರಣದ ಕೊನೆಯಲ್ಲಿ 'ಇತಿ ಶ್ರೀ ಮಹಾರಾಜಾಧಿರಾಜ ಶ್ರೀ ಭೋಜ ದೇವವಿರಚಿತೇ ಸರಸ್ವತೀಕಂಠಾಭರಣೇ........' ಎಂದಿದೆ. ಈತನ ಶೃಂಗಾರಪ್ರಕಾಶದಲ್ಲೂ ಹೀಗೆಯೇ ಇದೆ. ಈ ಸರಸ್ವತೀಕಂಠಾಭರಣ, ಶೃಂಗಾರಪ್ರಕಾಶಗಳನ್ನು ರಚಿಸಿದವನು ಧಾರಾನಗರದ ಭೋಜರಾಜನೆಂಬುದು ಇತರ ಆಧಾರಗಳಿಂದಲೂ ತಿಳಿಯುತ್ತದೆ. ಧಾರಾನಗರವಿರುವುದು ಮಾಳವ ದೇಶದಲ್ಲಿ, ವಿದರ್ಭದಲ್ಲಲ್ಲ. ಆದ್ದರಿಂದ ಚಂಪೂರಾಮಾಯಣ ಬರೆದ ವಿದರ್ಭರಾಜನೂ ಧಾರಾನಗರದ ಭೋಜರಾಜನೂ ಬೇರೆ ಬೇರೆಯೆಂದೇ ಭಾವಿಸಬೇಕು. ಅಲ್ಲದೆ ಈ ವಿದರ್ಭರಾಜನ ಹೆಸರು ಗ್ರಂಥದಲ್ಲೆಲ್ಲೂ ಉಕ್ತವಾಗಿಲ್ಲ. ಯುದ್ಧಕಾಂಡವನ್ನು ರಚಿಸಿದ ಲಕ್ಷ್ಮಣನು ಮಾತ್ರ ಈತನ ಹೆಸರನ್ನು ಭೋಜನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ



ಧಾರಾನಗರದವನೆಂದು ಹೇಳಿಲ್ಲ. ಹೆಸರು ಹೇಳದೆ ಬರೀ 'ವಿದರ್ಭರಾಜರಚಿತೇ' ಎಂದಿರುವುದನ್ನೂ ಈ ಕಾವ್ಯವು 'ವೈದರ್ಭೀ ರೀತಿ'ಗೆ ಅತ್ಯುತ್ತಮ ಉದಾಹರಣೆಯಾಗಿರುವುದನ್ನೂ ಒಟ್ಟಿಗೆ ಪರಿಶೀಲಿಸಿದರೆ 'ವಿದರ್ಭರಾಜವಿರಚಿತೇ' ಎಂಬುದು ಹಿಂದೆ 'ವೈದರ್ಭೀರಾಜವಿರಚಿತೇ' ಎಂದಿದ್ದಿರಬಹುದೋ ಎನಿಸುತ್ತದೆ. ಚಂಪೂರಾಮಾಯಣದ ಕರ್ತೃ 'ವೈದರ್ಭೀರೀತಿ'ಯ ರಾಜನೆಂದು ಧಾರಾಳವಾಗಿ ಹೇಳಬಹುದು. ಕಾಲಕ್ರಮದಲ್ಲಿ 'ವೈದರ್ಭೀರಾಜ' ಎಂಬ ಶಬ್ದದ ಸಂಪೂರ್ಣಾರ್ಥದ ಅರಿವಿಲ್ಲದ ಗ್ರಂಥಪ್ರತಿಗಳನ್ನು ಬರೆಯುತ್ತಿದ್ದ ಲೇಖಕರಿಂದ 'ವಿದರ್ಭರಾಜ' ಎಂದಾಗಿರಬಹುದು. ಚಂಪೂರಾಮಾಯಣವು ಮನೋಹರವಾದ ವೈದರ್ಭೀ ರೀತಿಯಲ್ಲಿ ರಚಿತವಾದ ಕಾವ್ಯ. ಅದರಲ್ಲಿ ಎಲ್ಲ ಕಾವ್ಯಗುಣಗಳೂ ಚೆನ್ನಾಗಿ ಮೂಡಿಬಂದಿವೆ. ಅದರ ಭಾಷೆ ಪ್ರೌಢವಾದರೂ ನಿರರ್ಗಳವಾಗಿ ಹರಿದುಬಂದಿದೆ. ಅನುಪ್ರಾಸಾದಿಗಳೂ, ಸಹಜ ಸುಂದರವಾದ ಉಪಮಾನಗಳೂ ತುಂಬಿವೆ. [5]ವರ್ಣನೆಗಳು ಪ್ರತಿಭಾಪೂರ್ಣವಾಗಿವೆ.

## **ಭಾಗವತಚಂಪೂ** (ಕ್ರಿ.ಶ. ೧೧ನೆಯ ಶತಮಾನ)

ಭಾಗವತಚಂಪೂ ಆರು ಸ್ತಬಕಗಳಲ್ಲಿ ಭಾಗವತದ ಕಥೆಯನ್ನು ವಿವರಿಸುತ್ತದೆ. ಇದನ್ನು ಬರೆದ ಕವಿಯ ವಾಸ್ತವಿಕ ಹೆಸರು ತಿಳಿಯದು. ಅವನನ್ನು 'ಅಭಿನವಕಾಳಿದಾಸ' ಎಂದೇ ಕರೆಯಲಾಗುತ್ತಿದೆ. ಈತನು ೧೧ನೆಯ ಶತಮಾನದ ದಕ್ಷಿಣದೇಶದ ದೊರೆಯಾದ ರಾಜಶೇಖರನ ಆಸ್ಥಾನದಲ್ಲಿದ್ದವನೆಂದು ನಂಬಲಾಗಿದೆ. ಈತನು ಒಂದು ಅಭಿನವಭಾರತಚಂಪೂವನ್ನೂ ರಚಿಸಿದ್ದಾನೆ.

## ಸೊಡ್ಢಳನ **ಉದಯಸುಂದರೀಕಥೆ**

ಉದಯಸುಂದರೀಕಥೆಯು ಒಂದು ಚಂಪೂಕಾವ್ಯವಾದರೂ ಬಾಣನ ಕಾದಂಬರಿಯ ಮಾದರಿಯಲ್ಲಿ ರಚಿತವಾಗಿದೆ. ಇಲ್ಲೂ ಒಂದು ಗಿಳಿಯೇ ಕಥೆಯನ್ನು ಹೇಳುತ್ತದೆ. ಮೊದಲನೆಯ ಉಚ್ಛ್ವಾಸವು ಕವಿಯ ಆತ್ಮಕಥೆಯ ರೂಪದಲ್ಲಿದೆ. ಅನೇಕ ಪ್ರಾಚೀನ ಕವಿಗಳ ಉಲ್ಲೇಖ ಇದರಲ್ಲಿದೆ. ಅಭಿನಂದ,

---

5 ಉದಾಹರಣೆಗೆ ಚಂಪೂರಾಮಾಯಣ ಸುಂದರಕಾಂಡ ಶ್ಲೋಕ ೫೭ ನೋಡಿ—
ರಜನಿಚರಮಭಾಗೇ ವಾರಸೀಮಂತಿನೀನಾಂ ಕರತಲಕಲಿತಾಭಿರ್ದೀಪಿಕಾಮಾರ್ಜನೀಭಿಃ।
ದಿಶಿ ದಿಶಿ ಪರಿನಷ್ಟಂ ಯತ್ತಮಸ್ತತ್ಸಮಸ್ತಂ ಹೃದಯಮವಜಗಾಹೇ ಕೇವಲಂ ರಾವಣಸ್ಯ॥

ವಾಕ್ಪತಿರಾಜ, ಕಾಳಿದಾಸ, ಬಾಣರ ವಿಷಯದಲ್ಲಿ ಕವಿಯ ಗೌರವ ಎಷ್ಟಿತ್ತೆಂಬುದು ಈ ಶ್ಲೋಕದಿಂದ ತಿಳಿಯುತ್ತದೆ.—

ವಾಗೀಶ್ವರಂ ಹನ್ತ ಭಜೇಽಭಿನಂದಂ ಅರ್ಥೇಶ್ವರಂ ವಾಕ್ಪತಿರಾಜಮೀಡೇ ।
ರಸೇಶ್ವರಂ ಸ್ತೌಮಿ ಚ ಕಾಳಿದಾಸಂ ಬಾಣಂ ತು ಸರ್ವೇಶ್ವರಮಾನತೋಽಸ್ಮಿ ॥

ಉದಯಸುಂದರೀಕಥೆಗೆ 'ಸಾರಸ್ವತಶ್ರೀ' ಎಂಬ ಕಾವ್ಯಾಂಕಿತವಿದೆ. ಈ ಕಾವ್ಯದ ವಿಚಾರವಾಗಿಯೂ ಕವಿಯ ವಿಚಾರವಾಗಿಯೂ ಈ ಹಿಂದೆ (ಪುಟ ೯೯) ಹೇಳಿದ್ದೇವೆ.

## ೧೬ನೆಯ ಶತಮಾನದ ಚಂಪೂಕಾವ್ಯಗಳು

**ರಾಮಾನುಜಚಂಪುವು** ೧೬ನೆಯ ಶತಮಾನದ ರಾಮಾನುಜಾಚಾರ್ಯ ವಿರಚಿತಕಾವ್ಯ. ಇದರಲ್ಲಿ ಸುಪ್ರಸಿದ್ಧ ವಿಶಿಷ್ಟಾದ್ವೈತ ಸಿದ್ಧಾಂತ ಸ್ಥಾಪಕಾಚಾರ್ಯರಾದ ಶ್ರೀ ರಾಮಾನುಜಾಚಾರ್ಯರ ಚರಿತ್ರೆಯು ಮನೋಹರವೂ ಲಲಿತವೂ ಆದ ಶೈಲಿಯಲ್ಲಿ ನಿರೂಪಿತವಾಗಿದೆ.

**ಚಂಪೂಭಾರತವೂ** ಇದೇ ಶತಮಾನದ ಅನಂತಭಟ್ಟನಿಂದ ಬರೆಯಲ್ಪಟ್ಟುದು. ಈ ಕಾವ್ಯದಲ್ಲಿ ೧೨ ಸ್ತಬಕಗಳಿವೆ. ಮಹಾಭಾರತದ ದೊಡ್ಡ ಕಥೆಯು ಇದರಲ್ಲಿ ಸಂಗ್ರಹವಾಗಿ ಬರೆಯಲ್ಪಟ್ಟಿರುವುದರಿಂದ ಇದು ತುಂಬ ಜನಪ್ರಿಯವಾಗಿದೆ.

**ಭಾಗವತಚಂಪುವೂ** ಇದೇ ಅನಂತಭಟ್ಟನಿಂದ ವಿರಚಿತವಾದುದು. ಅಭಿನವಕಾಳಿದಾಸನ ಭಾಗವತಚಂಪುವಿನ ಮೇಲಿನ ಸ್ಪರ್ಧೆಯಿಂದ ಇದು ಬರೆಯಲ್ಪಟ್ಟಿತೆಂಬ ಪ್ರತೀತಿಯಿದೆ. ನಾರಾಯಣೀಯವನ್ನು ರಚಿಸಿರುವ ಮಲಬಾರಿನ ನಾರಾಯಣಭಟ್ಟನು (ಕ್ರಿ.ಶ. ೧೫೬೦-೧೬೪೬) ಅನಂತಭಟ್ಟನ ಕಾವ್ಯವನ್ನು ಉದಹರಿಸಿರುವುದರಿಂದ ಈ ಕವಿಯ ಕಾಲ ಅದಕ್ಕಿಂತ ಹಿಂದಿನದಾಗಿರಬೇಕು.

## ೧೭ನೆಯ ಶತಮಾನದ ಚಂಪೂಕಾವ್ಯಗಳು

**ನೀಲಕಂಠವಿಜಯವು** ಅರ್ವಾಚೀನ ಚಂಪೂಗಳಲ್ಲಿ ಪ್ರಸಿದ್ಧವಾದುದು. ಇದನ್ನು ಬರೆದವನು ನೀಲಕಂಠದೀಕ್ಷಿತ. ಕ್ರಿ.ಶ. ೧೬೩೭ರಲ್ಲಿ ಈ ಕಾವ್ಯದ ರಚನೆ ಸಂಪೂರ್ಣವಾದುದಾಗಿ ಕಾವ್ಯದಲ್ಲೇ ಹೇಳಿದೆ. ಇದರಲ್ಲಿ ೫ ಅಧ್ಯಾಯಗಳಿವೆ.



ಶಿವನು 'ನೀಲ-ಕಂಠ'ನಾದ ಸನ್ನಿವೇಶವೇ ಕಥಾವಸ್ತು. ನೀಲಕಂಠದೀಕ್ಷಿತನು ಒಟ್ಟು ೧೪ ಗ್ರಂಥಗಳನ್ನು ರಚಿಸಿದ್ದಾನೆ (ಪುಟ ೨೨ ನೋಡಿ).

**ವಿಶ್ವಗುಣಾದರ್ಶ**ಚಂಪುವನ್ನು ರಚಿಸಿದ ಕವಿ ವೆಂಕಟಾಧ್ವರಿ. ಈತನು ಕಾವ್ಯರಚನೆಯಲ್ಲೂ ವಿಷಯ ನಿರೂಪಣೆಯಲ್ಲೂ ಮೌಲಿಕತೆಯನ್ನು ಈ ಚಂಪುವಿನಲ್ಲಿ ಪ್ರದರ್ಶಿಸಿದ್ದಾನೆ. ಇದನ್ನು ವಿಡಂಬನ (Satire) ಕಾವ್ಯಕ್ಕೆ ಪ್ರಶಸ್ತ ಉದಾಹರಣೆಯನ್ನಾಗಿ ಕೊಡಬಹುದು. ಕವಿಯ ಕಾಲದಲ್ಲಿ ಅಂದರೆ ೧೭ನೆಯ ಶತಮಾನದಲ್ಲಿ ದಕ್ಷಿಣದೇಶದ ಬೇರೆ ಬೇರೆ ಅಂತಸ್ತಿನ ಅಥವಾ ಉದ್ಯೋಗದ ಜನರಲ್ಲಿ ಕಂಡುಬರುತ್ತಿದ್ದ ಲೋಪದೋಷಗಳನ್ನು ವಿಶ್ವಾವಸು ಮತ್ತು ಕೃಶಾನು ಎಂಬ ಇಬ್ಬರು ಗಗನಚಾರೀ ಗಂಧರ್ವರ ಸಂವಾದದ ಮೂಲಕ ಕವಿಯು ಹೊರಗೆಡಹಿ ಖಂಡಿಸಿದ್ದಾನೆ. **ವರದರಾಜಾಭ್ಯುದಯ** ಅಥವಾ **ಹಸ್ತಿಗಿರಿಚಂಪೂ** ಎಂಬ ಈ ಕವಿಯ ಮತ್ತೊಂದು ಚಂಪೂಕಾವ್ಯವು ಕಾಂಚೀಪುರದ ವರದರಾಜಸ್ವಾಮಿಯ ಭಾವಪೂರ್ಣ ಸ್ತುತಿಯ ರೂಪದಲ್ಲಿದೆ. ರಾಮಾಯಣದ ಉತ್ತರಕಾಂಡದ ಕಥೆಯನ್ನು ನಿರೂಪಿಸುವ ಈತನ **ಉತ್ತರ ಚಂಪೂ** ಅಸಮಗ್ರವಾಗಿದೆ. ಐದೈದು ಉಚ್ಛ್ವಾಸಗಳ ಎರಡು ಭಾಗಗಳ **ಶ್ರೀನಿವಾಸಚಂಪುವೂ** ಇದೇ ಕವಿಯಿಂದ ರಚಿತವಾಗಿದ್ದು ತಿರುಪತಿಯ ವೆಂಕಟೇಶ್ವರಸ್ವಾಮಿಯ ಮಾಹಾತ್ಮ್ಯವನ್ನು ಚಿತ್ರಿಸುತ್ತದೆ. ಶಬ್ದಾಲಂಕಾರಗಳೂ ಬಂಧ ಶ್ಲೋಕಗಳೂ ಈ ಕಾವ್ಯಗಳ ವೈಶಿಷ್ಟ್ಯ. (ಪುಟ ೭೯ನ್ನೂ ನೋಡಿ)

## ಇತರ ಚಂಪೂಕಾವ್ಯಗಳು

ವಾಸುದೇವರಥ ವಿರಚಿತ ಗಂಗವಂಶಾನುಚರಿತ ಚಂಪುವು (ಸು. ೧೪೨೦) ಕಳಿಂಗದೇಶದಲ್ಲಿ ಆಳಿದ ಗಂಗವಂಶದ ರಾಜರ ವಿವರಗಳನ್ನೊಳಗೊಂಡಿದೆ. ವರದಾಂಬಿಕಾಪರಿಣಯದ ವಿಚಾರವಾಗಿ (ಪುಟ ೮೯ರಲ್ಲಿ) ಹೇಳಿದ್ದೇವೆ. ಮಲಬಾರಿನ ನಾರಾಯಣಭಟ್ಟನ (ಕ್ರಿ.ಶ. ೧೬೦೦) ಪಾಂಚಾಲೀಸ್ವಯಂವರ ಚಂಪೂ ಲಲಿತವಾಗಿದೆ. ವೀರಮಿತ್ರೋದಯವೆಂಬ ಧರ್ಮಶಾಸ್ತ್ರ ಗ್ರಂಥದ ಕರ್ತೃವಾದ ಮಿತ್ರಮಿಶ್ರನು ೧೬೩೨ರಲ್ಲಿ ಬರೆದ ಆನಂದಕಂದಚಂಪುವು ಕೃಷ್ಣನ ಬಾಲಲೀಲೆಗಳನ್ನು ವಿವರಿಸುತ್ತದೆ. ಚಿದಂಬರನು (ಪುಟ ೭೯ ನೋಡಿ) ಭಾಗವತ ಚಂಪುವನ್ನೂ ಪಂಚಕಲ್ಯಾಣಚಂಪುವನ್ನೂ ರಚಿಸಿದ್ದಾನೆ. ಅದೇ ೧೬ನೆಯ ಶತಮಾನದ ಶೇಷಕೃಷ್ಣನ ಪಾರಿಜಾತಹರಣಚಂಪುವು ಪ್ರಸಿದ್ಧವಾಗಿದೆ.

# ಅಧ್ಯಾಯ ೮

## ಖಂಡಕಾವ್ಯ—ಭಾವಗೀತೆಗಳು

ಕವಿಯ ಸ್ವಂತ ಭಾವೋದ್ವೇಗಾದಿಗಳನ್ನು ವ್ಯಕ್ತಪಡಿಸುವ ಪದ್ಯಗಳಿಗೆ ಭಾವಗೀತೆಗಳೆಂದು ಸಾಮಾನ್ಯವಾಗಿ ಹೇಳಬಹುದು. ಇಂತಹ ಭಾವಾದಿಗಳನ್ನಾಗಲೀ ಪ್ರಕೃತಿಯ ಅಥವಾ ಸ್ತ್ರೀಪುರುಷರ ಬಾಹ್ಯಸೌಂದರ್ಯದ ಅನುಭವವನ್ನಾಗಲೀ ಒಂದೊಂದೇ ಬಿಡಿ ಪದ್ಯದಲ್ಲಿ ಪೂರ್ಣವಾಗಿ ಪ್ರಕಟಿಸುವುದು ಸಂಸ್ಕೃತ ಕವಿಗಳ ವೈಶಿಷ್ಟ್ಯ. ಸಂಸ್ಕೃತ ನಾಟಕಾದಿಗಳಲ್ಲೂ ಕೂಡ ಇಂತಹ ಭಾವಗೀತಾತ್ಮಕ ಬಿಡಿ ಪದ್ಯಗಳು ಹೇರಳವಾಗಿವೆ. ಈ ಬಗೆಯ ಅನೇಕ ಪದ್ಯಗಳುಳ್ಳ ಲಘುಕಾವ್ಯಗಳು ಪ್ರಾಯಃ ಎಲ್ಲ ಭಾಷೆಗಳಲ್ಲೂ ರಚಿತವಾಗಿರುತ್ತವೆ. ಇವುಗಳನ್ನು ಎರಡು ವರ್ಗಗಳಲ್ಲಿ ಪರಿಶೀಲಿಸಬಹುದು.—(೧) ದೇವತಾಸ್ತೋತ್ರಾತ್ಮಕವಾದುವು ಋಗ್ವೇದ ಸೂಕ್ತಗಳಲ್ಲೂ ಪುರಾಣೇತಿಹಾಸಗಳಲ್ಲೂ ವಿಶೇಷವಾಗಿವೆ. ಈ ಸ್ತೋತ್ರಸಾಹಿತ್ಯವು ಹೆಚ್ಚಾಗಿರುವುದು ಸಂಸ್ಕೃತ ಭಾಷೆಯಲ್ಲೇ. (೨) ಶೃಂಗಾರ ರಸಾತ್ಮಕವಾದ ಮತ್ತೊಂದು ಬಗೆಯ ಭಾವಗೀತೆಗಳು ಎಲ್ಲ ಭಾಷೆಗಳಲ್ಲೂ ಇವೆ. ಈ ಎರಡೂ ವರ್ಗಗಳ ಸಂಸ್ಕೃತ ಬಿಡಿ ಪದ್ಯಗಳು[1] ಮುಕ್ತಕಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಸುಭಾಷಿತ ಸಂಕಲನಗಳಲ್ಲಿ ಇವುಗಳನ್ನು ನಾವು ಕಾಣಬಹುದು. ಅನೇಕ ಪದ್ಯಗಳನ್ನೊಳಗೊಂಡ ಖಂಡಕಾವ್ಯರೂಪದ ಭಾವಗೀತೆಗಳಲ್ಲಿ ಶೃಂಗಾರಪ್ರಧಾನವಾದುವುಗಳನ್ನು ಇಲ್ಲಿ ಮೊದಲು ಪರಿಶೀಲಿಸಲಾಗುವುದು.

### ಕಾಳಿದಾಸನ ಋತುಸಂಹಾರ ಮತ್ತು ಮೇಘಸಂದೇಶ

**ಋತುಸಂಹಾರ**—ಷಡೃತುಗಳ ವರ್ಣನೆಯನ್ನು ನಾಯಕನು ನಾಯಿಕೆಗೆ ಹೇಳಿದಂತೆ ರಚಿತವಾಗಿರುವ ಈ 'ಋತುಸಂಹಾರ'ವು ಭಾವಗೀತಾತ್ಮಕ ಖಂಡಕಾವ್ಯ. ಇದು ಮಹಾಕವಿ ಕಾಳಿದಾಸನ ಕೃತಿಯೇ ಎಂದು ಈಗ

[1] ಸಂದರ್ಭವೇ ಮುಂತಾದ ಬಾಹ್ಯ ಉಪಕರಣಗಳಿಂದ ಮುಕ್ತವಾಗಿ ಸ್ವಯಂ ರಸಪೇಶಲವಾಗಿರುವ ಬಿಡಿ ಪದ್ಯಕ್ಕೆ ಮುಕ್ತಕವೆನ್ನುತ್ತಾರೆ. ಇಂತಹ ಬಿಡಿ ಪದ್ಯದಲ್ಲೂ ರಸಪರಿಪೋಷ ಚೆನ್ನಾಗಿಯೇ ಇರುತ್ತದೆ. ಆನಂದವರ್ಧನನು 'ಮುಕ್ತಕೇಷು ಹಿ ಪ್ರಬಂಧೇಷ್ವಿವ ರಸಬಂಧಾಭಿನಿವೇಶಿನಃ ಕವಯೋ ದೃಶ್ಯಂತೇ' ಎಂದು ಹೇಳಿದ್ದಾನೆ.



ಪ್ರಾಯಃ ಎಲ್ಲರೂ ಒಪ್ಪುತ್ತಾರೆ. ಇದು ಗ್ರೀಷ್ಮಋತುವಿನ ವರ್ಣನೆಯಿಂದ ಆರಂಭವಾಗಿ ವಸಂತಋತುವಿನ ವರ್ಣನೆಯೊಂದಿಗೆ ಮುಕ್ತಾಯವಾಗುತ್ತದೆ. ವಿಷಯಕ್ಕೆ ತಕ್ಕಂತೆ ಭಿನ್ನ ಭಿನ್ನ ವೃತ್ತಗಳಲ್ಲಿರುವ ಪದ್ಯಗಳಲ್ಲಿ ರಮ್ಯವಾದ ವರ್ಣನೆಯ ಜತೆಯಲ್ಲೇ ಸಹಜವಾದ ಭಾವಾಭಿವ್ಯಕ್ತಿಯೂ ಮೂಡಿಬಂದಿರುವುದು ಈ ಕಾವ್ಯದ ವೈಶಿಷ್ಟ್ಯ. ಪ್ರಕೃತಿಸೌಂದರ್ಯವು ಕಾಳಿದಾಸನ ಮನಸ್ಸನ್ನು ಎಷ್ಟು ಸೂರೆಗೊಂಡಿತ್ತು ಎಂಬುದು ಋತುಸಂಹಾರದ ಯಾವ ಭಾಗವನ್ನು ಅವಲೋಕಿಸಿದರೂ ಸ್ಪಷ್ಟವಾಗುತ್ತದೆ. ಒಂದೊಂದು ಶ್ಲೋಕವೂ ಸರಸಸುಂದರವಾಗಿದೆ. ವರ್ಣನೆಗಳು ಉತ್ಪ್ರೇಕ್ಷಾದಿಗಳಿಲ್ಲದೆ ಯಥಾವತ್ತಾಗಿ ಸ್ವಾಭಾವಿಕವಾಗಿವೆ. ಈ ಕಾವ್ಯಕ್ಕೆ ಮಣಿರಾಮನೆಂಬುವವನು ಬರೆದಿರುವ 'ಚಂದ್ರಿಕಾ' ಎಂಬ ವ್ಯಾಖ್ಯಾನವಿದೆ.

ಪ್ರಾಯಃ ಕಾಳಿದಾಸನು ಈ ಕಾವ್ಯವನ್ನು ಮೊದಮೊದಲು ಬರೆದಿರಬೇಕು. ಆದ್ದರಿಂದಲೇ ಇದರ ಶೈಲಿ ಮಧ್ಯೆಮಧ್ಯೆ ಸ್ವಲ್ಪ ಶಿಥಿಲವಾಗಿರುವಂತಿದೆ. ಆದರೂ ಇದು ಲಲಿತವಾದ ಪದರಚನೆಯಿಂದ ಕೂಡಿದ ಗಂಭೀರವಾದ ಕಾವ್ಯ. ಋತುಸಂಹಾರದ ಮೊದಲನೆಯ ಶ್ಲೋಕವೇ ಇದಕ್ಕೆ ಉದಾಹರಣೆ—

ಪ್ರಚಂಡಸೂರ್ಯಃ ಸ್ಪೃಹಣೀಯಚಂದ್ರಮಾಃ ಸದಾವಗಾಹಕ್ಷಮವಾರಿಸಂಚಯಃ।
ದಿನಾಂತರಮ್ಯೋಽಭ್ಯುಪಶಾಂತಮನ್ಮಥೋ ನಿದಾಘಕಾಲೋಽಯಮುಪಾಗತಃ ಪ್ರಿಯೇ ॥

**ಮೇಘಸಂದೇಶ**—ಕಾಳಿದಾಸನಿಂದಲೇ ರಚಿತವಾದ ಮೇಘಸಂದೇಶವೂ ಶೃಂಗಾರರಸಪ್ರಧಾನವಾದ ವರ್ಣನಾತ್ಮಕ ಭಾವಗೀತೆ. ವಿರಹಿಯಾದ ಯಕ್ಷನೊಬ್ಬನು ರಾಮಗಿರಿಯಿಂದ ಅಲಕಾವತಿಯಲ್ಲಿರುವ ತನ್ನ ರೂಪವತಿಯೂ ಯುವತಿಯೂ ಆದ ಪತ್ನಿಗೆ ಮೇಘದ ಮೂಲಕ ಸಂದೇಶವೊಂದನ್ನು ಹೇಳಿಕಳುಹಿಸುವಂತೆ ಈ ಚಿಕ್ಕ ಕಾವ್ಯದಲ್ಲಿ ನಿರೂಪಿತವಾಗಿದೆ. ಈ ಕಾವ್ಯದಲ್ಲಿ ಎರಡು ಸರ್ಗಗಳಿದ್ದು ಅವುಗಳಿಗೆ ಪೂರ್ವಮೇಘ ಉತ್ತರಮೇಘಗಳೆಂಬ ಹೆಸರಿವೆ. ಪೂರ್ವಮೇಘದಲ್ಲಿ ರಾಮಗಿರಿಯಿಂದ ಅಲಕಾವತಿಗೆ ಮೇಘವು ಹೋಗುವಾಗ ಮಾರ್ಗದಲ್ಲಿ ಅದು ಕಾಣಬಹುದಾದ ನಗರಾದಿಗಳ ವರ್ಣನೆಯೂ ಉತ್ತರಮೇಘದಲ್ಲಿ ಅಲಕಾವತಿಯ ಮತ್ತು ಅಲ್ಲಿದ್ದ ಯಕ್ಷನ ಗೃಹದ ವರ್ಣನೆಯೂ ಸಂದೇಶವಿಚಾರವೂ ಇದೆ. ವಿರಹಿಯ ಮನದಳಲನ್ನು ನಿರೂಪಿಸಲು ಯೋಗ್ಯವಾದ ಮಂದಾಕ್ರಾಂತಾವೃತ್ತದಲ್ಲೇ ಈ ಎರಡು ಸರ್ಗಗಳೂ ರಚಿತವಾಗಿವೆ. ಕರುಣರಸಮಿಶ್ರಿತವಾದ ವಿಪ್ರಲಂಭ ಶೃಂಗಾರರಸವು ಕಾವ್ಯದಲ್ಲಿ ಪರಿಪುಷ್ಟವಾಗಿ

ಮೂಡಿಬಂದಿದೆ. ಸ್ತ್ರೀಪುರುಷರ ಪ್ರಣಯದ ಆಳ ಮತ್ತು ಸ್ವರೂಪ ಅವರು ಆಗಲಿ ವಿರಹಾವಸ್ಥೆಯಲ್ಲಿರುವಾಗ ಕಂಡುಬರತಕ್ಕದ್ದೇ ವಿನಾ ಒಟ್ಟಿಗಿದ್ದಾಗ ಅಲ್ಲ—ಎಂಬ ಅಭಿಪ್ರಾಯವೇ ಕಾಳಿದಾಸನು ವಿಶೇಷವಾಗಿ ವಿಪ್ರಲಂಭ ಶೃಂಗಾರವನ್ನೇ ಚಿತ್ರಿಸುವುದಕ್ಕೆ ಪ್ರೇರಕವಾಗಿರಬೇಕು. ಭಾರತದ ದಕ್ಷಿಣದ ರಾಮಗಿರಿಯಿಂದ ಉತ್ತರದ ಅಲಕಾವತಿಯವರೆಗೆ ಎಲ್ಲ ಪ್ರದೇಶಗಳನ್ನೂ ಕಾಳಿದಾಸನು ಈ ಕಾವ್ಯದಲ್ಲೂ ವರ್ಣಿಸಿ ಭಾರತೀಯರಲ್ಲಿ ರಾಷ್ಟ್ರೈಕ್ಯಭಾವನೆ ಮೂಡಲು ಈಗ್ಗೆ ೨೦೦೦ ವರ್ಷಗಳ ಹಿಂದೆಯೇ ಸಹಾಯಮಾಡಿ ಮಾನ್ಯನಾಗಿದ್ದಾನೆ.

ಈ ರೀತಿಯ ಕಾವ್ಯವಸ್ತುವನ್ನು ಆರಿಸಿಕೊಳ್ಳುವುದಕ್ಕೆ ರಾಮಾಯಣದಲ್ಲಿ ವಿರಹಿಯಾದ ರಾಮನು ದೂರದ ಲಂಕೆಯಲ್ಲಿದ್ದ ಸೀತೆಗೆ ಆಂಜನೇಯನ ಮೂಲಕ ಸಂದೇಶ ಕಳುಹಿಸಿದನೆಂದು ಹೇಳಿರುವ ಭಾಗವು ಸ್ಫೂರ್ತಿ ನೀಡಿರಬೇಕೆಂದು 'ಇತ್ಯಾಖ್ಯಾತೇ ಪವನತನಯಂ ಮೈಥಿಲೀವೋನ್ಮುಖೀ ಸಾ.......' ಎಂಬ ಪದ್ಯಭಾಗದಿಂದ ಊಹಿಸಬಹುದು. ರುಕ್ಮಿಣಿಯು ತನ್ನ ವಿವಾಹಕ್ಕೆ ಮುಂಚಿತವಾಗಿ ಕೃಷ್ಣನಿಗೆ ಸಂದೇಶ ಕಳುಹಿಸಿದುದೂ, ನಳೋಪಾಖ್ಯಾನದ ಇದೇ ರೀತಿಯ ಸಂದೇಶವೂ ಕಾಳಿದಾಸನ ಮನಸ್ಸಿನಲ್ಲಿದ್ದಿರಬೇಕು. ಕಾಳಿದಾಸನೇ ಕುಂತಲೇಶನಲ್ಲಿಗೆ ವಿಕ್ರಮನ ರಾಯಭಾರಿಯಾಗಿ ಹೋಗಿದ್ದಾಗ ತನ್ನ ಪತ್ನಿಯಿಂದ ವಿರಹಿತನಾಗಿದ್ದು ಈ ಕಾವ್ಯವನ್ನು ರಚಿಸಿರಬೇಕೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಇದು ಹೇಗೇ ಇದ್ದರೂ ಇಂತಹ ಒಂದು ಸಾಮಾನ್ಯ ಸಂದೇಶವನ್ನೇ ವಸ್ತುವನ್ನಾಗಿ ಆರಿಸಿಕೊಂಡು ಸುಂದರವಾದ 'ಸಂದೇಶಕಾವ್ಯ'ಗಳೆನ್ನಬಹುದಾದ ಒಂದು ಕಾವ್ಯಜಾತಿಯ ಸೃಷ್ಟಿಗೇ ಕಾಳಿದಾಸ ಮಾರ್ಗದರ್ಶಕನಾಗಿದ್ದಾನೆನ್ನುವುದು ಮಾತ್ರ ಸತ್ಯ. ಕಾಳಿದಾಸನ ಮೇಘಸಂದೇಶದ ಮಾದರಿಯಲ್ಲಿ 'ಶುಕಸಂದೇಶ' 'ಹಂಸಸಂದೇಶ' ಮುಂತಾದ ಅನೇಕ ಸಂದೇಶ ಕಾವ್ಯಗಳು ರಚಿತವಾಗಿವೆ. ಇನ್ನೂ ಒಂದು ಬಗೆಯ ಮೇಘಸಂದೇಶದ ಅನುಕರಣವಿದೆ. ಮೇಘಸಂದೇಶದ ಪದ್ಯಗಳ ಪಾದಗಳನ್ನೇ ತಮ್ಮ ಕಾವ್ಯಗಳಲ್ಲೂ ಅನುಕ್ರಮವಾಗಿ ಬಳಸಿಕೊಂಡಿರುವುದನ್ನು ಜೈನಕವಿಗಳಲ್ಲಿ ಕಾಣುತ್ತೇವೆ. ಜಿನಸೇನನ ನಾಲ್ಕು ಸರ್ಗಗಳ ಪಾರ್ಶ್ವಾಭ್ಯುದಯವೂ ವಿಕ್ರಮನ ನೇಮಿದೂತವೂ ಈ ಗುಂಪಿಗೆ ಸೇರಿದ್ದು, ಮೇಘಸಂದೇಶದ ೧೨೦ ಮತ್ತು ೧೨೫ ಪದ್ಯಗಳ ಸಾಲುಗಳನ್ನು (ಅನುಕ್ರಮವಾಗಿ) ಒಳಗೊಂಡಿವೆ.



**ಕಾಳಿದಾಸನ ಇತರ ಖಂಡಕಾವ್ಯಗಳು :**—ಶೃಂಗಾರತಿಲಕ, ಪುಷ್ಪಬಾಣವಿಲಾಸ ಮತ್ತು ರಾಕ್ಷಸಕಾವ್ಯಗಳೂ ಕಾಳಿದಾಸ ಕೃತವೆಂದೇ ಕೆಲವರು ಹೇಳುತ್ತಾರೆ. ಶೃಂಗಾರತಿಲಕದಲ್ಲಿ ವಿಪ್ರಲಂಭ ಮತ್ತು ಸಂಭೋಗ ಶೃಂಗಾರ ಪ್ರಧಾನವಾದ ೨೩ ಮನೋಹರ ಪದ್ಯಗಳಿವೆ. ಪುಷ್ಪಬಾಣವಿಲಾಸವೂ ಇದೇ ರೀತಿಯ ೨೬ ಪದ್ಯಗಳ ಸುಂದರ ಭಾವಗೀತಾತ್ಮಕ ಲಘುಕಾವ್ಯ. ರಾಕ್ಷಸಕಾವ್ಯದಲ್ಲಿ ೨೦ ಪದ್ಯಗಳಿದ್ದು ನಾಯಕನೊಬ್ಬನು ತನ್ನ ಪ್ರೇಯಸಿಯೊಡನೆ ವನದಲ್ಲಿ ವಿಹರಿಸುವ ಸುಂದರ ಚಿತ್ರಣವಿದೆ.

## ಘಟಕರ್ಪರಕಾವ್ಯ

ಘಟಕರ್ಪರ ಕಾವ್ಯದಲ್ಲಿ ೨೨ ಪದ್ಯಗಳಿವೆ. ಯುವತಿಯೊಬ್ಬಳು ತನ್ನ ಪ್ರಿಯನಿಗೆ ಮೇಘದ ಮೂಲಕ ಒಂದು ಸಂದೇಶ ಕಳುಹಿಸಿದಂತೆ ಈ ಕಾವ್ಯದಲ್ಲಿ ನಿರೂಪಿತವಾಗಿದೆ. ಇದು ಯಮಕಪ್ರಧಾನವಾದ ಲಘುಕಾವ್ಯ. ಇದರ ಕೊನೆಯ ಪದ್ಯದಲ್ಲಿ ಕವಿಯು ಯಮಕದಲ್ಲಿ ತನ್ನನ್ನು ಮೀರಿಸಿದವರಿಗೆ 'ಘಟಕರ್ಪರ'ದಲ್ಲಿ ತಾನು ನೀರನ್ನು ಹೊತ್ತು ತಂದುಕೊಡುವುದಾಗಿ ಹೇಳಿಕೊಂಡಿದ್ದಾನೆ.[2] ಪ್ರಾಯಃ ಈ ಕಾರಣದಿಂದಲೇ ಕಾವ್ಯದ ಹೆಸರೂ 'ಘಟಕರ್ಪರ'ವೆಂದಾಗಿರಬೇಕು.

ಈ ಕವಿಯ ವಾಸ್ತವಿಕ ಹೆಸರು ಯಾವುದೆಂದು ಹೇಳಲಾಗುವುದಿಲ್ಲ. ವಿಕ್ರಮಾದಿತ್ಯನ ಆಸ್ಥಾನದ ನವಮಣಿಗಳಲ್ಲಿ 'ಘಟಕರ್ಪರ'ನ ಹೆಸರೂ ಇದೆ. ಆದ್ದರಿಂದ ಈತನು ಕಾಳಿದಾಸನ ಸಮಕಾಲೀನನಾಗಿರಬೇಕು. ಕಾಳಿದಾಸನ ಕುಮಾರಸಂಭವದ (I ೩) ಶ್ಲೋಕವನ್ನು ಮನಸ್ಸಿನಲ್ಲಿಟ್ಟುಕೊಂಡು ಈತನು

ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತೀಂದೋರಿತಿ ಯೋ ಬಭಾಷೇ ।
ನೂನಂ ನ ದೃಷ್ಟಂ [3]ಕವಿನಾಪಿತೇನ ದಾರಿದ್ರ್ಯದೋಷೋ ಗುಣರಾಶಿನಾಶೀ ॥

ಎಂದು ಹೇಳಿ ಹೀಯಾಳಿಸಿದುದಾಗಿಯೂ, ಆಗ ಛಲದಮೇಲೆ ಕಾಳಿದಾಸನು ಯಮಕಭೂಯಿಷ್ಠವಾದ ನಳೋದಯಕಾವ್ಯವನ್ನು ರಚಿಸಿದುದಾಗಿಯೂ ದಂತಕಥೆಯೊಂದರಿಂದ ತಿಳಿದುಬರುತ್ತದೆ.

---

[2] ಭಾವಾನುರಕ್ತವನಿತಾಸುರತೈಃ ಶಪೇಯಮಾಲಭ್ಯ ಚಾಂಬು ತೃಷಿತಃ ಕರಕೋಶಪೇಯಂ । ಜೀಯೇಯ ಯೇನ ಕವಿನಾ ಯಮಕೈಃ ಪರೇಣ ತಸ್ಮೈ ವಹೇಯಮುದಕಂ ಘಟಕರ್ಪರೇಣ ॥

[3] ಕವಿ-ನಾಪಿತೇನ; ಕವಿನಾ+ಅಪಿ ತೇನ ಎಂದು ಪದಚ್ಛೇದ. ನಾಪಿತ=ಕ್ಷೌರಿಕ.

### ‘ಹಾಲ’ನ **ಗಾಥಾಸಪ್ತಶತೀ** (ಕ್ರಿ.ಪೂ. ೧ನೆಯ ಶತಮಾನ?)

ಶಾತವಾಹನನೆಂದು ಕರೆಯಲ್ಪಡುತ್ತಿದ್ದ ಹಾಲನಿಂದ ವಿರಚಿತವಾದ ಸತ್ತಸಈ (ಗಾಥಾಸಪ್ತಶತೀ) ೭೦೦ ಶೃಂಗಾರರಸಪ್ರಧಾನವಾದ ಮಹಾರಾಷ್ಟ್ರೀ ಪ್ರಾಕೃತ ಭಾಷೆಯ ಪದ್ಯಗಳ ಸಂಕಲನ. ಇವುಗಳಲ್ಲಿ ಅನೇಕ ಪದ್ಯಗಳು ಕೃಷ್ಣಪ್ರೇಮವನ್ನೂ ವಿವರಿಸುತ್ತವೆ. ಈ ಪದ್ಯಗಳು ಬೇರೆ ಬೇರೆ ಕವಿಗಳಿಂದ ರಚಿತವಾದುವಾದ್ದರಿಂದ ಎಲ್ಲವೂ ಒಂದೇ ರೀತಿಯವಾಗಿಲ್ಲ. ಕೆಲವು ತೀರ ವಿಷಯಲೋಲುಪತಾಪ್ರತಿಪಾದಕವಾಗಿದ್ದರೂ ಮತ್ತೆ ಕೆಲವು ಕೋಮಲವಾದ ರಾಗ ಭಾವಗಳನ್ನು ರಮ್ಯವಾಗಿ ನಿರೂಪಿಸುತ್ತವೆ. ಬಾಣನು ಹರ್ಷಚರಿತೆಯಲ್ಲಿ ಹಾಲನನ್ನು [4]ಪ್ರಶಂಸಿಸಿದ್ದಾನೆ. ಆದ್ದರಿಂದ ಹಾಲನು ಬಾಣನಿಗಿಂತ ಹಿಂದಿನವನೇ ಆಗಿರಬೇಕು. ಆದರೆ ಈಗಿರುವ ಗಾಥಾಸಪ್ತಶತಿಯಲ್ಲಿ ಅನೇಕ ಅರ್ವಾಚೀನ ಪದ್ಯಗಳೂ ಸೇರಿಕೊಂಡಿರುವುದರಿಂದ ವ್ಯಾಕ್ಡೊನಲ್ಲನು ಇದರ ಕಾಲವನ್ನು ಕ್ರಿ.ಶ. ೧೦೦೦ ಎಂದು ನಿರೂಪಿಸಿದ್ದಾನೆ. ಮಹಾರಾಷ್ಟ್ರದಲ್ಲಿ ಕ್ರಿ.ಪೂ. ೩೧೮ರಿಂದ ೭೮ರವರೆಗೆ ಆಳಿದ ಆಂಧ್ರಭೃತ್ಯರು ಶಾತವಾಹನ ವಂಶದವರಾಗಿದ್ದರು. ಶಾತವಾಹನ ಎಂಬುದು ಪ್ರಾಕೃತದ ‘ಶಾಲೀವಾಹನ’ ಶಬ್ದದ ಸಂಸ್ಕೃತ ರೂಪ. ಆ ವಂಶದ ರಾಜರಲ್ಲಿ ‘ಹಾಲ’ನೂ ಒಬ್ಬ. ಆದ್ದರಿಂದ ಈ ಹಾಲನೇ ಗಾಥಾಸಪ್ತಶತಿಯ ಕರ್ತೃ ಎಂದು ಒಪ್ಪುವುದಾದರೆ ಈತನ ಕಾಲ ಕ್ರಿ.ಪೂ. ೧ನೆಯ ಶತಮಾನ. ಈತನು ಶಾತವಾಹನ ಕೋಶವೆಂಬ ಇನ್ನೊಂದು ಗ್ರಂಥವನ್ನು ರಚಿಸಿರುವುದಾಗಿ ತಿಳಿಯುತ್ತದೆ. ಆದರೆ ಅದು ಈಗ ಉಪಲಬ್ಧವಾಗಿಲ್ಲ.

### ಭರ್ತೃಹರಿಯ **ಶೃಂಗಾರಶತಕ** (ಕ್ರಿ.ಶ. ೭ನೆಯ ಶತಮಾನ)

ಶೃಂಗಾರಶತಕವು ಶೃಂಗಾರರಸಪ್ರಧಾನವಾದ ೧೦೦ ಬಿಡಿ ಪದ್ಯಗಳುಳ್ಳ ಲಘುಕಾವ್ಯ. ಇದರಲ್ಲಿ ಸ್ತ್ರೀಯರ ರೂಪ ಹಾವ ಭಾವ ವಿಲಾಸಾದಿಗಳೂ ಇವುಗಳಿಂದ ರಸಿಕರ ಮನಸ್ಸಿನ ಮೇಲಾಗುವ ಪರಿಣಾಮವೂ ಸುಂದರವಾಗಿ

---

4 ಅವಿನಾಶಿನಮಗ್ರಾಮ್ಯಮಕರೋತ್ಸಾತವಾಹನಃ ।
ವಿಶುದ್ಧಜಾತಿಭಿಃ ಕೋಶಂ ರತ್ನೈರಿವ ಸುಭಾಷಿತೈಃ ॥
ಜಗತ್ಯಾಂ ಗ್ರಥಿತಾ ಗಾಥಾ ಸಾತವಾಹನಭೂಭುಜಾ ।
ವ್ಯಧುರ್ಧೃತೇಸ್ತು ವಿಸ್ತಾರಮಹೋ ಚಿತ್ರಪರಂಪರಾ ॥



ಚಿತ್ರಿತವಾಗಿವೆ. ಇದು ಭರ್ತೃಹರಿ ವಿರಚಿತ. ಈ ಕವಿಯೇ ನೀತಿಶತಕ ವೈರಾಗ್ಯಶತಕಗಳೆಂಬ ಇದೇ ಮಾದರಿಯ ಆದರೆ ಉಪದೇಶಾತ್ಮಕವಾದ ಎರಡು ಲಘುಕಾವ್ಯಗಳನ್ನೂ ರಚಿಸಿದ್ದಾನೆ. ಈ ಮೂರನ್ನೂ ಒಟ್ಟಿಗೆ ಸುಭಾಷಿತತ್ರಿಶತೀ ಎಂಬ ಹೆಸರಿನಿಂದ ನಿರ್ದೇಶಿಸುವ ರೂಢಿಯಿದೆ. ಈ ಭರ್ತೃಹರಿಯೇ ವಾಕ್ಯಪದೀಯ ಎಂಬ ವ್ಯಾಕರಣ ಗ್ರಂಥವನ್ನು ಬರೆದಿರುವವನು ಎಂದು ಹೇಳಲಾಗುತ್ತಿದೆ. ಇದನ್ನು ಒಪ್ಪುವುದಾದರೆ ವಾಕ್ಯಪದೀಯದ ಕರ್ತೃವು ಕ್ರಿ.ಶ. ೬೫೧ರಲ್ಲಿ ಕಾಲವಾದುದಾಗಿ ಚೀನಾದೇಶದ ಯಾತ್ರಿಕ ಇತ್ಸಿಂಗನು ಬರೆದಿಟ್ಟಿರುವುದರಿಂದ ಈ ಶತಕಗಳೂ ೭ನೆಯ ಶತಮಾನಕ್ಕೇ ಸೇರಬೇಕು.

### ಅಮರುಕವಿಯ **ಅಮರುಶತಕ** (ಕ್ರಿ.ಶ. ೭ನೆಯ ಶತಮಾನ)

ಅಮರುಶತಕವು ಶೃಂಗಾರಪ್ರಧಾನವಾದ ೧೦೦ ಪದ್ಯಗಳ ಕಾವ್ಯ. ಇದು ಭಾವಗೀತಾತ್ಮಕ ಕಾವ್ಯಗಳಲ್ಲಿ ಅತ್ಯಂತ ಪ್ರಸಿದ್ಧವಾದುದು. ಪ್ರೇಮದ ವಿವಿಧ ಮುಖಗಳು ಇವುಗಳಲ್ಲಿ ಸೊಗಸಾಗಿ ಚಿತ್ರಿತವಾಗಿವೆ. ಒಂದೊಂದು ಪದ್ಯವೂ ‘ಮುಕ್ತಕ’ ರೂಪವಾಗಿದ್ದು ಅನಿರ್ವಚನೀಯವಾದ ಶೃಂಗಾರ ಸೌಖ್ಯಾನುಭವವನ್ನೋ, ನಿರ್ವಿಣ್ಣತೆಯನ್ನೋ, ಕೋಪವನ್ನೋ ಅಥವಾ ಪ್ರೇಮವನ್ನೋ ಮನೋಹರವಾದ ರೀತಿಯಲ್ಲಿ ನಿರೂಪಿಸುತ್ತದೆ. ಇಂತಹ ನಿರೂಪಣೆಯಲ್ಲಿ ಅಮರುಕನು ತೋರಿಸಿರುವ ಪ್ರತಿಭೆಯೂ ಪ್ರಯೋಗಿಸಿರುವ ಪದಜೋಡಣೆಯೂ ಎಲ್ಲರನ್ನೂ ಬೆರಗುಮಾಡಿಬಿಟ್ಟಿದೆ.

ಈ ಅಮರುಶತಕದಲ್ಲಿರುವ ಎಲ್ಲ ಪದ್ಯಗಳೂ ಅಮರುಕವಿ ರಚಿತವೇ ಎಂದು ಹೇಳುವುದಕ್ಕಾಗುವುದಿಲ್ಲ. ಇಲ್ಲಿನ ಕೆಲವು ಶ್ಲೋಕಗಳು ವಲ್ಲಭದೇವನ ಸುಭಾಷಿತಾವಳಿಯಲ್ಲಿ ಅರ್ಗಟ, ವಾಸುದೇವ, ವಿಜ್ಜಿಕಾ, ಅದ್ಭುತಮಲ್ಲ, ರತ್ನಾಕರ ಮುಂತಾದವರದೆಂದು ಹೇಳಲ್ಪಟ್ಟಿವೆ. ಅಮರುಶತಕಕ್ಕೆ ವೇಮಭೂಪಾಲನ ಶೃಂಗಾರದೀಪಿಕಾ, ಅರ್ಜುನವರ್ಮನ ರಸಿಕಸಂಜೀವಿನೀ, ಸೂರ್ಯದಾಸನ ಶೃಂಗಾರ ತರಂಗಿಣೀ, ಶೇಷರಾಮಕೃಷ್ಣನ ರಸಿಕಸಂಜೀವಿನೀ ಮುಂತಾದ ಅನೇಕ ವ್ಯಾಖ್ಯಾನಗಳಿವೆ.

ಈ ಅಮರುಕನು ಯಾರು ಎಂಬುದು ಸರಿಯಾಗಿ ತಿಳಿದುಬಂದಿಲ್ಲ. ವಾಮನನೂ (ಕ್ರಿ.ಶ. ೮೦೦) ಆನಂದವರ್ಧನನೂ (ಕ್ರಿ.ಶ. ೮೫೦) ಇವನ ಶ್ಲೋಕಗಳನ್ನು ಉದಾಹರಿಸಿರುವುದರಿಂದ ಇವನು ಏಳನೆಯ ಶತಮಾನಕ್ಕಿಂತ

ಈಚಿನವನಲ್ಲ. ಶಂಕರಾಚಾರ್ಯರು ಪರಕಾಯಪ್ರವೇಶಮಾಡಿ ಕಾಮಶಾಸ್ತ್ರ ಧುರೀಣತೆಯನ್ನು ಪಡೆದಿದ್ದಾಗ ಈ ಶ್ಲೋಕಗಳನ್ನು ರಚಿಸಿದರೆಂದು ಮಾಧವೀಯ ಶಂಕರವಿಜಯದಲ್ಲಿ ಹೇಳಿದೆ. ಇದನ್ನು ನಂಬುವುದರಿಂದ ಶಂಕರ ಭಗವತ್ಪಾದರಿಗೆ ಅಪಚಾರಮಾಡಿದಂತಾಗುವುದೇ ವಿನಾ ಅವರಿಗಾಗಲೀ ಈ ಶತಕಕ್ಕಾಗಲೀ ಇದರಿಂದ ಯಾವ ಉತ್ಕರ್ಷವೂ ಉಂಟಾಗದು.

### ಬಿಲ್ಹಣನ **ಚೋರಪಂಚಾಶಿಕಾ** (ಕ್ರಿ.ಶ. ೧೧ನೆಯ ಶತಮಾನ)

ಪ್ರೇಮಿಯೊಬ್ಬನು ತನ್ನ ಪ್ರೇಯಸಿಯೊಡನೆ ಅನುಭವಿಸಿದ ಅನಿರ್ವಚನೀಯ ಸೌಖ್ಯವನ್ನು ಸ್ಮರಿಸಿಕೊಂಡು ಹೇಳಿದಂತಿರುವ ೫೦ ಶ್ಲೋಕಗಳ ಚೋರಪಂಚಾಶಿಕೆಯು ಕಾಶ್ಮೀರದ ಬಿಲ್ಹಣಕವಿ (ಕ್ರಿ.ಶ. ೧೦೮೦) ವಿರಚಿತವಾದುದು. ಈ ಕವಿಯ ವಿಚಾರವಾಗಿ ಹಿಂದೆಯೇ ಹೇಳಿದ್ದೇವೆ. (೮೫-೮೭ ಪುಟ ನೋಡಿ). ಬಿಲ್ಹಣನು ತನ್ನ ಆಶ್ರಯದಾತನಾಗಿದ್ದ ರಾಜನ ಮಗಳೊಡನೆ ರಹಸ್ಯವಾಗಿ ಪ್ರೇಮಸಂಬಂಧ ಬೆಳೆಸಿದ್ದುದಾಗಿಯೂ ಈ ವಿಚಾರ ರಾಜನಿಗೆ ತಿಳಿದು ಅವನು ಬಿಲ್ಹಣನನ್ನು ಶೂಲಕ್ಕೇರಿಸುವಂತೆ ಆಜ್ಞೆಮಾಡಿದುದಾಗಿಯೂ, ವಧ್ಯಸ್ಥಾನಕ್ಕೆ ಅವನನ್ನು ಕೊಂಡೊಯ್ಯುತ್ತಿದ್ದಾಗ ಅವನು ರಾಜಪುತ್ರಿಯೊಡನೆ ತಾನು ಅನುಭವಿಸಿದ ವಿವಿಧ ಸುಖಸನ್ನಿವೇಶಗಳನ್ನು ಸ್ಮರಿಸಿ ೫೦ ಶ್ಲೋಕಗಳಲ್ಲಿ ಅವುಗಳನ್ನು ಎಲ್ಲರೂ ಕೇಳುವಂತೆ ವಿವರಿಸುತ್ತಾ ಹೋದನೆಂದೂ, ರಾಜನ ಕಿವಿಗೂ ಈ ಶ್ಲೋಕಗಳು ಮುಟ್ಟಲು ಅವನ ನೈಜಪ್ರೇಮಕ್ಕಾಗಿ ಸಂತೋಷಿಸಿ ರಾಜಪುತ್ರಿಯನ್ನು ಅವನಿಗೇ ಕೊಟ್ಟು ಮದುವೆಮಾಡಿದನೆಂದೂ ಆ ೫೦ ಶ್ಲೋಕಗಳೇ ಚೋರಪಂಚಾಶಿಕೆಯೆಂಬ ಹೆಸರಿನ ಕಾವ್ಯವೆಂದೂ ತಿಳಿಸುವ ದಂತಕಥೆಯೊಂದಿದೆ. ಈ ಶ್ಲೋಕಗಳು 'ಅದ್ಯಾಪಿ ತಾಂ' ಎಂದು ಆರಂಭಿಸಿ 'ಸ್ಮರಾಮಿ' ಎಂದು ಮುಗಿಯುತ್ತವೆ. ಎಲ್ಲ ಶ್ಲೋಕಗಳೂ ತುಂಬ ಭಾವಪೂರ್ಣವಾಗಿ ಕವಿಯ ತತ್ಕಾಲದ ಮನಃಸ್ಥಿತಿಯನ್ನು ಬಹಳ ಚೆನ್ನಾಗಿ **ಚಿತ್ರಿಸುತ್ತವೆ.**

### ಗೋವರ್ಧನನ **ಆರ್ಯಾಸಪ್ತಶತೀ** (ಕ್ರಿ.ಶ. ೧೨ನೆಯ ಶತಮಾನ)

ಆರ್ಯಾಸಪ್ತಶತಿಯಲ್ಲಿ ಆರ್ಯಾವೃತ್ತದ ೭೦೦ ಶೃಂಗಾರರಸಪ್ರಧಾನವಾದ ಪದ್ಯಗಳಿವೆ. ಇವು ಬಂಗಾಳದ ರಾಜಾ ಲಕ್ಷ್ಮಣಸೇನನ (ಕ್ರಿ.ಶ. ೧೨ನೆಯ ಶತಮಾನ) ಆಸ್ಥಾನಕವಿಯಾಗಿದ್ದ ಗೋವರ್ಧನನಿಂದ ರಚಿತವಾದುವು. ಹಾಲನ ಗಾಥಾಸಪ್ತಶತಿಯ ಮಾದರಿಯಲ್ಲೇ ಇದೂ ರಚಿತವಾಗಿದ್ದರೂ ಇದು



ಸಂಸ್ಕೃತದಲ್ಲಿದೆ; ಇಲ್ಲಿರುವ ಆರ್ಯೆಗಳೆಲ್ಲವೂ ಗೋವರ್ಧನನಿಂದಲೇ ರಚಿತವಾದುವು. ಸಂಸ್ಕೃತವರ್ಣಮಾಲೆಯ ಅಕ್ಷರಾನುಕ್ರಮವಾಗಿ ರಚಿತವಾದ ಈ ಆರ್ಯೆಗಳು ಪ್ರೇಮದ ಎಲ್ಲ ಸ್ಥಿತಿ-ಸನ್ನಿವೇಶವಿಶೇಷಗಳನ್ನೂ ಚಿತ್ರಿಸುತ್ತವೆ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ.

ಗೋವರ್ಧನನು ತನ್ನನ್ನು ಆಚಾರ್ಯನೆಂದು ಕರೆದುಕೊಂಡಿದ್ದಾನೆ. ಲಕ್ಷ್ಮಣಸೇನನನ್ನು ಸಕಲಕಲಾಕುಶಲನೆಂದು ಹೊಗಳಿದ್ದಾನೆ:—

ಸಕಲಕಲಾಃ ಕಲ್ಪಯಿತುಂ ಪ್ರಭುಃ ಪ್ರಬಂಧಸ್ಯ ಕುಮುದಬಂಧೋಶ್ಚ ।
ಸೇನಕುಲತಿಲಕಭೂಪತಿರೇಕೋ ರಾಕಾಪ್ರದೋಷಶ್ಚ ॥

### ಜಯದೇವನ **ಗೀತಗೋವಿಂದ** (ಕ್ರಿ.ಶ. ೧೨ನೆಯ ಶತಮಾನ)

ಜಯದೇವಕವಿ ವಿರಚಿತವಾದ ಗೀತಗೋವಿಂದವು ಒಂದು ಅತ್ಯುತ್ತಮ ಗೀತಕಾವ್ಯ. ಇದು ರಚಿತವಾದಾಗಿನಿಂದ ಪಂಡಿತಪಾಮರರೆಲ್ಲರಿಗೂ ತುಂಬ ಅಚ್ಚುಮೆಚ್ಚಾಗಿದೆ. ಇದರಲ್ಲಿ ರಾಧಾ-ಕೃಷ್ಣರ ಪ್ರೇಮವು ಮನೋಹರವಾದ ರೀತಿಯಲ್ಲಿ ಚಿತ್ರಿತವಾಗಿದೆ. ಬಂಗಾಳದ 'ಯಾತ್ರೆ'ಗಳಲ್ಲಿ ಕೊಂಡಾಡಲ್ಪಟ್ಟಿರುವ ಕೃಷ್ಣೋತ್ಸವಗಳ ಆಧಾರದಮೇಲೆ ಈ ಕಾವ್ಯ ರಚಿತವಾಗಿದೆ. ಇದನ್ನು ಕೃಷ್ಣ, ರಾಧೆ ಮತ್ತು ಅವಳ ಗೆಳತಿ—ಈ ಮೂರು ಪಾತ್ರಗಳುಳ್ಳ ಗೀತರೂಪಕವೆಂದೂ ಹೇಳಬಹುದು. ಈ ಕಾವ್ಯದಲ್ಲಿ ೧೨ ಸರ್ಗಗಳಿವೆ. ಒಂದೊಂದಕ್ಕೂ ಅದರಲ್ಲಿ ನಿರೂಪಿತವಾಗಿರುವ ವಿಷಯಕ್ಕೆ ಅನುಗುಣವಾಗಿ ಅಕ್ಲೇಶಕೇಶವ, ಮುಗ್ಧಮಧುಸೂದನ, ನಾಗರನಾರಾಯಣ, ಸಾನಂದದಾಮೋದರ ಇತ್ಯಾದಿ ಪ್ರತ್ಯೇಕ ಹೆಸರುಗಳಿವೆ. ಈ ಸರ್ಗಗಳು ಗೀತಾತ್ಮಕವಾಗಿಯೇ ಇದ್ದರೂ ಕಥಾಸೂತ್ರವನ್ನು ಸುಸಂಘಟಿತವಾಗಿ ಬೆಳೆಸಲು ಸರ್ಗಗಳ ಮಧ್ಯೆ ಕೆಲವು ವರ್ಣನಾತ್ಮಕ ಶ್ಲೋಕಗಳೂ ಇವೆ. ಇದರ ಗೀತಗಳನ್ನು ಎಂಟೆಂಟಾಗಿ ವಿಂಗಡಿಸಿರುವುದರಿಂದ ಇದಕ್ಕೆ ಅಷ್ಟಪದೀ ಎಂಬ ಹೆಸರೂ ಬಂದಿದೆ. ಒಟ್ಟು ಇಂತಹ ೨೪ ಅಷ್ಟಪದಿಗಳಿದ್ದು ಶಬ್ದಮಾಧುರ್ಯಕ್ಕೂ ಅರ್ಥಮಾಧುರ್ಯಕ್ಕೂ ಈ ಕಾವ್ಯ ಪ್ರಸಿದ್ಧವಾಗಿದೆ.

ಮೇಲೆ ಹೇಳಿರುವಂತೆ ಈ ಕಾವ್ಯದ ವಸ್ತು ರಾಧಾಕೃಷ್ಣರ ಪ್ರೇಮವೇ ಆದ್ದರಿಂದ ಇದು ಕೇವಲ ಶೃಂಗಾರರಸಭೂಯಿಷ್ಠವಾದುದು. ಇದರ ಮೊದಲ ಹತ್ತು ಸರ್ಗಗಳಲ್ಲಿ ರಾಧಾಮಾಧವರ ವಿಪ್ರಲಂಭಶೃಂಗಾರವೂ ಉಳಿದೆರಡು ಸರ್ಗಗಳಲ್ಲಿ ಸಂಭೋಗಶೃಂಗಾರವೂ ವರ್ಣಿತವಾಗಿದೆ. ಈ ಕಾವ್ಯವು ಗೀತಾತ್ಮಕ

ವಾಗಿರುವುದರಿಂದಲೂ ಗೋವಿಂದನ ಪ್ರೇಮವನ್ನು ಚಿತ್ರಿಸುವುದರಿಂದಲೂ ಗೀತಗೋವಿಂದವೆಂಬ ಇದರ ಹೆಸರು ಸಾರ್ಥಕವಾಗಿದೆ. ಈ ಗೀತಗೋವಿಂದದ ಲಲಿತಪದಾವಳಿ, ರಸಪೇಶಲವಾದ ಮಧುರಭಾವಗಳ ಸುಂದರ ನಿರೂಪಣೆ, ಸುರಮ್ಯಸನ್ನಿವೇಶಗಳ ಹೃದಯಂಗಮವಾದ ವರ್ಣನೆ, ಶಬ್ದಾರ್ಥಗಳ ಮಾಧುರ್ಯ ಎಂತಹವರನ್ನೇ ಆಗಲಿ ಬೆರಗುಮಾಡದಿರದು. 'ಲಲಿತಲವಂಗ ಲತಾಪರಿಶೀಲನಕೋಮಲಮಲಯಸಮೀರೇ' — ಮುಂತಾದ ಪದಗಳ ಸರಸ ಪ್ರವಾಹ ಸಂಗೀತಬಾರದವರನ್ನೂ ಹಾಡಲು ಪ್ರೇರೇಪಿಸದಿರದು.

ರಾಧಾಕೃಷ್ಣರ ನಾಯಿಕಾನಾಯಕ ಸಂಬಂಧವು ಜೀವಾತ್ಮ ಪರಮಾತ್ಮರ ನಿತ್ಯಸಂಬಂಧದ ಸೂಚಕವೆಂದೂ, ರಾಧಾಕೃಷ್ಣರ ದಿವ್ಯಪ್ರೇಮವು ಜೀವಾತ್ಮ ಪರಮಾತ್ಮರು ಪರಸ್ಪರ ಸಂಶ್ಲೇಷಕ್ಕಾಗಿ ಹಂಬಲಿಸುವುದನ್ನು ಸೂಚಿಸುತ್ತದೆಂದೂ ಈ ಗೀತಕಾವ್ಯದ ವ್ಯಾಖ್ಯಾನಕಾರರು ಆಧ್ಯಾತ್ಮಿಕ ಅರ್ಥವಿವರಣೆ ನೀಡಿರುವುದರಿಂದ ಭಕ್ತಿಪಂಥದವರೆಲ್ಲರೂ ಗೀತಗೋವಿಂದವನ್ನು ಪೂಜ್ಯಭಾವದಿಂದ ಕಾಣುತ್ತಾರೆ. ಇದನ್ನು ದೇವಪೂಜಾಕಾಲಗಳಲ್ಲೂ ಸಂಗೀತ ಸಭೆಗಳಲ್ಲೂ ಹಾಡುವ ಪದ್ಧತಿ ಅಂದಿನಿಂದ ಇಂದಿನವರೆಗೂ ಇದೆ. ಸಂಸ್ಕೃತದಲ್ಲಿ ಇಷ್ಟು ಇಂಪಾಗಿ ಹಾಡಬಹುದಾದ ಗೀತಕಾವ್ಯ ಬಹಳ ಕಡಿಮೆ. ಸಂಗೀತ ಸಾಹಿತ್ಯ ಎರಡೂ ಉನ್ನತಮಟ್ಟದಲ್ಲಿ ಬೆರೆತಿರುವುದನ್ನು ನಾವು ಗೀತಗೋವಿಂದದಲ್ಲೇ ಕಾಣಬೇಕು.

ಗೀತಗೋವಿಂದ ರಚಿಸಿದ ಜಯದೇವನ ತಂದೆ ಭೋಜದೇವ; ತಾಯಿ ರಮಾದೇವಿ; ಗೆಳೆಯರು ಪರಾಶರರೇ ಮುಂತಾದವರು; ಹೆಂಡತಿ ಪದ್ಮಾವತೀ. ಇವನ ಗ್ರಾಮ ಜಗನ್ನಾಥಪ್ರಾಂತದ ಬಿಂದುಬಿಲ್ವ. ಬಂಗಾಳದ ಬಲ್ಲಾಳಸೇನ ರಾಜನ ಮಗ ಲಕ್ಷ್ಮಣಸೇನನ (ಕ್ರಿ.ಶ. ೧೨ನೆಯ ಶತಮಾನ) ಆಸ್ಥಾನದಲ್ಲಿದ್ದ ಐದು [5]ಪಂಡಿತರತ್ನಗಳಲ್ಲಿ ಜಯದೇವನೂ ಒಬ್ಬ. ಈತನು ಗೀತಗೋವಿಂದವನ್ನು ರಚಿಸಿ ತಾನು ಹಾಡುತ್ತಿದ್ದಾಗ ಅದಕ್ಕನುಗುಣವಾದ ಅಭಿನಯದೊಡನೆ ನಾಟ್ಯಮಾಡಲು ತನ್ನ ಹೆಂಡತಿ ಪದ್ಮಾವತಿಗೆ ಕಲಿಸಿದ್ದನೆಂದೂ ಹೀಗೆ ಗಾನ ನಾಟ್ಯಗಳಿಂದ ಕೂಡಿ ಶ್ರೀಕೃಷ್ಣನ ಅಮರಪ್ರೇಮವನ್ನು ಶ್ರವ್ಯವಾಗಿಯೂ ದೃಶ್ಯವಾಗಿಯೂ ಈ ದಂಪತಿಗಳು ನಿರೂಪಿಸುತ್ತಿದ್ದರೆಂದೂ ಜಯದೇವನ ಈ ಶ್ಲೋಕದಿಂದ ಊಹಿಸಬಹುದು.—

ವಾಗ್ದೇವತಾಚರಿತಚಿತ್ರಿತಚಿತ್ತಸದ್ಮಾ ಪದ್ಮಾವತೀಚರಣಚಾರಣಚಕ್ರವರ್ತೀ ।
ಶ್ರೀವಾಸುದೇವರತಿಕೇಳಿಕಥಾಸಮೇತಮೇತಂ ಕರೋತಿ ಜಯದೇವಕವಿಃ ಪ್ರಬಂಧಂ ॥

ಜಯದೇವನ ಸಮಾಧಿಯ ಬಳಿ ಪ್ರತಿವರ್ಷವೂ ೫೦-೬೦ ಸಾವಿರ ವೈಷ್ಣವರು ಸೇರಿ ಗೀತಗೋವಿಂದವನ್ನು ಹಾಡಿ ನರ್ತಿಸುತ್ತಾರೆ. ಗೀತಗೋವಿಂದಕ್ಕೆ ಹಲವಾರು ವ್ಯಾಖ್ಯಾನಗಳಿವೆ. ಅವುಗಳಲ್ಲಿ 'ರಸಿಕಪ್ರಿಯಾ' ಮತ್ತು 'ರಸಮಂಜರೀ' ಎಂಬುವು ಪ್ರಸಿದ್ಧವಾಗಿವೆ. ೧೪ನೆಯ ಶತಮಾನದ ವಿಶ್ವನಾಥಕವಿರಾಜನು ತನ್ನ ಸಾಹಿತ್ಯದರ್ಪಣದ ೧೦ನೆಯ ಪರಿಚ್ಛೇದದಲ್ಲಿ ಗೀತಗೋವಿಂದದ 'ಉನ್ಮೀಲನ್ಮಧುಗಂಧಲುಬ್ಧ........' ಎಂಬ ಶ್ಲೋಕವನ್ನು ವೃತ್ತ್ಯನುಪ್ರಾಸಕ್ಕೆ ಉದಾಹರಿಸಿದ್ದಾನೆ.

**ರಾಮಗೀತಗೋವಿಂದ** ಮತ್ತು **ರಾಧಾಕೃಷ್ಣವಿಲಾಸ** ಇವೆರಡೂ ಜಯದೇವರಚಿತವೆಂದೇ ಹೇಳಲಾಗುತ್ತಿದೆ.

## ಮುಕ್ತಕಗಳು

ಶೃಂಗಾರಭಾವಗಳನ್ನೂ ರಸಮಯಸನ್ನಿವೇಶಗಳನ್ನೂ ಸುಂದರವಾಗಿ ಚಿತ್ರಿಸಿರುವ ಅನೇಕ ಗೀತಾತ್ಮಕ ಬಿಡಿಪದ್ಯಗಳು ಸುಭಾಷಿತ ಸಂಕಲನಗಳಲ್ಲೂ ಅಲಂಕಾರಗ್ರಂಥಗಳಲ್ಲೂ ದೊರಕುತ್ತವೆ. ಇಂತಹ ಬಿಡಿ ಪದ್ಯಗಳನ್ನು ಮುಕ್ತಕಗಳೆಂದು ಹೇಳುತ್ತಾರೆಂದು ಹಿಂದೆಯೇ ಹೇಳಿದ್ದೇವೆ. (ಪುಟ ೧೨೪ ನೋಡಿ). ಅನೇಕ ಸಂಸ್ಕೃತ ಕವಿಗಳ ಹೆಸರು ಸುಭಾಷಿತಸಂಕಲನಗಳಲ್ಲಿರುವ ಇಂತಹ ಮುಕ್ತಕಗಳ ಮೂಲಕ ಮಾತ್ರ ನಮಗೆ ತಿಳಿದುಬರುತ್ತವೆ. ಬಂಗಾಳದ ಶ್ರೀಧರಸೇನನ (ಕ್ರಿ ಶ. ೧೨೦೦) ಸದುಕ್ತಿಕರ್ಣಾಮೃತದಲ್ಲಿ ೪೪೬ ಬೇರೆ ಬೇರೆ ಕವಿಗಳ ೨೩೬೮ ಸುಭಾಷಿತ ಪದ್ಯಗಳೂ, ೧೪ನೆಯ ಶತಮಾನದ ಶಾರ್ಙ್ಗಧರ ಸಂಹಿತೆಯಲ್ಲಿ ೨೬೪ ಕವಿಗಳ ೪೬೮೯ ಶ್ಲೋಕಗಳೂ, ವಲ್ಲಭದೇವನ ಸುಭಾಷಿತಾವಳಿಯಲ್ಲಿ ೩೫೦ಕ್ಕಿಂತ ಹೆಚ್ಚು ಕವಿಗಳ ೩೫೨೭ ಶ್ಲೋಕಗಳೂ ಸಂಕಲಿತವಾಗಿದ್ದು ಸರ್ವಜನಾದರಣೀಯವಾಗಿವೆ.

[5] (a) ಗೋವರ್ಧನಶ್ಚ ಶರಣೋ ಜಯದೇವ ಉಮಾಪತಿಃ ।
ಕವಿರಾಜಶ್ಚ ರತ್ನಾನಿ ಸಮಿತೌ ಲಕ್ಷ್ಮಣಸ್ಯ ಚ ॥

(b) ಜಯದೇವನೇ ತನ್ನ ಸಮಕಾಲೀನ ಪಂಡಿತರನ್ನು ಹೀಗೆ ಕೊಂಡಾಡಿದ್ದಾನೆ—
ವಾಚಃ ಪಲ್ಲವಯತ್ಯುಮಾಪತಿಧರಃ ಸಂದರ್ಭಶುದ್ಧಿಂ ಗಿರಾಂ
ಜಾನೀತೇ ಜಯದೇವ ಏವ ಶರಣಃ ಶ್ಲಾಘ್ಯೋ ದುರೂಹದ್ರುತೇಃ ।
ಶೃಂಗಾರೋತ್ತರಸತ್ಪ್ರಮೇಯರಚನೈರಾಚಾರ್ಯಗೋವರ್ಧನ-
ಸ್ಪರ್ಧೀ ಕೋಽಪಿ ನ ವಿಶ್ರುತಃ ಶ್ರುತಿಧರೋ ಧೋಯೀ ಕವಿಃ ಕ್ಷ್ಮಾಪತಿಃ ॥

## ಸ್ತೋತ್ರಸಾಹಿತ್ಯ

ಸಂಸ್ಕೃತದಲ್ಲಿರುವಷ್ಟು ಸ್ತೋತ್ರಗಳು ಪ್ರಾಯಃ ಬೇರಾವ ಭಾಷೆಯಲ್ಲೂ ಇಲ್ಲ. ಭಕ್ತರು ತಮ್ಮ ತಮ್ಮ ಇಷ್ಟದೇವತೆಗಳ ವಿಷಯವಾಗಿ ಆರ್ತಿಯಿಂದಲೂ ಭಕ್ತಿಯಿಂದಲೂ ಅಭಿಮಾನದಿಂದಲೂ ರಚಿಸಿ ಹಾಡಿರುವ ಅನೇಕ ಕೃತಿಗಳು ಋಗ್ವೇದ ಸೂಕ್ತಗಳಲ್ಲೂ ಇತಿಹಾಸ ಪುರಾಣಗಳಲ್ಲೂ ವಿಪುಲವಾಗಿರುವುದನ್ನು ನೋಡಿದರೆ ಅತಿಮಾನುಷ ಶಕ್ತಿಯುಳ್ಳ ದೇವತೆಗಳ ಅಸ್ತಿತ್ವದಲ್ಲಿ ನಂಬಿಕೆ ಅನಾದಿಕಾಲದಿಂದ ಭಾರತೀಯರಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ಒಂದೊಂದು ದೇವತೆಯ ಶಕ್ತಿ ಒಂದೊಂದು ರೀತಿಯದು. ಆದ್ದರಿಂದ ಅಗ್ನಿ, ಇಂದ್ರ, ಮರುತ್, ವರುಣ ಮುಂತಾದ ಅನೇಕ ದೇವತೆಗಳನ್ನು ತಮ್ಮ ಅಭೀಷ್ಟ-ಸಿದ್ಧಿಯಾಗಲೆಂಬ ಪ್ರಾರ್ಥನೆಯಿಂದ ಸ್ತುತಿಸಿ ಕೊಂಡಾಡಿರುವ ಋಗ್ವೇದ ಸೂಕ್ತಗಳು ಒಂದು ಬಗೆಯ ವೈದಿಕಸ್ತೋತ್ರಗಳಾದರೆ, ಪುರಾಣೇತಿಹಾಸಗಳಲ್ಲಿರುವ ದೇವಸ್ತುತಿಗಳು ಇನ್ನೊಂದು ಬಗೆಯ ಸಂಸ್ಕೃತ ಭಾಷೆಯ ಸ್ತೋತ್ರಗಳು. ಇವಲ್ಲದೆ ಅನೇಕ ಸ್ತೋತ್ರರೂಪ ಬಿಡಿ ಪದ್ಯಗಳೂ, ಲಘುಕಾವ್ಯಗಳೂ ಗೀತಗಳೂ ಪ್ರಾಚೀನಕಾಲದಿಂದ ಪ್ರಸಕ್ತ ಕಾಲದವರೆಗೂ ಅಸಂಖ್ಯಾತ ಭಕ್ತರಿಂದಲೂ ಕವಿಗಳಿಂದಲೂ ರಚಿತವಾಗಿವೆ. ಇವು ತಮ್ಮ ಕಾವ್ಯಗುಣ, ಭಕ್ತಿಪರಾಕಾಷ್ಠೆ ಮುಂತಾದುವುಗಳಿಗೆ ಅನುಗುಣವಾಗಿ ಸೀಮಿತ ಪ್ರದೇಶಗಳಲ್ಲೋ ಅಥವಾ ಅಖಿಲಭಾರತ ವ್ಯಾಪ್ತಿಯಲ್ಲೋ ಪ್ರಸಿದ್ಧಿ ಪಡೆದು ಭಕ್ತಾದಿಗಳಿಂದ ಕಂಠಪಾಠಮಾಡಲ್ಪಟ್ಟು ನಿತ್ಯಾನುಸಂಧಾನದಲ್ಲಿವೆ.

ಕಾವ್ಯಶೈಲಿಯಲ್ಲಿ ರಚಿತವಾದ ಇಂತಹ ಸ್ತೋತ್ರಗಳಲ್ಲಿ ಕಾಳಿದಾಸನದೆಂದು ಹೇಳಲಾಗುತ್ತಿರುವ **ಶ್ಯಾಮಲಾದಂಡಕ**ವೇ ಅತ್ಯಂತ ಪ್ರಾಚೀನ. ಅದು ದಂಡಕರೂಪವಾದ ಗದ್ಯದಲ್ಲಿ ರಚಿತವಾದ ಸರಸ್ವತೀಸ್ತೋತ್ರ. ಬಾಣನ **ಚಂಡೀಶತಕವು** ೧೦೨ ಸ್ರಗ್ಧರಾವೃತ್ತದ ಪದ್ಯಗಳಲ್ಲಿ ಪಾರ್ವತಿಯನ್ನು ಕೊಂಡಾಡಿರುವ ಸ್ತುತಿ. ಬಾಣನ ಮಾವನೆಂದು ಹೇಳಲಾಗುತ್ತಿರುವ ಮಯೂರ ಕವಿಯಿಂದ ರಚಿತವಾದ **ಸೂರ್ಯಶತಕ**ದಲ್ಲಿ ಅನುಪ್ರಾಸ, ಯಮಕ ಮುಂತಾದುವುಗಳಿಂದ ಕೂಡಿದ ೧೦೦ ಶ್ಲೋಕಗಳಿವೆ. ಈ ಶತಕದಿಂದ ಸೂರ್ಯನನ್ನು ಸ್ತುತಿಸಿ ಮಯೂರಕವಿಯು ತನಗಿದ್ದ ತೊನ್ನು ರೋಗದಿಂದ ವಿಮುಕ್ತನಾದನೆಂದು ಹೇಳುವುದುಂಟು.



ಕ್ರಿ.ಶ. ೭ನೆಯ ಶತಮಾನದಲ್ಲಿ ಪೂಜ್ಯ ಶಂಕರಾಚಾರ್ಯರು ಅನೇಕ ಸ್ತೋತ್ರಗಳನ್ನು ರಚಿಸಿದರು. ಅವುಗಳಲ್ಲಿ ಕನಕಧಾರಾಲಕ್ಷ್ಮೀಸ್ತೋತ್ರ, ಲಕ್ಷ್ಮೀನೃಸಿಂಹಸ್ತೋತ್ರ, ಮೋಹಮುದ್ಗರ (ಭಜಗೋವಿಂದ ಸ್ತೋತ್ರ), ಸೌಂದರ್ಯಲಹರೀ ಅತ್ಯಂತ ಪ್ರಸಿದ್ಧವಾದುವು. ಕ್ರಿ.ಶ. ಸುಮಾರು ೭೦೦ರಲ್ಲಿ ಕೇರಳದ ಕುಲಶೇಖರರು ಹಾಡಿದ ಮುಕುಂದಮಾಲೆಯು ಸಂಸ್ಕೃತ ಸ್ತೋತ್ರ ಸಾಹಿತ್ಯದಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಈ ಕುಲಶೇಖರರೇ ಕುಲಶೇಖರ ಆಳ್ವಾರರೆಂದು ಕೆಲವರು ಹೇಳುತ್ತಾರೆ. ಮೂಗನಾಗಿಯೇ ಹುಟ್ಟಿದ್ದ 'ಮೂಕ' ಕವಿಯು ಮೂಕಪಂಚಾಶತೀ ಎಂಬ ಸ್ತೋತ್ರ ರಚಿಸಿ ಕಂಚಿಯ ಕಾಮಾಕ್ಷೀ ದೇವಿಯನ್ನು ಪೂಜಿಸಿ ಮಾತಾಡುವ ಶಕ್ತಿಯನ್ನು ಗಳಿಸಿಕೊಂಡಂತೆ ಹೇಳುತ್ತಾರೆ. ಈ ಕವಿಯು ಶ್ರೀ ಶಂಕರಾಚಾರ್ಯರ ಸಮಕಾಲೀನನೆಂದು ಭಾವಿಸಲಾಗಿದೆ. ಹರವಿಜಯದ ಕರ್ತೃವಾದ ರತ್ನಾಕರನ ವಕ್ರೋಕ್ತಿಪಂಚಾಶಿಕೆಯ ಐವತ್ತು ಶ್ಲೋಕಗಳೂ ವಕ್ರೋಕ್ತಿಯಿಂದ ಕೂಡಿವೆ. ಶಬ್ದಾಲಂಕಾರಗಳಿಂದ ಕೂಡಿ ಪಾರ್ವತಿಯನ್ನು ಕುರಿತ ಸ್ತೋತ್ರವಾದ ಆನಂದವರ್ಧನನ ದೇವೀಶತಕವು ಕಾಶ್ಮೀರದ ಅವಂತಿವರ್ಮನ ಆಶ್ರಯದಲ್ಲಿ ಸುಮಾರು ಕ್ರಿ.ಶ. ೮೫೦ರಲ್ಲಿ ರಚಿತವಾಯಿತು. ಲಕ್ಷ್ಮೀ ಮತ್ತು ವಿಷ್ಣುವನ್ನು ಕುರಿತು ರಚಿಸಿದ ಚತುಃಶ್ಲೋಕೀ ಮತ್ತು ಸ್ತೋತ್ರರತ್ನ ಎಂಬೆರಡೂ ಶ್ರೀಯಾಮುನಾಚಾರ್ಯರಿಂದ ರಚಿಸಲ್ಪಟ್ಟ ಭಕ್ತಿಭಾವಗರ್ಭಿತ ಸ್ತೋತ್ರಗಳು. ಸ್ತೋತ್ರರತ್ನದ ಕಾವ್ಯಗುಣಗಳೂ ಶ್ಲಾಘ್ಯವಾಗಿವೆ. ಪ್ರಸಿದ್ಧ ಅಲಂಕಾರಶಾಸ್ತ್ರಜ್ಞರಾದ ಅಪ್ಪಯ್ಯದೀಕ್ಷಿತರ ಕುವಲಯಾನಂದದಲ್ಲೂ ಜಗನ್ನಾಥಪಂಡಿತರ ರಸಗಂಗಾಧರದಲ್ಲೂ ಈ ಸ್ತೋತ್ರ ಉದಾಹೃತವಾಗಿದೆ. ಶರಣಾಗತಿಗದ್ಯ, ಶ್ರೀರಂಗಗದ್ಯ, ವೈಕುಂಠಗದ್ಯ—ಈ ಮೂರೂ ಭಗವದ್ರಾಮಾನುಜಾಚಾರ್ಯರಿಂದ ಗದ್ಯದಲ್ಲೇ ರಚಿತವಾದ ಸ್ತೋತ್ರಗಳು. ರಾಮಾನುಜರ ಶಿಷ್ಯರಾದ ಶ್ರೀವತ್ಸಾಂಕರು ರಚಿಸಿದ ಶ್ರೀಸ್ತವ, ಅತಿಮಾನುಷಸ್ತವ, ವರದರಾಜಸ್ತವ, ಸುಂದರಬಾಹುಸ್ತವ ಮತ್ತು ವೈಕುಂಠಸ್ತವ — ಈ ಐದೂ ಪಂಚಸ್ತವಗಳೆಂದು ಪ್ರಸಿದ್ಧವಾಗಿವೆ. ಮೂರು ಆಶ್ವಾಸಗಳಲ್ಲಿ ವಿಭಕ್ತವಾದ ಒಟ್ಟು ೩೧೦ ಲಲಿತವಾದ ಶ್ಲೋಕಗಳಿಂದ ಕೂಡಿದ ಕೃಷ್ಣಕರ್ಣಾಮೃತವು ಲೀಲಾಶುಕನೆಂದು ವಿಖ್ಯಾತನಾದ ಕೇರಳದ ಬಿಲ್ವಮಂಗಲನಿಂದ ರಚಿತವಾಗಿ ಕೇವಲ ಭಕ್ತಿಭಾವದಿಂದ ತುಂಬಿದೆ. ಇದು ಆಸೇತುಹಿಮಾಚಲದವರೆಗೆ ಸರ್ವಾದರಣೀಯವಾಗಿದೆ. ಲೀಲಾಶುಕನು ಒರಿಸ್ಸಾ ದೇಶದವನೆಂಬ ಭಾವನೆಯೂ ಇದೆ. ಈತನ ಕಾಲವೂ ಸರಿಯಾಗಿ ತಿಳಿದಿಲ್ಲ. ಕಾವ್ಯಗುಣಗಳಿಂದ

ಕೂಡಿದ ಬಹುಸಂಖ್ಯಾತ ಸ್ತೋತ್ರಗಳನ್ನು ರಚಿಸಿದ ಕೀರ್ತಿ ಪ್ರಾಯಃ ವೇದಾಂತದೇಶಿಕರೆಂದು ಪ್ರಸಿದ್ಧರಾಗಿರುವ ವೆಂಕಟನಾಥರಿಗೇ ಸಲ್ಲತಕ್ಕದ್ದು. ಇವರ ಕಾಲ ಕ್ರಿಶ. ೧೨೬೮-೧೩೬೯. ಇವರ ವಿಷಯವಾಗಿ ಹಿಂದೆ ೭೭ನೆಯ ಪುಟದಲ್ಲಿ ಹೇಳಲಾಗಿದೆ. ಇವರ ಸೋತ್ರಗಳ ವೈಖರಿ ವರ್ಣನಾತೀತ. ಇವರ ರಘುವೀರಗದ್ಯ ಮತ್ತು ಗರುಡದಂಡಕ ಎಂಬ ಎರಡು ಸ್ತೋತ್ರಗಳು ಗದ್ಯದಲ್ಲಿವೆ. ಇವರ ಅಚ್ಯುತಶತಕವು ಪ್ರಾಕೃತಭಾಷೆಯಲ್ಲಿದೆ. ಆನಂದತೀರ್ಥರ (ಕ್ರಿ.ಶ. ೧೧೯೭-೧೨೭೭) ದ್ವಾದಶಸ್ತೋತ್ರ ತುಂಬ ಪ್ರಸಿದ್ಧವಾಗಿದೆ.

ವೇದಾಂತ ದೇಶಿಕರ ವರದರಾಜಪಂಚಾಶತ್‌ಸ್ತೋತ್ರವನ್ನು ಅನುಕರಣ ಮಾಡಿ ರಚಿತವಾದ ಅಪ್ಪಯ್ಯದೀಕ್ಷಿತರ ವರದರಾಜಸ್ತವವು (ಕ್ರಿ.ಶ. ೧೬೦೦) ಕಾವ್ಯಗುಣಗಳಿಂದ ಕೂಡಿರುವ ಸುಂದರವಾದ ಸ್ತೋತ್ರ. ಕೇರಳದ ನಾರಾಯಣಭಟ್ಟಾತಿರಿಯ ನಾರಾಯಣೀಯವು (ಕ್ರಿ.ಶ. ೧೫೬೦-೧೬೪೬) ಭಾಗವತಸಂಗ್ರಹದಂತಿದೆ. ಇದು ಕೇರಳದ ಗುರುವಾಯೂರಿನ ದೇವರನ್ನು ಕುರಿತ (ಶ್ರೀಕೃಷ್ಣ) ಸ್ತೋತ್ರ. ಮಧುಸೂದನ ಸರಸ್ವತಿಯ (ಕ್ರಿ ಶ. ೧೬೦೦) ಆನಂದಮಂದಾಕಿನೀ ಸ್ತೋತ್ರದಲ್ಲಿ ಶ್ರೀಕೃಷ್ಣನ (ಪಾದಾದಿ ಶಿಖಾಂತ) ಮನೋಹರ ವರ್ಣನೆ ಇದೆ. ಮುಕುಂದಮುಕ್ತಾವಳೀ ಮತ್ತು ಗಂಧರ್ವ ಪ್ರಾರ್ಥನಾಷ್ಟಕಗಳು ಶ್ರೀಕೃಷ್ಣ ಚೈತನ್ಯರ ಶಿಷ್ಯನಾದ ರೂಪಗೋಸ್ವಾಮಿಯಿಂದ ರಚಿತವಾದುವು. ಪಂಚಲಹರಿಗಳಾದ ಸುಧಾ, ಅಮೃತ, ಲಕ್ಷ್ಮೀ, ಕರುಣಾ ಮತ್ತು ಗಂಗಾಲಹರಿಗಳು ಷಹಜಹಾನ್ ಚಕ್ರವರ್ತಿಯಿಂದ ಪಂಡಿತರಾಜನೆಂದು ಆದೃತನಾಗಿದ್ದ ಜಗನ್ನಾಥಪಂಡಿತನಿಂದ (ಕ್ರಿ.ಶ. ೧೫೯೦-೧೬೬೫) ರಚಿತವಾದುವು. ಹದಿನೇಳನೆಯ ಶತಮಾನದ ನೀಲಕಂಠದೀಕ್ಷಿತರಚಿತವಾದ ಆನಂದಸಾಗರಸ್ತವವೂ ಶಿವೋತ್ಕರ್ಷಮಂಜರಿಯೂ ಸುಪ್ರಸಿದ್ಧವಾಗಿವೆ ಹದಿನೆಂಟನೆಯ ಶತಮಾನದ ನಾರಾಯಣತೀರ್ಥರ ಶ್ರೀಕೃಷ್ಣಲೀಲಾತರಂಗಿಣಿಯು ಶ್ರೀಕೃಷ್ಣಚರಿತ್ರೆಯನ್ನು ೧೨ ತರಂಗಗಳಲ್ಲಿ ನಿರೂಪಿಸುತ್ತದೆ. ಇದರ ಎಲ್ಲ ಶ್ಲೋಕಗಳೂ ಶಾಸ್ತ್ರೀಯವಾಗಿ ಹಾಡಲು ಯೋಗ್ಯವಾಗಿರುವುದರಿಂದ ಇದೂ ಗೀತಗೋವಿಂದದಂತೆ ಸಂಗೀತಸಭೆಗಳಲ್ಲಿ ಹಾಡುವುದಕ್ಕಲ್ಲದೆ ನಾಟ್ಯಾಭಿನಯಗಳಿಗೂ ಉಪಯುಕ್ತವಾಗಿದೆ. ಹತ್ತೊಂಭತ್ತನೆಯ ಶತಮಾನದ ಮುತ್ತುಸ್ವಾಮಿ ದೀಕ್ಷಿತರ ಕೃತಿಗಳೂ ಇದೇ ರೀತಿ ಗಾನಮಾಧುರ್ಯಕ್ಕೂ ಭಕ್ತಿಪ್ರವಣತೆಗೂ ಪ್ರಸಿದ್ಧವಾಗಿವೆ.

# ಅಧ್ಯಾಯ ೯

## ಉಪದೇಶಾತ್ಮಕ ಕಾವ್ಯಗಳು

ಭಾರತೀಯರು ಪ್ರಾಚೀನಕಾಲದಿಂದಲೂ ತಮ್ಮ ಲೋಕಾನುಭವದ ಸಾರವನ್ನು ಸಂಗ್ರಹವಾಗಿ, ಮನಸ್ಸಿಗೆ ನಾಟುವಂತಹ ರೀತಿಯಲ್ಲಿ, ಬರೆದಿಡುವುದು ವಾಡಿಕೆ. ಇವುಗಳನ್ನು ನಾಣ್ಣುಡಿ, ಸೂಕ್ತಿ (gnomes) ಎಂದು ಕರೆಯುತ್ತೇವೆ. ಇವಲ್ಲದೆ ನೀತಿ ಅಥವಾ ಧರ್ಮಗಳನ್ನು ಹೇಳುವ ಬಿಡಿ ಶ್ಲೋಕಗಳನ್ನೂ ಶ್ಲೋಕಸಮೂಹಗಳನ್ನೂ ಸಂಸ್ಕೃತಕವಿಗಳು ಹೇರಳವಾಗಿ ರಚಿಸಿದ್ದಾರೆ. ಇವುಗಳನ್ನು ಉಪದೇಶಾತ್ಮಕ (didactic poetry) ಶ್ಲೋಕ ಅಥವಾ ಕಾವ್ಯಗಳೆನ್ನುತ್ತೇವೆ. ಸಂಸ್ಕೃತದಲ್ಲಿ ಈ ಎರಡು ಬಗೆಯ ಕೃತಿಗಳನ್ನೂ **ಸೂಕ್ತಿ**ಗಳು, **ಸುಭಾಷಿತ**ಗಳು—ಎಂದೇ ಕರೆಯುವುದು ರೂಢಿ. ಒಂದಕ್ಕೊಂದಕ್ಕೆ ವ್ಯತ್ಯಾಸಗಳೂ ಮೇಲ್ನೋಟಕ್ಕೆ ಅಷ್ಟಾಗಿ ಕಂಡುಬರುವುದಿಲ್ಲ. ಈ ಬಗೆಯ ಶ್ಲೋಕಗಳು ಸಂಸ್ಕೃತಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿವೆ.

ಇಂತಹ ಸೂಕ್ತಿಗಳು ಋಗ್ವೇದದಲ್ಲೂ, ಐತರೇಯ ಬ್ರಾಹ್ಮಣದಲ್ಲೂ ಉಪನಿಷತ್ತು ಇತಿಹಾಸ ಪುರಾಣಗಳಲ್ಲೂ ವಿಶೇಷವಾಗಿರುವುದನ್ನು ನೋಡಿದರೆ ಪ್ರಾಚೀನಕಾಲದಿಂದ ಭಾರತೀಯರಲ್ಲಿ ನೀತಿಪರ ಮನೋಧರ್ಮ ರೂಪಿತವಾಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಮಹಾಭಾರತ ಮತ್ತು ಪುರಾಣಗಳಲ್ಲಿ ನೀತಿ ಮತ್ತು ಧರ್ಮಬೋಧೆಗೆ ಹೆಚ್ಚು ಅವಕಾಶವಿರುವುದರಿಂದ ಅಲ್ಲಿನ ಉಪದೇಶಾತ್ಮಕಶ್ಲೋಕಗಳಲ್ಲಿ ನೀತಿತತ್ವಗಳು, ಜೀವನದ ಸುಖದುಃಖಗಳು, ಸ್ತ್ರೀಪುರುಷರ ಅವಿವೇಕಗಳು, ಅಧಿಕಾರ ಐಶ್ವರ್ಯಗಳ ಚಂಚಲತೆ, ಬರೀ ಪೌರುಷದ ನಿಷ್ಪ್ರಯೋಜಕತೆ ಮುಂತಾದ ಅನೇಕ ವಿಷಯಗಳು ನಿರೂಪಿತವಾಗಿವೆ. ಧಮ್ಮಪದದಲ್ಲೂ ಉಪಯುಕ್ತವಾದ ನಾಣ್ಣುಡಿಗಳು ಹೇರಳವಾಗಿವೆ. ಪಂಚತಂತ್ರವು ಲೋಕಾನುಭವಸಾರರೂಪವಾದ ಸೂಕ್ತಿಗಳಿಂದ ತುಂಬಿಹೋಗಿದೆಯೆಂದರೆ ಅತ್ಯುಕ್ತಿಯಾಗಲಾರದು. ಸಂಸ್ಕೃತ ನಾಟಕಗಳಲ್ಲೂ ಕಾವ್ಯಾದಿಗಳಲ್ಲೂ ನೀತಿಬೋಧಕವಾದ ಅನೇಕ ಉಕ್ತಿಗಳು, ಜಾಣ್ಮೆಯ ನುಡಿಮುತ್ತುಗಳು ಸಾಮಾನ್ಯವಾಗಿ ಇದ್ದೇ ಇವೆ. ಇಂತಹವು ಕಾಲಕ್ರಮದಲ್ಲಿ

ಅತ್ಯಂತ ಜನಪ್ರಿಯವಾಗಿ, ಬೇರೆ ಬೇರೆಯವರಿಂದ ಅವರವರ ಅಭಿರುಚಿಯಂತೆ ಒಟ್ಟಿಗೆ ಸಂಕಲಿತವಾಗಿ ಸದುಕ್ತಿಕರ್ಣಾಮೃತ, ಶಾರ್ಙ್ಗಧರಪದ್ಧತಿ, ಕವೀಂದ್ರವಚನಸಮುಚ್ಚಯ, ಸುಭಾಷಿತಾವಳೀ ಮುಂತಾದ ಸುಭಾಷಿತಸಂಗ್ರಹಗಳ ರೂಪದಲ್ಲಿ ಪ್ರಸಿದ್ಧಿಗೆ ಬಂದುವು (ಪುಟ ೧೩೩ ನೋಡಿ). ಇವುಗಳ ಜತೆಯಲ್ಲೇ ಕೆಲವು ಪ್ರಸಿದ್ಧ ಕವಿಗಳ ಸ್ವತಂತ್ರವಾದ ನೀತಿಬೋಧಕ ಶ್ಲೋಕಾತ್ಮಕಕೃತಿಗಳೂ ಬೆಳಕಿಗೆ ಬರಲಾರಂಭಿಸಿದುವು.

ಚಾಣಕ್ಯರಚಿತವೆನ್ನಲಾದ **ನೀತಿಸಾರ**ದಲ್ಲಿ ೩೪೦ ಶ್ಲೋಕಗಳಿದ್ದು ನಾವು ನಮ್ಮ ನಡತೆಯಲ್ಲಿ ಅನುಸರಿಸಬೇಕಾದ ಸಾಮಾನ್ಯ ನೀತಿಗಳನ್ನು ಬೋಧಿಸುತ್ತದೆ. ಇದೇ ಗ್ರಂಥವು ಬೇರೆ ಬೇರೆ ರೂಪದಲ್ಲಿ ಚಾಣಕ್ಯಶತಕ, ಲಘುಚಾಣಕ್ಯ, ವೃದ್ಧಚಾಣಕ್ಯ, ರಾಜನೀತಿಸಮುಚ್ಚಯ, ಚಾಣಕ್ಯರಾಜನೀತಿ ಎಂಬ ಬೇರೆ ಬೇರೆ ಹೆಸರುಗಳಿಂದ ಉಪಲಬ್ಧವಾಗಿದೆ. ಇವೆಲ್ಲ ಶ್ಲೋಕಸಂಕಲನಗಳಂತಿವೆ. ಚಂದ್ರಗುಪ್ತನ ಮಂತ್ರಿಯಾಗಿದ್ದು ಅರ್ಥಶಾಸ್ತ್ರವನ್ನು ರಚಿಸಿದ ಚಾಣಕ್ಯ (ಕೌಟಿಲ್ಯ)ನೇ ಇವುಗಳನ್ನು ರಚಿಸಿದವನೆಂದು ಹೇಳುವುದು ಸಾಧ್ಯವಾಗದು. ಸುಂದರಪಾಂಡ್ಯನ (ಕ್ರಿ.ಶ. ೫೦೦) **ನೀತಿದ್ವಿಷಷ್ಟಿಕೆ**ಯಲ್ಲಿ ೧೨೦ ಆರ್ಯಾಶ್ಲೋಕಗಳಿವೆ. ಈ ಕವಿಯು ಪಾಂಡ್ಯರ ರಾಜಧಾನಿಯಾದ ಮಧುರೆಯ ನಿವಾಸಿಯೆಂದು ಹೇಳಬಹುದು. ಏಳನೆಯ ಶತಮಾನದ ಕುಮಾರಿಲನು ಇದರಿಂದ ಶ್ಲೋಕಗಳನ್ನು ಉದಾಹರಿಸಿದ್ದಾನೆ. ಚಾಂದ್ರವ್ಯಾಕರಣದ ಕರ್ತೃವಾದ ಚಂದ್ರಗೋಮಿಯ (ಕ್ರಿ.ಶ. ೪೭೦) **ಶಿಷ್ಯಲೇಖಾಧರ್ಮಕಾವ್ಯ**ವು ರತ್ನಕೀರ್ತಿ ಎಂಬ ರಾಜಕುಮಾರನಿಗೆ ಬೌದ್ಧ ಸಂಪ್ರದಾಯದಂತೆ ಐಹಿಕ ಸಂಪತ್ತಿನ ನಶ್ವರತೆಯನ್ನು ನಿರೂಪಿಸಿ ಬರೆದ ಲೇಖದಂತಿದೆ.

ಭರ್ತೃಹರಿಯ **ನೀತಿಶತಕವು** ಈ ಬಗೆಯ ಲಘುಕಾವ್ಯಗಳಲ್ಲಿ ಅತ್ಯಂತ ಪ್ರಸಿದ್ಧವಾದುದು. ಇದರಲ್ಲಿ ಅಜ್ಞಪದ್ಧತಿ, ವಿದ್ವತ್ಪದ್ಧತಿ, ಮಾನಶೌರ್ಯಪದ್ಧತಿ, ಅರ್ಥಪದ್ಧತಿ, ದುರ್ಜನಪದ್ಧತಿ, ಸಜ್ಜನಪದ್ಧತಿ, ಪರೋಪಕಾರಪದ್ಧತಿ, ಧೈರ್ಯಪದ್ಧತಿ, ದೈವಪದ್ಧತಿ, ಕರ್ಮಪದ್ಧತಿ ಎಂಬ ಹತ್ತು ಪದ್ಧತಿಗಳಿವೆ. ಆಯಾ ಪದ್ಧತಿಗಳ ಹೆಸರಿಗೆ ತಕ್ಕಂತಹ ವಿಷಯಗಳೇ ಅಲ್ಲಿನ ಶ್ಲೋಕಗಳಲ್ಲಿ ಪ್ರತಿಪಾದಿತವಾಗಿವೆ. ಈ ಶತಕದ ಕಾವ್ಯಗುಣವು ಶ್ಲಾಘ್ಯವಾಗಿರುವುದರಿಂದಲೂ ಶ್ಲೋಕಗಳು ಮನೋಹರವಾಗಿರುವುದರಿಂದಲೂ ಈ ಶತಕವೂ ಇದರಂತೆಯೇ



ಇದೇ ಕವಿಯಿಂದ ರಚಿತವಾಗಿರುವ **ವೈರಾಗ್ಯಶತಕ**ವೂ ಅನೇಕರಿಂದ ಕಂಠಪಾಠಮಾಡಲ್ಪಡುವಷ್ಟು ತುಂಬ ಜನಪ್ರಿಯವಾಗಿವೆ. ಭರ್ತೃಹರಿಯ ಈ ಎರಡು ಶತಕಗಳೂ **ಶೃಂಗಾರಶತಕ**ವೂ ಸೇರಿ ಸುಭಾಷಿತತ್ರಿಶತೀ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಅಂಶವನ್ನು ಹಿಂದೆಯೇ (ಪುಟ ೧೨೯) ಹೇಳಿದ್ದೇವೆ. ಈ ಶತಕಗಳ ಶ್ಲೋಕಗಳೆಲ್ಲವೂ ಭರ್ತೃಹರಿಯೊಬ್ಬನಿಂದಲೇ ರಚಿತವಾದುವೆಂದು ಪ್ರಸಿದ್ಧವಾಗಿದ್ದರೂ ಕೆಲವು ಶ್ಲೋಕಗಳು ಮಾತ್ರ ಭರ್ತೃಹರಿರಚಿತವೆಂದೂ ಉಳಿದುವು ಇತರ ಕವಿಗಳಿಂದ ರಚಿತವಾಗಿದ್ದು ಶತಕರೂಪದಲ್ಲಿ ಸಂಕಲಿತವಾಗಿವೆಯೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಶಾಂತಿದೇವನಿಂದ (ಸುಮಾರು ಕ್ರಿ ಶ. ೬೦೦) ರಚಿತವಾದ **ಬೋಧಿಚರ್ಯಾವತಾರ**ವು ಬೋಧಿಸತ್ವನ ಚರ್ಯೆಯನ್ನು, ಅದರಲ್ಲೂ ಮುಖ್ಯವಾಗಿ ಮಾನವ ಪ್ರೇಮವನ್ನು ಪ್ರತಿಪಾದಿಸುತ್ತದೆ. ಇದೇ ಕವಿಯ ಶಿಕ್ಷಾಸಮುಚ್ಚಯವೂ ಸೂತ್ರಸಮುಚ್ಚಯವೂ ಪ್ರಸಿದ್ಧವಾಗಿವೆ. **ಘಟಕರ್ಪರ**ನ (ಪುಟ ೧೨೭ ನೋಡಿ) **ನೀತಿಸಾರ**ವು ೨೧ ಶ್ಲೋಕಗಳ ಸ್ವಾರಸ್ಯವಾದ ಲಘುಕಾವ್ಯ. ಇದು ಹಂದಿ-ಸಿಂಹಗಳ ಸಂವಾದರೂಪದಲ್ಲಿದೆ. ಶ್ರೀಶಂಕರಾಚಾರ್ಯರ **ಶತಶ್ಲೋಕೀ, ಮೋಹಮುದ್ಗ**ರ ಮುಂತಾದ ಕೆಲವು ಸಣ್ಣ ಸ್ತೋತ್ರಗಳೂ ಉಪದೇಶಾತ್ಮಕವಾಗಿವೆ. (ಪುಟ ೧೩೫ ನೋಡಿ).

**ಕುಟ್ಟನೀಮತ** ಅಥವಾ **ಶಂಭಲೀಮತ**ವು ದಾಮೋದರಗುಪ್ತನಿಂದ ವಿರಚಿತವಾದುದು. ಸೂಳೆಯರನ್ನು ವಿಟರಿಗೆ ಹೊಂದಿಸಿಕೊಡುವವಳಿಗೆ ಕುಟ್ಟನೀ ಅಥವಾ ಶಂಭಲೀ ಎಂಬ ಹೆಸರುಗಳಿವೆ. ಕುಟ್ಟನಿಯರ ಸ್ವಭಾವ ಚಾತುರ್ಯಗಳನ್ನು ವಿವರಿಸಿರುವ ಈ ಗ್ರಂಥಕ್ಕೆ ಕುಟ್ಟನೀಮತವೆಂಬ ಹೆಸರು ಅನ್ವರ್ಥವಾಗಿದೆ. ಇದರಲ್ಲಿ ವೇಶ್ಯೆಯರ ಚೇಷ್ಟೆಗಳೂ ವೇಶ್ಯಾಲಂಪಟರ ದುರವಸ್ಥೆಗಳೂ ನಿರೂಪಿತವಾಗಿರುವುದರಿಂದ ಇದೊಂದು ಉಪದೇಶಾತ್ಮಕ ಕಾವ್ಯ. ಈ ಕಾವ್ಯದಲ್ಲಿ ಮಧ್ಯೆ ಮಧ್ಯೆ ಕೆಲವು ಭಾಗಗಳು ಲುಪ್ತವಾಗಿ ಹೋಗಿ ಉಳಿದಿರುವ ೯೨೭ ಆರ್ಯಾಶ್ಲೋಕಗಳಲ್ಲಿ ಉಪದೇಶಾತ್ಮಕವಾದ ಹಲವಾರು ಕಥೆಗಳು ಹೆಣೆದುಕೊಂಡಿವೆ.

ಕುಟ್ಟನೀಮತದ ಕರ್ತೃವಾದ ದಾಮೋದರಗುಪ್ತನು ಬ್ರಾಹ್ಮಣನು. ಈತನು ಕಾಶ್ಮೀರದ ರಾಜಾಜಯಾಪೀಡನ (ಕ್ರಿ.ಶ. ೭೭೯-೮೧೩) ಮಂತ್ರಿ

ಯಾಗಿದ್ದನು. ರಾಜತರಂಗಿಣಿಯಲ್ಲಿ ಈತನ ಮತ್ತು ಕುಟ್ಟನೀಮತದ ಹೆಸರಿನ ಉಲ್ಲೇಖವಿದೆ. ದಾಮೋದರಗುಪ್ತನ ಇತರ ಗ್ರಂಥಗಳು ತಿಳಿದುಬಂದಿಲ್ಲ. ಕುಟ್ಟನೀಮತದ ಶೈಲಿ ಹೃದ್ಯವಾಗಿಯೂ ಸುಲಭವಾಗಿಯೂ ಪಂಡಿತಪಾಮರರೆಲ್ಲರ ಮೆಚ್ಚುಗೆಗೆ ಪಾತ್ರವಾಗಿಯೂ ಇದೆ. ಈ ಕಾವ್ಯದ ಅನೇಕ ಶ್ಲೋಕಗಳನ್ನು ಸುಭಾಷಿತ ಸಂಕಲನಗಳಲ್ಲೂ ಕಾಣಬಹುದು.

**ಭಲ್ಲಟಶತಕ**ವು ಕಾಶ್ಮೀರದ ಶಂಖವರ್ಮನ ಆಳ್ವಿಕೆಯ ಕಾಲದಲ್ಲಿ (ಕ್ರಿ.ಶ. ೮೮೪-೯೦೨) ಭಲ್ಲಟಕವಿಯಿಂದ ರಚಿತವಾಯಿತು. ಇದರಲ್ಲಿ ವ್ಯಂಗ್ಯೋಕ್ತಿಯು ವಿಶೇಷವಾಗಿರುವುದಲ್ಲದೆ ಯುಕ್ತಾಯುಕ್ತ ವಿವೇಚನೆಯಿಲ್ಲದ ಆಶ್ರಯದಾತರನ್ನು ಗೇಲಿಮಾಡುವಂತಿದ್ದರೂ ನೀತಿಬೋಧೆಯೇ ಈ ಶತಕದ ಮುಖ್ಯೋದ್ದೇಶ. ಈತನ ಶ್ಲೋಕಗಳನ್ನು ಅಭಿನವಗುಪ್ತ, ಮಮ್ಮಟ. ಕ್ಷೇಮೇಂದ್ರ ಮುಂತಾದವರು ಉಪಾಹರಿಸಿದ್ದಾರೆ.

**ಸುಭಾಷಿತರತ್ನಸಂದೋಹ**ವು ಅಮಿತಗತಿ ಎಂಬ ಜೈನಕವಿಯಿಂದ ಕ್ರಿ.ಶ. ೯೯೪ರಲ್ಲಿ ರಚಿತವಾಯಿತು. ಇದರಲ್ಲಿ ೩೨ ಅಧ್ಯಾಯಗಳಿವೆ. ಇದು ಒಳ್ಳೆಯ ನಡೆವಳಿಯ ನಿಯಮಗಳನ್ನು ಪ್ರತಿಪಾದಿಸುವುದಾಗಿದ್ದರೂ ಹಿಂದೂ ಆಚಾರಗಳನ್ನೂ ದೇವತೆಗಳನ್ನೂ ದೂಷಿಸುತ್ತದೆ. ೧೦೧೪ರಲ್ಲಿ ಇದೇ ಕವಿಯು ಬರೆದ ಧರ್ಮಪ್ರಕಾಶಿಕೆಯು ಹಿಂದೂ ಮತದ ಖಂಡನೆಯಂತೆಯೇ ಇದೆ.

ಹನ್ನೊಂದನೆಯ ಶತಮಾನದ ಕಾಶ್ಮೀರದ ಕ್ಷೇಮೇಂದ್ರನು ಅನೇಕ ಉಪದೇಶಾತ್ಮಕ ಲಘುಕಾವ್ಯಗಳನ್ನು ಬರೆದಿದ್ದಾನೆ. ಹತ್ತು ಸರ್ಗಗಳ ಅವನ **ಕಲಾವಿಲಾಸ**ದಲ್ಲಿ ಮಾನವರ ಅವಿವೇಕಗಳು ಮನಸ್ಸಿಗೆ ಹಿಡಿಯುವಂತೆ ನಿರೂಪಿತವಾಗಿವೆ. ಸದಾಚಾರ ನಿಯಮಗಳು ಆತನ **ಚಾರುಚರ್ಯೆ**ಯ ನೂರು ಶ್ಲೋಕಗಳಲ್ಲಿ ಪ್ರತಿಪಾದಿತವಾಗಿವೆ. **ಚತುರ್ವರ್ಗಸಾರಸಂಗ್ರಹ**ವು ಅದರ ಹೆಸರಿಗೆ ತಕ್ಕಂತೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಹೃದಯಂಗಮವಾಗಿ ವಿವರಿಸುತ್ತದೆ. ಇದೇ ಕವಿಯ ೬೧ ಶ್ಲೋಕಗಳ **ಸೇವ್ಯಸೇವಕೋಪದೇಶ**ವು ಸ್ವಾಮಿ-ಭೃತ್ಯರಿಬ್ಬರಿಗೂ ಒಳ್ಳೆಯ ಉಪದೇಶ ರೂಪದಲ್ಲಿದೆ. ಏಳು ಅಧ್ಯಾಯಗಳಲ್ಲಿ ರಚಿತವಾಗಿರುವ ಈತನ **ದರ್ಪದಳನ**ವು ಮಾನವನ ದರ್ಪಕ್ಕೆ ಕಾರಣಭೂತವಾದ ಕುಲ, ಧನ, ಶ್ರುತ, ರೂಪ, ಶೌರ್ಯ, ದಾನ, ತಪಸ್ಸು—ಈ [1]ಏಳನ್ನೂ ಖಂಡಿಸುತ್ತದೆ. ಎಂಟು ಅಧ್ಯಾಯಗಳ



**ಸಮಯಮಾತೃಕೆ**ಯಲ್ಲಿ ಕ್ಷೇಮೇಂದ್ರನು ವಾರಾಂಗನೆಯರ ಮಾಯಾಜಾಲಗಳನ್ನೂ ಕುತಂತ್ರಗಳನ್ನೂ ನಿರೂಪಿಸಿದ್ದಾನೆ. ಈತನ ಇತರ ನೀತಿಬೋಧಕ ಲಘುಕಾವ್ಯಗಳ ಹೆಸರುಗಳನ್ನು ಪುಟ ೬೧ರಲ್ಲಿ ಹೇಳಿದ್ದೇವೆ.

ಕಾಶ್ಮೀರದ ಅರಸನಾಗಿದ್ದ (ಕ್ರಿ.ಶ. ೧೦೮೯-೧೧೦೧) ಹರ್ಷನ ಆಸ್ಥಾನ ಕವಿಯಾಗಿದ್ದ ಶಂಭುವು ೧೦೮ ಶ್ಲೋಕಗಳ **ಅನ್ಯೋಕ್ತಿಮುಕ್ತಾಲತಾಶತಕ** ಎಂಬ ಲಘು ಕಾವ್ಯದಲ್ಲಿ ಮಾನವರ ಅವಿವೇಕಗಳನ್ನು 'ಅನ್ಯೋಕ್ತಿ'ಯ ಮೂಲಕ ಗೇಲಿಮಾಡಿದ್ದಾನೆ. **ಸೋಮಪಾಲವಿಲಾಸ**ವನ್ನು ಬರೆದ (ಪುಟ ೮೮ ನೋಡಿ) ಜಲ್ಹಣನ (ಕ್ರಿ.ಶ. ೧೧೫೦) **ಮುಗ್ಧೋಪದೇಶ**ವು ಕ್ಷೇಮೇಂದ್ರ ರಚಿತವಾದ ಸಮಯಮಾತೃಕೆಯಂತೆಯೇ ವಾರಾಂಗನೆಯರ ಮಾಯಾಜಾಲಗಳನ್ನು ವಿವರಿಸುತ್ತದೆ. ಕಾಶ್ಮೀರದ ಶಿಲ್ಹಣಕವಿರಚಿತವಾದ **ಶಾಂತಿಶತಕ (ಶಿಲ್ಹಣಶತಕ)**ವು ಭರ್ತೃಹರಿಯ ವೈರಾಗ್ಯಶತಕದ ಅನುಕರಣ. ಕ್ರಿಸ್ತಶಕ ೧೨೦೫ರಲ್ಲಿ ರಚಿತವಾದ ಸದುಕ್ತಿಕರ್ಣಾಮೃತದಲ್ಲಿ ಇದರ ಶ್ಲೋಕಗಳು ಉದಾಹೃತವಾಗಿವೆ. ಸೋಮಪ್ರಭಾಚಾರ್ಯನಿಂದ ಕ್ರಿ.ಶ. ೧೨೭೬ರಲ್ಲಿ ರಚಿತವಾದ **ಶೃಂಗಾರವೈರಾಗ್ಯತರಂಗಿಣಿ**ಯು ಎರಡೆರಡರ್ಥಗಳುಳ್ಳ ದ್ವಿಸಂಧಾನಕಾವ್ಯ. ಇದರಲ್ಲಿ ೪೬ ಶ್ಲೋಕಗಳಿವೆ. ಇದು ಸ್ತ್ರೀವ್ಯಸನದಿಂದಾಗುವ ದುಷ್ಪರಿಣಾಮಗಳನ್ನೂ ವೈರಾಗ್ಯದ ಸತ್ಪರಿಣಾಮಗಳನ್ನೂ ವಿವರಿಸುತ್ತದೆ.

ವೆಂಕಟನಾಥ (ವೇದಾಂತದೇಶಿಕ)ರ **ಸುಭಾಷಿತನೀವಿ**ಯು ಸ್ವತಂತ್ರವಾದ ಉಪದೇಶಾತ್ಮಕ ಲಘುಕಾವ್ಯ. ಇದರ ೧೪೫ ಶ್ಲೋಕಗಳನ್ನು ೧೨ ಪದ್ಧತಿಗಳಲ್ಲಿ ವಿಂಗಡಿಸಲಾಗಿದೆ. ಮಾನವನ ಸದಾಚಾರ ವ್ಯವಹಾರಗಳಿಗೆ ಅತ್ಯವಶ್ಯಕವಾದ ನೀತಿ ನಿಯಮಗಳು ಈ ಶ್ಲೋಕಗಳಲ್ಲಿ ಹೃದಯಂಗಮವಾಗಿ ನಿರೂಪಿತವಾಗಿವೆ. ಈ ಕವಿಯ **ವೈರಾಗ್ಯಪಂಚಕ**ವೆಂಬ ಐದು ಶ್ಲೋಕಗಳು ಐಹಿಕಭೋಗಗಳ ವಿಡಂಬನೆಯಾಗಿದ್ದು ವಿರಕ್ತಿಯ ಮೇಲ್ಮೆಯನ್ನು ಒತ್ತಿ ಹೇಳುತ್ತವೆ.

ಹದಿನೈದನೆಯ ಶತಮಾನದ ಅಂತ್ಯಭಾಗದಲ್ಲಿ ದ್ಯಾದ್ವಿವೇದನಿಂದ ಬರೆಯಲ್ಪಟ್ಟ **ನೀತಿಮಂಜರಿ**ಯ ೨೦೦ ಶ್ಲೋಕಗಳಲ್ಲಿನ ನೀತಿವಾಕ್ಯಗಳು ಸಾಯಣ

---

1 ಕುಲಂ ವಿತ್ತಂ ಶ್ರುತಂ ರೂಪಂ ಶೌರ್ಯಂ ದಾನಂ ತಪಸ್ತಥಾ।
ಪ್ರಾಧಾನ್ಯೇನ ಮನುಷ್ಯಾಣಾಂ ಸಪ್ತೈತೇ ಮದಹೇತವಃ ॥

ವಿರಚಿತ ವೇದಭಾಷ್ಯಗಳಿಂದ ಆರಿಸಿದ ಉಪಾಖ್ಯಾನಗಳ ದೃಷ್ಟಾಂತಗಳೊಡನೆ ನಿರೂಪಿತವಾಗಿವೆ. ವಲ್ಲಭದೇವನಿಗಿಂತ ಪ್ರಾಚೀನನಾದ ಕುಸುಮದೇವನ **ದೃಷ್ಟಾಂತಶತಕ**ದ ಒಂದೊಂದು ಶ್ಲೋಕದಲ್ಲೂ ಒಂದೊಂದು ನೀತಿಯು ದೃಷ್ಟಾಂತದೊಡನೆ ವಿವರಿಸಲ್ಪಟ್ಟಿದೆ. ಕ್ರಿ.ಶ. ೧೪೩೪ರಲ್ಲಿ ದೇಹಳನ ಮಗನಾದ ಧನದರಾಜನು ರಚಿಸಿದ **ನೀತಿ, ಶೃಂಗಾರ** ಮತ್ತು **ವೈರಾಗ್ಯಶತಕ**ಗಳು ಭರ್ತೃಹರಿಯ ಶತಕಗಳಿಗಿಂತ ತೀರ ಕೆಳಮಟ್ಟದವು.

ಸುಪ್ರಸಿದ್ಧ ಆಲಂಕಾರಿಕನಾದ ಜಗನ್ನಾಥಪಂಡಿತನ (ಕ್ರಿ.ಶ. ೧೫೯೦-೧೬೬೫) **ಭಾಮಿನೀವಿಲಾಸ**ದಲ್ಲಿ ಅನ್ಯೋಕ್ತಿ, ಶೃಂಗಾರ, ಕರುಣ ಮತ್ತು ಶಾಂತಿಗಳನ್ನು ಪ್ರತಿಪಾದಿಸಿರುವ ಕ್ರಮವಾಗಿ ೧೦೧, ೧೦೦, ೧೯ ಮತ್ತು ೩೨ ಶ್ಲೋಕಗಳ ನಾಲ್ಕು ಉಲ್ಲಾಸಗಳಿವೆ. ಇದರ ಶೈಲಿ ಸಹಜಸುಂದರವಾಗಿದ್ದು ವಿಷಯನಿರೂಪಣೆ ಶ್ಲಾಘ್ಯರೀತಿಯಲ್ಲಿದೆ. ಕವಿಯು ತನ್ನ 'ಭಾಮಿನೀ' ಎಂಬ ಸದ್ಯೋಮೃತಳಾದ ಪತ್ನಿಯ ಹೆಸರಿನಲ್ಲಿ ಈ ಕಾವ್ಯವನ್ನು ಅಂಕಿತಮಾಡಿರುವುದಾಗಿ ಹೇಳುತ್ತಾರೆ.

ಹದಿನೇಳನೆಯ ಶತಮಾನದ ಗುಮಾನೀ ಕವಿಯ **ಉಪದೇಶಶತಕ**ವೂ ವೇಂಕಟಾಧ್ವರಿಯ **ಸುಭಾಷಿತಕೌಸ್ತುಭ**ವೂ ಉಪಯುಕ್ತವಾದ ಉಪದೇಶಗಳಿಂದ ಕೂಡಿವೆ. ನೀಲಕಂಠದೀಕ್ಷಿತನ **ಶಾಂತಿವಿಲಾಸ**ದಲ್ಲಿ 'ಶಾಂತಿ'ಯ ಹಿರಿಮೆಯನ್ನು ವಿವರಿಸುವ ೫೧ ಶ್ಲೋಕಗಳೂ **ವೈರಾಗ್ಯಶತಕ**ದಲ್ಲಿ ವೈರಾಗ್ಯವನ್ನು ನಿರೂಪಿಸುವ ೧೦೦ ಶ್ಲೋಕಗಳೂ ಇವೆ. ಇದೇ ಕವಿಯ **ಸಭಾರಂಜನಶತಕ**ವೂ, ಕಲಿಯುಗದಲ್ಲಿ ಸಾಮಾನ್ಯವಾಗಿರುವ ದುಶ್ಚಾಳಿಗಳನ್ನು ನೂರು ಶ್ಲೋಕಗಳಲ್ಲಿ ವಿಡಂಬನಾತ್ಮಕವಾಗಿ ನಿರೂಪಿಸಿರುವ **ಕಲಿವಿಡಂಬನ**ವೂ, ಅನ್ಯಾಪದೇಶದಿಂದ ಮಾನವನ ಸಹಜದೌರ್ಬಲ್ಯಗಳನ್ನು ಗೇಲಿಮಾಡುವ ರೀತಿಯಲ್ಲಿ ಚಿತ್ರಿಸಿರುವ **ಅನ್ಯಾಪದೇಶಶತಕ**ವೂ ತುಂಬ ಪ್ರಸಿದ್ಧವಾಗಿವೆ.

# ಅಧ್ಯಾಯ ೧೦

## ಸಂಸ್ಕೃತ ನಾಟಕ

### ೧. ಸಂಸ್ಕೃತನಾಟಕದ ಉತ್ಪತ್ತಿ

'ನಾಟಕಾಂತಂ ತವಿತ್ವಂ' ಎಂಬ ಸಂಸ್ಕೃತ ನಾಣ್ಣುಡಿ ಯಾವ ಭಾಷೆಯ ಸಾಹಿತ್ಯಕ್ಕೆ ಬೇಕಾದರೂ ಅನ್ವಯಿಸಬಹುದಾದುದು. ನಾಟಕವು ಸಾಹಿತ್ಯದ ಕೆನೆಯಿದ್ದಂತೆ; ನಾಟಕದ ರಚನೆ ಕವಿತ್ವದ ಪರಾಕಾಷ್ಠೆ. ನಾಟಕವನ್ನು ಜೀವನದ ಪ್ರತಿಬಿಂಬವೆನ್ನುವುದೂ ಉಂಟು. ನಮ್ಮ ಪ್ರಾಚೀನ ನಾಟಕಗಳಿಂದ ಆ ಕಾಲದ ಸಾಮಾಜಿಕಪರಿಸ್ಥಿತಿಯನ್ನು ತಿಳಿಯಲು ಅವಕಾಶವಿದೆ. ಆದರೆ ನಮಗೆ ದೊರೆತಿರುವ ಅತ್ಯಂತ ಪ್ರಾಚೀನ (ಸಂಸ್ಕೃತ) ನಾಟಕಗಳು ರಾಮಾಯಣ ಮಹಾಭಾರತಗಳಿಗಿಂತ ಈಚಿನವು. ಅಷ್ಟೇ ಅಲ್ಲ; ಅವೇ ಸಂಸ್ಕೃತ ನಾಟಕಗಳಲ್ಲಿ ಅತ್ಯುತ್ತಮವಾದುವು. ನಾಟಕಗಳ ಸ್ವರೂಪ ಆ ವೇಳೆಗೇ ಒಂದು ಪರಿಪಕ್ವಸ್ಥಿತಿಯನ್ನು ಪಡೆದಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅಲ್ಲಿಂದೀಚಿನ ಕೃತಿಗಳಲ್ಲಿ ಯಾವ ಬಗೆಯ ಮಾರ್ಪಾಟೂ ಇಲ್ಲದಿರುವುದೂ ಈ ಅಂಶವನ್ನೇ ಪುಷ್ಟೀಕರಿಸುತ್ತದೆ. ಇದನ್ನು ಗಮನಿಸಿದರೆ ಸಂಸ್ಕೃತನಾಟಕಗಳ ರಚನೆ ಅದಕ್ಕೂ ಎಷ್ಟೋ ಹಿಂದಿನಿಂದ ನಡೆದುಬಂದಿರಬೇಕೆಂದು ಹೇಳಲೇಬೇಕು. ನಮಗೆ ದೊರೆತಿರುವ ಅತ್ಯಂತ ಪ್ರಾಚೀನ ಕೃತಿಯಾದ ಋಗ್ವೇದದಲ್ಲಿರುವ ಸಂವಾದಸೂಕ್ತಗಳಲ್ಲಿ ನಾಟಕದ ರಚನೆಯ ಪ್ರಾರಂಭವನ್ನು ನಾವು ಕಾಣಬಹುದಾದರೂ ಅಲ್ಲಿಂದ ಈಚೆಗೆ ಸಹಸ್ರಾರು ವರ್ಷಗಳವರೆಗೆ ರಚಿತವಾದ ಯಾವ ನಾಟಕಗಳೂ ನಮಗೆ ಉಪಲಬ್ಧವಾಗಿಲ್ಲದಿರುವುದರಿಂದ ನಾಟಕದ ಉತ್ಪತ್ತಿ ಮತ್ತು ಬೆಳವಣಿಗೆಯ ವಿಚಾರವಾಗಿ ನಿಶ್ಚಿತವಾಗಿ ಏನನ್ನೂ ಹೇಳಲಾಗದೆ ಬೇರೆ ಬೇರೆ ವಿದ್ವಾಂಸರು ಬೇರೆ ಬೇರೆ ರೀತಿ ಅಭಿಪ್ರಾಯಪಡಲು ಅವಕಾಶವಾಗಿದೆ.

**ಗ್ರೀಕ್ ಉತ್ಪತ್ತಿ** — ಅಲೆಕ್ಸಾಂಡರನ ದಂಡಯಾತ್ರೆಯ ಬಳಿಕ ಇಂಡಿಯಾದೇಶದ ರಾಜರ ಆಸ್ಥಾನಗಳಲ್ಲಿ ಗ್ರೀಕ್ ನಾಟಕಗಳ ಪ್ರದರ್ಶನಗಳು ಆಗಾಗ್ಗೆ ನಡೆಯುತ್ತಿದ್ದುವು. ಈ ಗ್ರೀಕ್ ನಾಟಕಗಳೂ ಭಾರತೀಯ ಸಂಸ್ಕೃತ

ನಾಟಕಗಳೂ ಹೊರನೋಟಕ್ಕೆ ಒಂದೇ ಬಗೆಯಾಗಿ ಕಾಣುತ್ತವೆ. ಈ ಎರಡೂ ಅಂಕಗಳಾಗಿ ವಿಭಾಗಿಸಲ್ಪಟ್ಟಿವೆ. ಈ ಅಂಕಗಳ ಸಂಖ್ಯೆ ಸಾಮಾನ್ಯವಾಗಿ ಎರಡರಲ್ಲೂ ಐದೇ. ಪ್ರತಿಯೊಂದು ಅಂಕದ ಕೊನೆಯಲ್ಲೂ ಎಲ್ಲ ಪಾತ್ರಗಳೂ ಹೊರಟುಹೋಗುತ್ತಾರೆ. ಹೊಸ ಪಾತ್ರವು ರಂಗಮಂಚದ ಮೇಲೆ ಬರುವುದಕ್ಕೆ ಮುಂಚೆ ಬೇರೊಬ್ಬನಿಂದ ಸೂಚಿತವಾಗುತ್ತದೆ. ಇಷ್ಟೇ ಅಲ್ಲದೆ ನಾಟಕೋಪಯುಕ್ತವಾದ 'ಪರದೆ'ಗೆ ಸಂಸ್ಕೃತದಲ್ಲಿ [1]'ಯವನಿಕಾ' ಎಂದು ಹೇಳಲಾಗುತ್ತದೆ. ಯವನಿ (ಯವನಸ್ತ್ರೀ)ಯರು ಈ ನಾಟಕಗಳಲ್ಲಿನ ನಾಯಕರ ಪರಿಚಾರಿಕೆಯರಾಗಿ ರಂಗಮಂಚದ ಮೇಲೆ ಬರುವುದೂ ಗಮನಾರ್ಹವಾದ ಅಂಶವೇ. ಇಷ್ಟು ಮಟ್ಟಿಗೆ ಇರುವ ಸಂಸ್ಕೃತ ಮತ್ತು ಗ್ರೀಕ್ ನಾಟಕಗಳ ಹೊರಸಾಮ್ಯವನ್ನು ಕಂಡ ಕೆಲ ವಿದ್ವಾಂಸರು ಸಂಸ್ಕೃತನಾಟಕಗಳು ಗ್ರೀಕ್ ನಾಟಕಗಳಿಂದ ಪ್ರಭಾವಿತವಾಗಿವೆ ಎಂದು ಭಾವಿಸಿದರು. ಈ ಭಾವನೆಯೇ ಬಹಳ ಕಾಲ ಬಹುಸಮ್ಮತವಾಗಿಯೂ ಇತ್ತು. ಆದರೆ ಕಾಲಕ್ರಮದಲ್ಲಿ ಸಂಸ್ಕೃತ ಮತ್ತು ಗ್ರೀಕ್ ನಾಟಕಗಳಲ್ಲಿನ ವಾಸ್ತವಿಕ ವ್ಯತ್ಯಾಸಗಳನ್ನು ಮನಗಂಡ ವಿಮರ್ಶಕರು ಇವೆರಡಕ್ಕೂ ಯಾವ ಬಗೆಯ ಸಂಬಂಧವೂ ಇಲ್ಲವೆಂಬುದನ್ನು ಪ್ರತಿಪಾದಿಸಿದರು. ಮೂಲತಃ ಧ್ಯೇಯದಲ್ಲಿ ಕೂಡ ಇವೆರಡೂ ಭಿನ್ನವಾದುವು. ಕಾಲೈಕ್ಯ (unity of time) ದೇಶೈಕ್ಯ (unity of place)ಗಳು ಗ್ರೀಕ್ ನಾಟಕಗಳಲ್ಲಿ ಅತ್ಯವಶ್ಯಕ; ಭಾರತೀಯ ನಾಟಕಗಳಲ್ಲಿ ಇವಕ್ಕೆ ಬೆಲೆಯಿಲ್ಲ. ಆದರೆ ಗ್ರೀಕ್ ನಾಟಕಗಳಲ್ಲಿ ಇಲ್ಲದ 'ರಸೈಕ್ಯ' (unity of rasa) ಸಂಸ್ಕೃತನಾಟಕಗಳಲ್ಲಿ ಅತ್ಯಂತ ಪ್ರಧಾನ. ಗ್ರೀಕ್ ನಾಟಕಗಳಲ್ಲಿ ಇದ್ದೇ ತೀರಬೇಕಾದ ಮೇಳ (chorus) ಇಲ್ಲಿ ಇಲ್ಲವೇ ಇಲ್ಲ. ಸಂಸ್ಕೃತನಾಟಕಗಳಲ್ಲಿರುವ ಸುಖದುಃಖಸಮ್ಮಿಶ್ರವಾದ ಸನ್ನಿವೇಶಗಳು ಗ್ರೀಕ್ ನಾಟಕಗಳ ಸ್ವರೂಪಕ್ಕೆ ಹೊಂದದಂಥವು; ಗ್ರೀಕ್ ನಾಟಕಗಳ ಧ್ಯೇಯ ಜೀವನದ ಹೆಮ್ಮೆ ಮತ್ತು ಸಂತೋಷ; ಸಂಸ್ಕೃತನಾಟಕಗಳು ಸುಖಾಂತಗಳೇ ಆಗಿದ್ದರೂ ಅವುಗಳ ಧ್ಯೇಯ ಐಹಿಕ ಸುಖಭೋಗಗಳ ನಶ್ವರತೆಯ ನಿರೂಪಣೆ. ಈ ವ್ಯತ್ಯಾಸಗಳಿಂದಲೇ ಸಂಸ್ಕೃತನಾಟಕಕ್ಕೂ ಗ್ರೀಕ್ ನಾಟಕಕ್ಕೂ ಸಂಬಂಧವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಗ್ರೀಕರು ಭಾರತಕ್ಕೆ ಬರುವುದಕ್ಕಿಂತ ಎಷ್ಟೋ ಮುಂಚಿತವಾಗಿಯೇ ಸಂಸ್ಕೃತನಾಟಕವು ಬೆಳೆದು ಪೂರ್ಣತೆಯನ್ನು ಪಡೆದಿತ್ತೆಂಬುದು ಕ್ರಿ.ಪೂ. ಎರಡನೆಯ ಶತಮಾನದ

1 'ಯವನ' ಎಂಬುದು 'ಅಯೋನಿಯನ್' ಎಂಬುದರಿಂದ ನಿಷ್ಪನ್ನ.



ಪತಂಜಲಿಯ ಮಹಾಭಾಷ್ಯದಲ್ಲಿ ಬರುವ ಕೆಲವು ಮಾತುಗಳಿಂದಲೂ ಅದಕ್ಕೂ ಹಿಂದಿನವನೆನ್ನಲಾದ ಭಾಸನ ನಾಟಕಗಳು ಈಚೆಗೆ ಸಿಕ್ಕಿರುವುದರಿಂದಲೂ ಸಿದ್ಧವಾಗುತ್ತದೆ.

ಸಂಸ್ಕೃತನಾಟಕವು ಸ್ವತಂತ್ರವಾಗಿ ಬೇರಾವ ಸಾಹಿತ್ಯದ ಪ್ರಭಾವಕ್ಕೂ ಒಳಗಾಗದೆಯೇ ಉತ್ಪನ್ನವಾಗಿ, ಬೆಳೆದು ಪರಿಪಕ್ವವಾದ ಪೂರ್ಣತೆಯನ್ನು ಹೊಂದಿದೆಯೆಂಬುದೇ ಈಚೆಗೆ ಎಲ್ಲರ ಅಭಿಪ್ರಾಯವೂ ಆಗಿದೆ. ಆದರೆ ಮಹಾಭಾರತಾದಿಗಳ ಶೈಲಿಯು ಪರಿಪಕ್ವವಾಗಿ ಈಚಿನ ಮಹಾಕಾವ್ಯಗಳ ರಚನೆಗೆ ಕಾರಣವಾದಂತೆ ಕಾಳಿದಾಸಾದಿಗಳ ಸುಂದರ ನಾಟಕಕಳಿಗೆ ಕಾರಣವಾದ ಹಿಂದಿನ ಕೃತಿಗಳು ಯಾವುವು ಎಂಬುದನ್ನು ತಿಳಿಯುವುದು ಕಷ್ಟವಾಗಿದೆ. ಇಂತಹ ಅಪಕ್ವ ಅಥವಾ ಅಪೂರ್ಣ ಪ್ರಾಚೀನಕೃತಿಗಳು ಇದ್ದಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಇವು ಅಷ್ಟು ಚೆನ್ನಾಗಿಲ್ಲದಿದ್ದುದರಿಂದಲೋ ಅಥವಾ ಬೇರಾವ ಕಾರಣದಿಂದಲೋ ಕಾಲಕ್ರಮದಲ್ಲಿ ಲುಪ್ತವಾಗಿ ಹೋಗಿರಬೇಕು. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಕೆಲವು ಪರೋಕ್ಷ ಪ್ರಮಾಣಗಳನ್ನು ಮುಂದಿಡಬಹುದು. ಉದಾಹರಣೆಗೆ ಪಾಣಿನಿಯು 'ಪಾರಾಶರ್ಯಶಿಲಾಲಿಭ್ಯಾಂ ಭಿಕ್ಷುನಟಸೂತ್ರಯೋಃ' (೪-೩-೧೧೦) 'ಕರ್ಮಂದ ಕೃಶಾಶ್ವಾದಿನಿಃ' (೪-೩-೧೧೧) ಎಂಬ ಸೂತ್ರಗಳಲ್ಲಿ **ನಟ** ಸೂತ್ರಗಳನ್ನು ನಿರ್ದೇಶಿಸಿದ್ದಾನೆ. ಮಹಾಭಾಷ್ಯಕಾರನಾದ ಪತಂಜಲಿಯು ಕಂಸವಧ, ಬಲಿಬಂಧ ಎಂಬ ನಾಟಕಗಳ ಹೆಸರುಗಳನ್ನು ಉಲ್ಲೇಖಿಸಿದ್ದಾನೆ.

**ಸಾಂಪ್ರದಾಯಿಕ ಮತ** — ಭರತಮುನಿಯೇ ನಾಟಕ ರಚನೆಗೆ ಮೂಲಕಾರಣನೆಂಬುದು ಸಾಂಪ್ರದಾಯಿಕ ಮತ. ಸೃಷ್ಟಿಕರ್ತನಾದ ಬ್ರಹ್ಮನಿಂದಲೇ ಉಪದೇಶಹೊಂದಿ ಭರತಮುನಿಯು ನಾಟಕದ ರಚನೆಮಾಡಿದನಂತೆ. 'ಭರತ' ಎಂಬ ಪದಕ್ಕೆ 'ನಟ' ಎಂಬ ಅರ್ಥವೂ ಇರುವುದು ಈ ಸಂದರ್ಭದಲ್ಲಿ ಗಮನಾರ್ಹ. ಭರತಮುನಿರಚಿತವೆನ್ನಲಾದ 'ನಾಟ್ಯಶಾಸ್ತ್ರ'ವೊಂದು ಈಗಲೂ ಪ್ರಚಲಿತವಾಗಿದೆ. ಈ ನಾಟ್ಯಶಾಸ್ತ್ರ ತುಂಬ ಪ್ರಾಚೀನವಲ್ಲವಾದರೂ ಕ್ರಿಸ್ತಶಕದ ಆದಿ ಶತಮಾನಗಳಲ್ಲಿ ರಚಿತವಾಗಿರಬಹುದೆಂಬುದು ವಿದ್ವಾಂಸರ ಅಭಿಪ್ರಾಯ. ಪ್ರಾಯಃ ಇದು ಪ್ರಾಚೀನ ನಾಟ್ಯಶಾಸ್ತ್ರದ ಪರಿಷ್ಕೃತ ರೂಪವಾಗಿದ್ದರೂ ಇರಬಹುದು.

ಮೇಲೆ ಹೇಳಿದ ನಾಟ್ಯಶಾಸ್ತ್ರದಲ್ಲಿ ನಾಟಕದ ಉತ್ಪತ್ತಿಯ ವಿಚಾರವಾಗಿ ಹೀಗೆ ಉಕ್ತವಾಗಿದೆ.—ತ್ರೇತಾಯುಗದಲ್ಲಿ ಸಂಸಾರಕ್ಲೇಶಗಳಿಂದ ಖಿನ್ನರಾಗಿದ್ದ ಮಾನವರ ಮೇಲೆ ಮರುಕಗೊಂಡ ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮನು ಋಗ್ವೇದದಿಂದ 'ಪಾಠ್ಯ'ವನ್ನೂ ಯಜುರ್ವೇದದಿಂದ 'ಅಭಿನಯ'ವನ್ನೂ ಸಾಮವೇದದಿಂದ 'ಗಾನ'ವನ್ನೂ ಅಥರ್ವವೇದದಿಂದ 'ರಸ'ಗಳನ್ನೂ ತೆಗೆದು ಸೇರಿಸಿ 'ನಾಟ್ಯವೇದ' ಎಂಬ ಐದನೆಯ ವೇದವನ್ನು ಸೃಷ್ಟಿಸಿದನು. ಅದಕ್ಕೆ ಶಿವ ಪಾರ್ವತಿಯರು ತಮ್ಮ ತಾಂಡವ ಮತ್ತು ಲಾಸ್ಯ ನೃತ್ಯಗಳನ್ನು ಒದಗಿಸಿಕೊಟ್ಟರು. ವಿಷ್ಣುವು ಕೈಶಿಕೀ, ಸಾತ್ವತೀ, ಆರಭಟೀ ಮತ್ತು ಭಾರತೀ ಎಂಬ ನಾಲ್ಕು ನಾಟ್ಯವೃತ್ತಿಗಳನ್ನು ನೀಡಿದನು. ದೇವಶಿಲ್ಪಿ ವಿಶ್ವಕರ್ಮನು ನಾಟ್ಯರಂಗವನ್ನು ನಿರ್ಮಿಸಿಕೊಟ್ಟನು. ಆ ಬಳಿಕ ಬ್ರಹ್ಮನು ಭರತನಿಗೆ 'ನಾಟ್ಯ' ಕಲೆಯನ್ನು ಉಪದೇಶಿಸಿದನು. ಈ [2]ನಾಟ್ಯದ ಸರ್ವ ಪ್ರಥಮ ಪ್ರಯೋಗವು ಇಂದ್ರನ ಧ್ವಜೋತ್ಸವದ ದಿವಸ ಆಯಿತು. ಹೀಗೆ ಪ್ರದರ್ಶಿತವಾದ ನಾಟ್ಯದ ವಸ್ತು ಇಂದ್ರವಿಜಯ.

ನಾಟ್ಯಸ್ವರೂಪ ಮತ್ತು ಪ್ರಯೋಜನವು ಭರತನಿಂದ ಹೀಗೆ ಹೇಳಲ್ಪಟ್ಟಿದೆ.

ನಾನಾಭಾವೋಪಸಂಪನ್ನಂ ನಾನಾವಸ್ಥಾಂತರಾತ್ಮಕಂ ।
ಲೋಕವೃತ್ತಾನುಕರಣಂ ನಾಟ್ಯಮೇತನ್ಮಯಾ ಕೃತಂ ॥

ಉತ್ತಮಾಧಮಮಧ್ಯಾನಾಂ ನರಾಣಾಂ ಕರ್ಮಸಂಶ್ರಯಂ ।
ಹಿತೋಪದೇಶಜನನಂ ಧೃತಿಕ್ರೀಡಾಸುಖಾದಿಕೃತ್ ॥

ದುಃಖಾರ್ತಾನಾಂ ಸಮರ್ಥಾನಾಂ ಶೋಕಾರ್ತಾನಾಂ ತಪಸ್ವಿನಾಂ ।
ವಿಶ್ರಾಂತಿಜನನಂ ಕಾಲೇ ನಾಟ್ಯಮೇತನ್ಮಯಾ ಕೃತಂ ॥ I ೧೧೩-೧೧೫

**ಧಾರ್ಮಿಕ ಉತ್ಪತ್ತಿ**—ಹಿಂದೆಯೇ ಹೇಳಿರುವಂತೆ ಸಂಸ್ಕೃತನಾಟಕವು ವೇದಗಳಿಂದಲೇ ಉತ್ಪನ್ನವಾಗಿದೆಯೆಂದು ಪ್ರತಿಪಾದಿಸಲು ಕೆಲವು ವಿದ್ವಾಂಸರು ಅವಿರತ ಪ್ರಯತ್ನವನ್ನು ನಡೆಸಿದ್ದಾರೆ. ವೇದಗಳಲ್ಲಿ ಸ್ವಲ್ಪಮಟ್ಟಿನ ನಾಟಕದ ಛಾಯೆ ಹೊಂದಿರುವ ೧೦-೧೫ ರಚನೆಗಳಿವೆ. ಋಗ್ವೇದದಲ್ಲೇ ಇರುವ ಯಮ-ಯಮೀ, ಉರ್ವಶೀ-ಪುರೂರವಸ್ ಮುಂತಾದ ಸಂವಾದಸೂಕ್ತಗಳನ್ನು

[2] ಯೋಽಯಂ ಸ್ವಭಾವೋ ಲೋಕಸ್ಯ ಸುಖದುಃಖಸಮನ್ವಿತಃ ।
ಸೋಽಂಗಾದ್ಯಭಿನಯೋಪೇತಃ ನಾಟ್ಯಮಿತ್ಯಭಿಧೀಯತೇ । ನಾಟ್ಯಶಾಸ್ತ್ರ I ೨೨೨



ಸರಿಯಾದ ಪಾತ್ರ ಮತ್ತು ಅಭಿನಯಗಳೊಂದಿಗೆ ಪಠಿಸಿ ಪ್ರದರ್ಶಿಸಿದರೆ ಕಿರು ನಾಟಕಗಳೇ ಆಗುವುವೆಂಬುದರಲ್ಲಿ ಸಂದೇಹವಿಲ್ಲ. ಯಜುರ್ವೇದ ಮತ್ತು ಬ್ರಾಹ್ಮಣಗಳಲ್ಲೂ ಕೆಲವು ಕರ್ಮಗಳಿಗೆ ಸಂಬಂಧಿಸಿದಂತೆ ನಾಟಕದ ಛಾಯೆಯುಳ್ಳ ಆಚರಣೆಗಳು ಪ್ರೋಕ್ತವಾಗಿವೆ. ಸಾಮವೇದವಂತು ಗಾನಪ್ರಧಾನವಾದುದು. ನಾಟ್ಯಕ್ಕೆ ಗಾನದ ಅವಶ್ಯಕತೆ ಮೊದಲಿನಿಂದಲೂ ಅಂಗೀಕೃತವಾಗಿ ಬಂದಿದೆ. ನಾಟಕಾಭಿನಯಕ್ಕೆ ಮೂಲವಾದ ನಾಟ್ಯವು ಪೂಜಾದಿಗಳೊಡನೆ ಹಿಂದಿನಿಂದ ಹೊಂದಿಕೊಂಡು ಬಂದಿರುವ ಅಂಶ ಸರ್ವವಿದಿತ. ಇದನ್ನೆಲ್ಲಾ ಪರಿಶೀಲಿಸಿದರೆ ನಾಟಕದ ಉತ್ಪತ್ತಿ ಧಾರ್ಮಿಕ ಆಚರಣೆಯಿಂದ ಆಯಿತೆನ್ನಲವಕಾಶವಿದೆ. ಆದರೂ ವೈದಿಕಯುಗದಲ್ಲೇ 'ನಾಟಕ' ಹುಟ್ಟಿಕೊಂಡಿತೆಂದು ಹೇಳುವುದಕ್ಕಾಗುವುದಿಲ್ಲ. ಪ್ರಾಯಃ ಆಗ ಅಂಕುರಿತವಾದ 'ನಾಟಕ' ಮಧ್ಯೆ ಲುಪ್ತವಾಗಿ ಹೋಗಿ ಪುನಃ ಹೊಸದಾಗಿ ಮೂಡಿಬಂದಿರಬಹುದು. ಋಗ್ವೇದದಲ್ಲಿ ೧೨ ಸಂವಾದ ಸೂಕ್ತಗಳಿವೆಯಾದರೂ ಅಥರ್ವವೇದದಲ್ಲಿ ಇಂತಹ ಸೂಕ್ತ ಒಂದೇ ಒಂದು ಇರುವುದು ಗಮನಾರ್ಹ.

**ಲೌಕಿಕ ಉತ್ಪತ್ತಿ**—ಸಂಸ್ಕೃತ ನಾಟಕದ ಉತ್ಪತ್ತಿಯು ಮೂಕದೃಶ್ಯ, ಬೊಂಬೆಯಾಟ, ಛಾಯಾನಾಟಕಗಳಿಂದ ಆಯಿತೆಂದು ಕ್ರಮವಾಗಿ ಕೋನೋ, ಪಿಷೆಲ್ ಮತ್ತು ಲೂಡರ್ಸ್ ಎಂಬ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಸಂಸ್ಕೃತ ನಾಟಕಗಳ ಪ್ರಸ್ತಾವನೆಯಲ್ಲಿ ಭಾಗವಹಿಸುವ ನಾಟಕದ ಸಂಚಾಲಕನಿಗೆ[3] ಸೂತ್ರಧಾರನೆಂಬ ಹೆಸರಿರುವುದರಿಂದಲೂ ಸೂತ್ರಧಾರ ಎಂದರೆ ಸೂತ್ರ(ದಾರ)ಗಳನ್ನು ಹಿಡಿದಿರುವವನು ಎಂಬರ್ಥಮಾಡಬಹುದಾದ್ದರಿಂದಲೂ ಬೊಂಬೆಯಾಟದಲ್ಲಿ ಬೊಂಬೆಗಳ ಸೂತ್ರಹಿಡಿದು ಆ ಮೂಲಕ ಅವುಗಳ ಆಟ ಆಡಿಸಬೇಕಾಗಿರುವುದರಿಂದಲೂ ಬೊಂಬೆಯಾಟದಿಂದ ಸಂಸ್ಕೃತ ನಾಟಕ ಹುಟ್ಟಿತೆನ್ನುತ್ತಾರೆ. ಆದರೆ ಬೊಂಬೆಯು ಮನುಷ್ಯರ ಅನುಕರಣವೇ ವಿನಾ ಮನುಷ್ಯರು ಬೊಂಬೆಯ ಅನುಕರಣ ಫಲವಲ್ಲವೆಂಬುದನ್ನು ಮರೆಯಬಾರದು. ಬೊಂಬೆಯಾಟ ನಮ್ಮ ನಾಟಕಗಳ ಅನುಕರಣವೇ ವಿನಾ ಬೇರೆಯಲ್ಲ.

[3] ಸೂತ್ರಧಾರ ಶಬ್ದದ ಅರ್ಥ ಇತ್ಯಾದಿಗಳನ್ನು ಮುಂದೆ 'ಸಂಸ್ಕೃತ ನಾಟಕಗಳ ವೈಲಕ್ಷಣ್ಯ' ವಿವರಣೆಯ ಪ್ರಕರಣದಲ್ಲಿ (ಪುಟ೧೩೨) ಹೇಳಿರುವುದನ್ನು ಗಮನಿಸಿ.

ಪರಿಷ್ಕೃತ ರೂಪವೂ ಆಗಿನ ಕಾವ್ಯಾಸಕ್ತರಾದ ರಾಜರುಗಳ ಆಶ್ರಯದಲ್ಲಿ ದೊರಕಿತೆಂಬುದರಲ್ಲಿ ಸಂಶಯವಿಲ್ಲ.

ಈ ಪರಿಷ್ಕೃತ ನಾಟಕಗಳು ಅರಮನೆಯಲ್ಲಿ ಆಗಾಗ್ಗೆ ಪ್ರದರ್ಶಿತವಾಗುತ್ತಿದ್ದವು. ಆದ್ದರಿಂದಲೇ ರಾಜರುಗಳ ಮೆಚ್ಚುಗೆ ಮತ್ತು ನೆರವು ಪಡೆಯುವ ಉದ್ದೇಶದ ಸಾಧನೆಗಾಗಿ ನಾಟಕಗಳ ಪಾತ್ರಗಳು ರಾಜ, ರಾಣಿ, ರಾಜನ ಆಸ್ಥಾನಕ್ಕೆ ಸಂಬಂಧಿಸಿದವರು ಮುಂತಾಗಿರುವಂತೆ ನಾಟಕ ರಚನೆ ಆರಂಭವಾಯಿತು. ನಾಟಕ ಬರೆಯುವವರೂ ಪ್ರಾಯಃ ಆಸ್ಥಾನಕವಿಗಳೇ ಆಗಿರುತ್ತಿದ್ದರು. ಹಾಗಲ್ಲದ ಸಂದರ್ಭಗಳಲ್ಲಿ ಮಾತ್ರ ಬೇರೆ ಪ್ರಸಿದ್ಧ ಪೌರಾಣಿಕ ಕಥೆಗಳ ಆಧಾರದ ಮೇಲೆ ನಾಟಕರಚನೆಯಾಗುತ್ತಿತ್ತು.

ಸಂಸ್ಕೃತ ನಾಟಕ ಈ ರೀತಿ ಪರಿಷ್ಕೃತ ರೂಪದಲ್ಲಿ ರಾಜಾಶ್ರಯಹೊಂದಿ ಬೆಳೆಯುತ್ತಿದ್ದರೂ, ಕಾಳಿದಾಸಾದಿಗಳ ನಾಟಕಗಳಿಗೆ ಸುಸಂಸ್ಕೃತರ ಆದರ ಮಾತ್ರವಲ್ಲದೆ ಸಾಮಾನ್ಯರ ಮೆಚ್ಚುಗೆಯೂ ವಿಶೇಷವಾಗಿತ್ತು. ಇದಲ್ಲದೆ, ಜನ ಸಾಮಾನ್ಯರಿಗೆ ಮೊದಮೊದಲು ಪ್ರಿಯವಾಗಿದ್ದ, ಅವರಿಂದಲೇ ಆಡಲು ಸಾಧ್ಯವಾದ, ಅಪರಿಷ್ಕೃತ ನಾಟಕಗಳೂ ಗ್ರಾಮಾಂತರಗಳಲ್ಲಿ ಪ್ರಚಲಿತವಾಗಿದ್ದುವು. ಇವು ಪ್ರಾಯಃ ಬಯಲಿನಲ್ಲೇ ಆಡಲ್ಪಡುತ್ತಿದ್ದಿರಬೇಕು. ಈಗಲೂ ಈ ಬಗೆಯ ಬಯಲಾಟಗಳು 'ಯಾತ್ರೆ' 'ಯಕ್ಷಗಾನ' ಮುಂತಾದ ಹೆಸರುಗಳಿಂದ ನಮ್ಮ ದೇಶದ ಗ್ರಾಮಾಂತರ ಪ್ರದೇಶಗಳಲ್ಲಿ ಬಳಕೆಯಲ್ಲಿವೆ. ಇಂತಹವುಗಳ ವಸ್ತುಗಳೆಲ್ಲ ಪಾಯಃ ಪೌರಾಣಿಕ ಕಥೆಗಳೇ ಆಗಿರುವುದು ಅವು ಹೇಗೆ ಮೊದಲಿನಿಂದಲೂ ಧಾರ್ಮಿಕ ಹಿನ್ನೆಲೆಯಲ್ಲೇ ಹುಟ್ಟಿ ಬೆಳೆದು ಬಂದಿವೆಯೆಂಬುದನ್ನು ತೋರಿಸುತ್ತದೆ.

## ೩. ಸಂಸ್ಕೃತ ನಾಟಕಗಳ ವೈಲಕ್ಷಣ್ಯ

ಸಂಸ್ಕೃತ ನಾಟಕಗಳಲ್ಲಿ ಬೇರೆ ಯಾವ ಭಾಷೆಯ ನಾಟಕಗಳಲ್ಲೂ ಇಲ್ಲದ ಕೆಲವು ವೈಲಕ್ಷಣ್ಯಗಳಿವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ನಿರೂಪಿಸಲಾಗುವುದು—

**(೧) ವಿಷಾದಕರ ಅಂತ್ಯವಿಲ್ಲದಿರುವಿಕೆ**—ಸಂಸ್ಕೃತ ನಾಟಕಗಳು ದುಃಖಮಯವಾಗಿ ಪರ್ಯವಸಾನಗೊಳ್ಳುವುದಿಲ್ಲ. ದುಃಖಕರವಾದ ಸನ್ನಿವೇಶಗಳು ನಾಟಕದ ಮಧ್ಯೆ ಬರುವುದುಂಟೇ ವಿನಾ ಪರ್ಯವಸಾನವು



ಯಾವಾಗಲೂ ಸುಖಕರವಾಗಿಯೇ ಇರುತ್ತದೆ. ಈ ಜೀವನಹೋರಾಟದಲ್ಲಿ ಒಳ್ಳೆಯದಕ್ಕೇ ಅಂತಿಮ ಜಯವೆಂಬುದೂ ಒಳ್ಳೆಯವರಿಗೆ ಏನು ತೊಂದರೆ ಬಂದರೂ ದೇವತೆಗಳು ಅವರನ್ನು ಸಕಾಲದಲ್ಲಿ ರಕ್ಷಿಸುತ್ತಾರೆಂಬುದೂ ಹಿಂದುಗಳಲ್ಲಿ ರೂಢಮೂಲವಾಗಿರುವ ನಂಬಿಕೆ. ಆದ್ದರಿಂದಲೇ ನಾಟಕಗಳಲ್ಲಿ ನಾಯಕನಿಗೇ ಜಯ; ಖಳನಾಯಕನಿದ್ದರೆ ಅವನಿಗೇ ಸೋಲು ; ನಾಟಕವು ಸಂತೋಷಸಮಾಧಾನಗಳಲ್ಲೇ ಪರ್ಯವಸಾನಗೊಳ್ಳುವುದು.

**(೨) ಸಂಭಾಷಣೆ**—ಸಂಭಾಷಣೆ ಸಾಮಾನ್ಯವಾಗಿ ಗದ್ಯದಲ್ಲೇ ಇರುತ್ತದೆಯಾದರೂ ಅದರ ಮಧ್ಯೆ ಭಾವಾತ್ಮಕ ಪದ್ಯಗಳೂ ಸೇರಿಕೊಂಡಿರುತ್ತವೆ. ಇದನ್ನು ಗಮನಿಸಿದರೆ ಸಂಸ್ಕೃತ ನಾಟಕದ ಮೂಲ ಭಾವಗೀತೆಗಳಲ್ಲಿರಬೇಕೆನ್ನಿಸುತ್ತದೆ. ಸಂಸ್ಕೃತನಾಟಕಗಳಲ್ಲಿ ಪ್ರಕೃತಿವರ್ಣನೆಗೂ ಮಾನವರ ಹೃದಯ ಅಥವಾ ಮನಸ್ಸಿನ ಅಂತರಾಳದಲ್ಲಿ ನಡೆಯುವ ಭಾವನಾತ್ಮಕ ಒಳತೋಟಿಗೂ ಪ್ರಧಾನಸ್ಥಾನವಿದೆ. ಈ ಭಾವಗೀತೆಗಳು ಅಭಿನಯಕ್ಕೆ ಸಹಕಾರಿಗಳಾಗಿ ಸಂಸ್ಕೃತನಾಟಕಗಳ ಅನಿವಾರ್ಯ ಭಾಗಗಳಾಗಿವೆ. ಪದ್ಯಾತ್ಮಕ ಸಂಭಾಷಣೆ ತೀರ ಕಮ್ಮಿ.

**(೩) ಸಂಭಾಷಣೆಯಲ್ಲಿ ಸಂಸ್ಕೃತ-ಪ್ರಾಕೃತಗಳ ಸಮ್ಮಿಶ್ರಣ**—ಸಂಸ್ಕೃತನಾಟಕಗಳಲ್ಲಿ ಕೆಲವು ಪಾತ್ರಗಳ ಮಾತು ಸಂಸ್ಕೃತದಲ್ಲೂ ಮತ್ತೆ ಕೆಲವರ ಮಾತು ಪ್ರಾಕೃತದಲ್ಲೂ ಇರುತ್ತವೆ. ಆಡುವ ಮಾತು ಯಾವುದೇ ಆದರೂ ಎಲ್ಲ ಪಾತ್ರಗಳಿಗೂ ಸಂಸ್ಕೃತ ಪ್ರಾಕೃತ ಭಾಷೆಗಳೆರಡೂ ಚೆನ್ನಾಗಿ ಅರ್ಥವಾಗುತ್ತದೆಂಬುದರಲ್ಲಿ ಸಂಶಯವಿಲ್ಲ. ಪ್ರಾಕೃತ ಮಾತಾಡುವವರು ಕೆಲವು ಸನ್ನಿವೇಶಗಳಲ್ಲಿ ಸಂಸ್ಕೃತ ಮಾತಾಡುವ ಸಂಧರ್ಭಗಳೂ ಇರುವುದನ್ನು ನೋಡಿದರೆ ಈ ಸಂಭಾಷಣೆಗಳ ದ್ವಿಭಾಷಾತ್ಮಕತೆ ಈಚೆಗೆ ಕೇವಲ ಸಾಂಕೇತಿಕವಾಗಿಬಿಟ್ಟದೆಯೆನ್ನಿ ಸದಿರದು.

**(೪) ಅಂಕ ವಿಭಾಗ**—ಸಂಸ್ಕೃತ ನಾಟಕಗಳು ಸಾಮಾನ್ಯವಾಗಿ ಅಂಕಗಳಾಗಿ ವಿಭಾಗಿಸಲ್ಪಟ್ಟಿರುತ್ತವೆ. ಒಂದೊಂದು ಅಂಕವೂ ನಾಟಕದ ಕಥೆಯ ಒಂದೊಂದು ಪ್ರಕರಣವೆಂದು ಹೇಳಬಹುದು. ಪ್ರಾಯಃ ಪ್ರತಿಯೊಂದು ಅಂಕದಲ್ಲೂ ನಾಯಕನು ರಂಗದಮೇಲೆ ಬರುತ್ತಾನೆ. ಒಂದೊಂದು ಅಂಕ ಮುಗಿದಾಗಲೂ ಎಲ್ಲ ಪಾತ್ರಗಳೂ ರಂಗದಿಂದ ನಿಷ್ಕ್ರಮಿಸಿಬಿಡುತ್ತಾರೆ. ಈ ನಾಟಕಗಳಲ್ಲಿ ಕಾಲೈಕ್ಯ ದೇಶೈಕ್ಯ ನಿಯಮಗಳಿಲ್ಲವೆಂದು ಹಿಂದೆಯೇ

ಹೇಳಿದ್ದೇವೆ. ಆದರೆ ಒಂದು ಅಂಕದಲ್ಲಿ ನಿರೂಪಿತವಾಗಿರುವ ಕಥೆಯು ಒಂದೇ ದಿನದಲ್ಲಿ ನಡೆದದ್ದಾಗಿರಬೇಕೆಂಬ ನಿಯಮವಿದೆ. ಎರಡು ಅಂಕಗಳ ಮಧ್ಯೆ ನಡೆದುಹೋದ ಕಥಾಭಾಗವನ್ನು ಪ್ರವೇಶಕ ವಿಷ್ಕಂಭಕಗಳ ಮೂಲಕ ಪ್ರೇಕ್ಷಕರಿಗೆ ತಿಳಿಯುವಂತೆ ಮಾಡಲಾಗುತ್ತದೆ. ಈ ಪ್ರವೇಶಕಾದಿಗಳು ಏಕಪಾತ್ರಭಾಷಣವಾಗಿರುವುದೂ ಉಂಟು. ಇಬ್ಬರು ಅಥವಾ ಹೆಚ್ಚು ಸಾಮಾನ್ಯ ಪಾತ್ರಗಳ ಸಂಭಾಷಣೆಯ ರೂಪವಾಗಿರುವುದೂ ಉಂಟು. ದೇಶೈಕ್ಯನಿಯಮವಿಲ್ಲದುದರಿಂದ, ಸನ್ನಿವೇಶಗಳಿಗನುಸಾರವಾಗಿ ಒಂದು ಅಂಕವನ್ನು ಹಲಕೆಲವು ದೃಶ್ಯಗಳನ್ನಾಗಿ ಬೇಕಾದರೆ ವಿಭಾಗಿಸಿಕೊಳ್ಳಬಹುದು. ಆದರೆ ಅಂಕದ ಮಧ್ಯೆ ರಂಗಭೂಮಿಯ ಮೇಲೆ ಪಾತ್ರಗಳಿಲ್ಲದಿರಲು ಅವಕಾಶವೇ ಇಲ್ಲ. ಸಂಸ್ಕೃತ ನಾಟಕಕಾರರ ದೃಷ್ಟಿ ರಸೈಕ್ಯದ ಮೇಲೆಯೇ ಕೇಂದ್ರೀಕೃತವಾಗಿರುತ್ತದೆ.

(೫) **ಪ್ರಸ್ತಾವನೆ**—ನಾಟಕ ಆರಂಭವಾಗುವುದಕ್ಕೆ ಮುಂಚೆ ನಡೆಯುವ 'ಪೂರ್ವರಂಗ'ವೆಂಬ ಸಾಂಕೇತಿಕ ವ್ಯವಸ್ಥೆಯೊಂದಿದೆ. ಇದಕ್ಕೂ ಮುಂಚಿತವಾಗಿ 'ನಾಂದೀ' ಎಂಬ ಪೂಜಾಮಂಗಳವಿಧಿಯೊಂದಿದೆ. ಈ ಪೂರ್ವರಂಗದಲ್ಲಿ ಸೂತ್ರಧಾರನೆಂಬ ನಾಟಕಪ್ರದರ್ಶನದ ಸಂಚಾಲಕನದೇ ಪ್ರಧಾನ ಪಾತ್ರ ಇವನು ನಾಟಕ, ನಾಟಕಕರ್ತೃ, ಅವನ ಆಶ್ರಯದಾತನಾದ ರಾಜ, ಕವಿಯ ಪ್ರಶಸ್ತಿ ಮುಂತಾದುವುಗಳನ್ನು ಪ್ರೇಕ್ಷಕರಿಗೆ ತಿಳಿಸಿ ನಾಟಕದ ಆದಿಯನ್ನು ಸೂಚಿಸಿ ನಿಷ್ಕ್ರಮಿಸುವುದು ವಾಡಿಕೆ. ಈ ಪೂರ್ವರಂಗವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಸಂಸ್ಕೃತ ನಾಟಕವು ರಾಜರ ಅಥವಾ ಧನಿಕರ ಆಶ್ರಯದಲ್ಲೇ ಬೆಳೆಯಿತೆಂಬುದು ಸಿದ್ಧವಾಗುತ್ತದೆ. ಆಶ್ರಯದಾತನಾದ ರಾಜನೋ ಧನಿಕನೋ ಪ್ರೇಕ್ಷಾಗೃಹಕ್ಕೆ ಬರುವವರೆಗೆ ನಾಟಕವನ್ನು ಆರಂಭಿಸುವಹಾಗಿಲ್ಲ. ಆತ ಬರುವುದು ಸಾವಕಾಶವಾದರೆ ನೆರೆದಿರುವ ಪ್ರೇಕ್ಷಕರು ಸುಮ್ಮನಿರುವುದಿಲ್ಲ. ಈ ಉಭಯಸಂಕಟದ ಪರಿಹಾರಕ್ಕಾಗಿಯೇ ಈ ಸೂತ್ರಧಾರಪ್ರಧಾನವಾದ ಪೂರ್ವರಂಗ ಏರ್ಪಟ್ಟಿತೆನ್ನಬೇಕು. **ಸೂತ್ರಧಾರ** ಎಂದರೂ **ಸೂತ್ರೀ** ಎಂದರೂ ಒಂದೇ ಅರ್ಥ ಬರುತ್ತದೆ. ಸಂಸ್ಕೃತದಲ್ಲಿ ದೀರ್ಘಸೂತ್ರೀ ಎಂದರೆ ಕಾಲ ಕಳೆಯುವವನು, ಕೆಲಸಮಾಡಲು ವಿಳಂಬಿಸುವವನು ಎಂಬ ಅರ್ಥ ಬರುವುದಕ್ಕೆ ಕಾರಣ ಈ ಸೂತ್ರಧಾರನೇ ಎಂದು ತೋರುತ್ತದೆ. ಇವನಿಗೆ ಎಷ್ಟುಹೊತ್ತು ಬೇಕಾದರೂ ವಿಳಂಬಿಸಲು ಅನುಕೂಲಿಸುವಂತೆ ಕವಿಯು ಈ ಪ್ರಸ್ತಾವನೆಗಳಲ್ಲಿ



ಸಂಗೀತಕ್ಕೆ, ಅದರಲ್ಲೂ 'ನಟಿ'ಯ ಗಾನಕ್ಕೆ, ಅವಕಾಶ ಕಲ್ಪಿಸಿರುವುದೂ ಗಮನಾರ್ಹವಾದ ಅಂಶ. ಹೆಂಗಸೊಬ್ಬಳು ಸುಶ್ರಾವ್ಯವಾಗಿ ಹಾಡುತ್ತಿದ್ದರೆ ಪ್ರೇಕ್ಷಕರನ್ನು ತಣಿಸಿದಂತೆಯೂ ಆಯಿತು; ಪ್ರಧಾನ ಪ್ರೇಕ್ಷಕನಾದ ರಾಜನು ಬರುವವರೆಗೆ ಪ್ರದರ್ಶನವನ್ನು ತಡೆಹಿಡಿದು ಅವನ ಮೆಚ್ಚುಗೆಯನ್ನು ಸಂಪಾದಿಸಿದಂತೆಯೂ ಆಯಿತು. ಈ ವಿಧವಾದ ಔಚಿತ್ಯ ಇತರ ದೇಶಗಳ ನಾಟಕಗಳಲ್ಲಿ ಕಂಡುಬರುವುದಿಲ್ಲ.

(೬) **ರಂಗಸೂಚನೆಗಳು ಮತ್ತು ಉಪಕರಣಗಳು**—ನಾಟಕ ಪ್ರದರ್ಶನಕ್ಕೆ ಅಗತ್ಯವಾದ ಉಪಕರಣಗಳು ಯಾವ ರೀತಿಯ ವಿಕಾಸ ಅಥವಾ ಪರಿವರ್ತನೆಯನ್ನೂ ಹೊಂದಿದಂತೆ ಕಂಡುಬರುವುದಿಲ್ಲ. ವೇಷ, ಭೂಷಣ, ಅಭಿನಯಾದಿಗಳ ಬಗ್ಗೆ ತುಂಬ ವಿವರವಾದ ರಂಗಸೂಚನೆಗಳು ಹೇರಳವಾಗಿದ್ದರೂ ದೃಶ್ಯಗಳ ಬಗ್ಗೆ ಏನೊಂದೂ ಹೇಳಲ್ಪಡದಿರುವುದನ್ನು ನೋಡಿದರೆ ರಂಗಮಂಚದ ಮೇಲಿನ ಅಲಂಕಾರ, ದೃಶ್ಯಪರಿವರ್ತನೆ ಮುಂತಾದುವು ಕೇವಲ ಸಾಮಾನ್ಯ ರೀತಿಯವಾಗಿದ್ದಿರಬೇಕೆನ್ನಿಸುತ್ತದೆ.

(೭) **ನಾಟಕಗಳ ಕಲಾತ್ಮಕ ಸೌಂದರ್ಯ**—ಸಂಸ್ಕೃತ ನಾಟಕಗಳಲ್ಲಿ ಒಂದು ರೀತಿಯ ಕಾವ್ಯಕಲಾಕೌಶಲವನ್ನು ನಾವು ಕಾಣುತ್ತೇವೆ. ಕೆಲವು ಸಂದರ್ಭಗಳಲ್ಲಿ ಇದು ಅಸಹಜತೆಯ ಮಟ್ಟಕ್ಕೆ ಏರಿರುತ್ತದೆ. ಪಾತ್ರಗಳ ಸಂಭಾಷಣೆಯಲ್ಲೂ ಕವಿಯು ತನ್ನ ಭಾಷಾಪ್ರೌಢಿಮೆಯನ್ನು ಪ್ರದರ್ಶಿಸುವುದು, ಬರೀ ಸಾಂಪ್ರದಾಯಿಕವಾದ ಪ್ರಸಂಗ ಮತ್ತು ಜೀವನದ ಚಿತ್ರಣ,—ಇವು 'ನಾಟಕ ರಚನೆಯ ಧ್ಯೇಯವು ಜನಜೀವನದ ಚಿತ್ರಣವಲ್ಲ; ಕಲಾಕೌಶಲದಿಂದ ಕೂಡಿದ ಕಾವ್ಯಸೃಷ್ಟಿ ಮಾತ್ರ' ಎಂಬುದನ್ನು ಸಿದ್ಧಪಡಿಸುತ್ತವೆ. ಸಂಸ್ಕೃತ ನಾಟಕವು ಇಂತಹ ಸ್ಥಿತಿಯಲ್ಲಿ ರಚಿತವಾಗುತ್ತಿದ್ದ ಕಾಲದಲ್ಲೂ ಅಸಹಜತೆಯ ಸೋಂಕಿಲ್ಲದಂತೆ, ಯಾವ ನ್ಯೂನಾತಿರೇಕವೂ ಇಲ್ಲದಂತೆ, ಕಲಾತ್ಮಕವಾಗಿಯೇ ರಚಿತವಾಗಿರುವುದು ಕಾಳಿದಾಸನ ನಾಟಕಗಳ ವೈಶಿಷ್ಟ್ಯ.

## ೪. ಸಂಸ್ಕೃತ ನಾಟಕಗಳ ಧ್ಯೇಯ

ಆಂಗ್ಲ ಸಾಹಿತ್ಯವನ್ನು ಓದಿರುವ ನಾವು ಷೇಕ್ಸ್‌ಪಿಯರ್ ಕವಿಯನ್ನು ನಮ್ಮ ನಾಟಕ ಕರ್ತೃಗಳೊಡನೆ ಹೋಲಿಸುವುದು ಸಹಜ. ಕಾಲ ಮತ್ತು

ದೇಶ ಈ ಎರಡು ದೃಷ್ಟಿಯಿಂದಲೂ ತುಂಬ ಅಂತರದಲ್ಲಿರುವ ಎರಡು ಭಾಷೆಗಳ ಸಾಹಿತ್ಯಕೃತಿಗಳನ್ನು ಹೋಲಿಸುವುದರಲ್ಲಿ ತಪ್ಪೇನೂ ಇರಲಾರದು. ಆದರೆ ಒಂದು ಅಂಶವನ್ನು ಮಾತ್ರ ನಾವು ಗಮನದಲ್ಲಿಟ್ಟುಕೊಂಡಿರಬೇಕು. ಸಾಹಿತ್ಯ ಕೃತಿಗಳನ್ನು ಅಳೆಯಲು ನಾವು ಸಾಮಾನ್ಯವಾಗಿ ಕೆಲವು ಮಾನದಂಡ ಗಳನ್ನಿಟ್ಟುಕೊಂಡಿರುತ್ತೇವೆ. ಅವನ್ನು ಸಾರ್ವತ್ರಿಕವಾಗಿ ಬಳಸುವುದು ತಪ್ಪಾದೀತು. ಪ್ರತಿಯೊಂದು ರಾಷ್ಟ್ರವೂ, ಸಾಹಿತ್ಯಸಂಪ್ರದಾಯವೂ ಕಲೆಯ ವಿಷಯ ದಲ್ಲಿ ತನ್ನದೇ ಆದ ಆದರ್ಶವನ್ನು ರೂಪಿಸಿಕೊಂಡಿರುತ್ತದೆ. ಆದ್ದರಿಂದ ಈ ಬಗ್ಗೆ ಒಂದು ಆದರ್ಶದ ಅಳತೆಗೋಲಿನಿಂದ, ಆ ಆದರ್ಶದ ಗಂಧವೂ ಇಲ್ಲದ ಅಥವಾ ಅದನ್ನು ನಿರಾಕರಿಸುವ, ಮತ್ತೊಂದು ವಿದೇಶೀ ಸಾಹಿತ್ಯದ ಮಟ್ಟ ವನ್ನು ನಿರ್ಣಯಿಸುವುದು ನ್ಯಾಯಸಮ್ಮತವಾಗದು. ಆದರ್ಶಗಳು ಅಭಿರುಚಿ ಮತ್ತು ಸಂಸ್ಕಾರಾನುಗುಣವಾಗಿ ಬೇರೆಬೇರೆಯಾಗಿರುತ್ತವೆಂಬುದು ಸರ್ವವಿದಿತ. ಆಂಗ್ಲ ನಾಟಕಗಳ ಆದರ್ಶ ಪಾತ್ರಚಿತ್ರಣ ಅಥವಾ ಮಾನವಸ್ವಭಾವಚಿತ್ರಣ ವಾಗಿದ್ದರೆ ಸಂಸ್ಕೃತ ನಾಟಕಗಳ ಆದರ್ಶ 'ರಸ' ಪುಷ್ಟಿಯೇ ವಿನಾ ಬೇರಾವುದೂ ಅಲ್ಲವೆಂದು ಧಾರಾಳವಾಗಿ ಹೇಳಬಹುದು. ಸಂಸ್ಕೃತ ನಾಟಕಗಳಲ್ಲಿ ಪಾತ್ರ ಚಿತ್ರಣಾದಿಗಳು ಕೇವಲ ಅನುಷಂಗಿಕ.

## ೫. ಸಂಸ್ಕೃತ ರೂಪಕ ಭೇದಗಳು

ಸಂಸ್ಕೃತ ಕಾವ್ಯಗಳಲ್ಲಿ ಶ್ರವ್ಯ, ದೃಶ್ಯ ಎಂಬ ಎರಡು ಜಾತಿಗಳಿವೆ. ಶ್ರವ್ಯ ಜಾತಿಯಲ್ಲಿ ಪದ್ಯ, ಗದ್ಯ, ಚಂಪೂ ಎಂಬ ಭೇದಗಳೂ ದೃಶ್ಯದಲ್ಲಿ ರೂಪಕ ಉಪರೂಪಕ ಎಂಬ ಎರಡು ಒಳವಿಭಾಗಗಳೂ ಇವೆ. ರೂಪಕಗಳು ಹತ್ತು ವಿಧ—೧. ನಾಟಕ ೨. ಪ್ರಕರಣ ೩. ಭಾಣ ೪. ಪ್ರಹಸನ ೫ ಡಿಮ ೬. ವ್ಯಾಯೋಗ ೭. ಸಮವಕಾರ ೮. ವೀಥೀ ೯. ಅಂಕ ಮತ್ತು ೧೦. ಈಹಾ ಮೃಗ. ಉಪರೂಪಕಗಳು ಹದಿನೆಂಟು ವಿಧ— ೧. ನಾಟಿಕಾ ೨. ತ್ರೋಟಕ ೩. ಗೋಷ್ಠೀ ೪. ಸಟ್ಟಕ ೫. ನಾಟ್ಯರಾಸಕ ೬. ಪ್ರಸ್ಥಾನ ೭. ಉಲ್ಲಾಪ್ಯ ೮. ಕಾವ್ಯ ೯. ಪ್ರೇಂಖಣ ೧೦. ರಾಸಕ ೧೧. ಸಂಲಾಪಕ ೧೨. ಶ್ರೀಗದಿತ ೧೩. ಶಿಲ್ಪಕ ೧೪. ವಿಲಾಸಿತ ೧೫. ದುರ್ಮಲ್ಲಿಕಾ ೧೬. ಪ್ರಕರಣೀ ೧೭. ಹಲ್ಲೀಶ ೧೮ ಭಾಣಿಕಾ. ಎಲ್ಲ ವಿಧವಾದ ಶ್ರವ್ಯ ಮತ್ತು ದೃಶ್ಯ ಕಾವ್ಯಗಳಲ್ಲೂ ನಾಟಕವೇ ಅತ್ಯುತ್ತಮ ಸಾಹಿತ್ಯ ಕೃತಿಯೆಂಬುವನ್ನು ಎಲ್ಲರೂ ಒಪ್ಪುತ್ತಾರೆ. ಇದು



ದೃಶ್ಯಕಾವ್ಯಗಳಲ್ಲಿ ಒಂದು ಭೇದದ ಹೆಸರೇ ಆಗಿದ್ದರೂ ಅದರ ಜನಪ್ರಿಯತೆ ಎಲ್ಲ ದೃಶ್ಯಕಾವ್ಯ ಭೇಧಗಳಿಗೂ ನಾಟಕವೆಂದೇ ಸಾಮಾನ್ಯವಾಗಿ ಹೆಸರು ಬರಲು ಕಾರಣವಾಗಿದೆ. ಇತರ ಇಪ್ಪತ್ತೇಳು ಬಗೆಯ ರೂಪಕ ಉಪರೂಪಕಗಳೂ ನಾಟಕದ ವಿಕೃತಿಗಳು ಎಂದರೆ ತಪ್ಪಾಗದು. ಇವುಗಳಲ್ಲಿ ನಾಟ್ಯ, ಗೇಯ, ಪಾಠ್ಯ (ಅಥವಾ ಕಾವ್ಯ)ಗಳು ಪ್ರಧಾನವಾಗಿರುವುದಲ್ಲದೆ ಚಿತ್ರ, ಶಿಲ್ಪ ಮುಂತಾದ ಕುಶಲಕಲೆಗಳೂ ಸೇರಿಕೊಂಡಿರುತ್ತವೆ. ಆದ್ದರಿಂದಲೇ ಕಾಳಿದಾಸನು 'ಭಿನ್ನ ರುಚಿಯ ಜನರಿಗೆ ಬಹು ಪ್ರಕಾರವಾಗಿ ಆನಂದಪಡಿಸಬಹುದಾದುದು ನಾಟಕ ಒಂದೇ' ಎಂದು ಹೇಳಿದ್ದಾನೆ.

ಈಗ ಉಪಲಬ್ಧವಾಗಿರುವ ಸಂಸ್ಕೃತ ನಾಟಕಗಳ ಸಂಖ್ಯೆ ಅಷ್ಟೇನೂ ಹೆಚ್ಚಾಗಿಲ್ಲ. ಈ ಬಗೆಯ ನಾಟಕಗಳು ಕೆಲವೇ ಸುಸಂಸ್ಕೃತಾಭಿರುಚಿಯ ಜನರಲ್ಲಿ ಮಾತ್ರ ಸೀಮಿತ ಪ್ರಿಯತೆಯನ್ನು ಗಳಿಸಿದ್ದುದೇ ಇದಕ್ಕೆ ಕಾರಣವೆನ್ನಬಹುದು. ಅಲ್ಲದೆ ಮಹಮ್ಮದೀಯರ ದಾಳಿಯ ಪರಿಣಾಮವಾಗಿ ನಮ್ಮ ದೇಶದಲ್ಲಿ ಈಗ್ಗೆ ಕೆಲ ಶತಮಾನಗಳ ಹಿಂದೆ ರಾಜಕೀಯವಾಗಿ ಮಾತ್ರವಲ್ಲದೆ ಸಾಮಾಜಿಕ ವಾಗಿಯೂ ಪ್ರಕ್ಷುಬ್ಧ ಪರಿಸ್ಥಿತಿಯಿದ್ದುದರಿಂದ ಶಾಸ್ತ್ರ ಸಾಹಿತ್ಯಾದಿಗಳ ವಿಕಾಸಕ್ಕೆ ಅವಕಾಶವೇ ಇಲ್ಲದಂತಾಗಿಬಿಟ್ಟದ್ದುದು ಮತ್ತೊಂದು ಕಾರಣ. ಈಚೆಗೆ ಪ್ರಾಂತೀಯ ಭಾಷೆಗಳಲ್ಲಿ ಸಾಹಿತ್ಯಕೃತಿಗಳು ಹೆಚ್ಚಿ ಬಹುಜನಪ್ರಿಯತೆ ಗಳಿಸಿಕೊಂಡುದೂ ಕೆಲವು ಉತ್ತಮ ಪ್ರತಿಭಾಶಾಲಿಗಳಾದ ಕವಿಗಳೂ ಸಂಸ್ಕೃತ ವನ್ನು ಬಿಟ್ಟು ದೇಶಭಾಷಾ ಸಾಹಿತ್ಯರಚನೆಯಲ್ಲೇ ಮಗ್ನರಾದುದೂ ಮೂರನೆಯ ಕಾರಣ.

4 ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ ।— ಮಾಳವಿಕಾ I ೪.

# ಅಧ್ಯಾಯ ೧೧

## ಸಂಸ್ಕೃತ ನಾಟಕದ ಉಚ್ಛ್ರಾಯ ಕಾಲ

(ಭಾಸ, ಶೂದ್ರಕ, ಕಾಳಿದಾಸ, ಅಶ್ವಘೋಷ, ವಿಶಾಖದತ್ತ)

### ೧. ಭಾಸ

೧೯೧೨ನೆಯ ಇಸವಿಯಲ್ಲಿ ತಿರುವಾಂಕೂರಿನ ಪಂಡಿತ ಗಣಪತಿ ಶಾಸ್ತ್ರಿಗಳು 'ಸ್ವಪ್ನವಾಸವದತ್ತಂ' ಎಂಬ ನಾಟಕವನ್ನು ಪ್ರಕಟಿಸಿ ಅದೂ ಅದರೊಡನೆ ದೊರೆತ ಇತರ ನಾಟಕಗಳೂ ಸೇರಿ ಒಟ್ಟು ೧೩ ನಾಟಕಗಳೂ ಭಾಸಕೃತವೆಂದು ಪ್ರತಿಪಾದಿಸುವವರೆಗೆ ಭಾಸನ ಹೆಸರು ಮಾತ್ರ, ಅನಂತರ ಕಾಲದ ಕವಿಗಳ ಪ್ರಶಂಸೆಗಳ ಮೂಲಕ, ನಮಗೆ ತಿಳಿದಿತ್ತು. ಈ ಸ್ವಪ್ನವಾಸವದತ್ತವು ಶ್ರೀಶಾಸ್ತ್ರಿಗಳು ಪ್ರಾಚೀನ ಗ್ರಂಥಸಂಗ್ರಹಕ್ಕಾಗಿ ಸಂಚರಿಸುತ್ತಿದ್ದಾಗ ಅವರಿಗೆ ದೊರೆತ ೧೩ ನಾಟಕಗಳಲ್ಲಿ ಒಂದು. (ಭಾಸಕೃತಗಳೆನ್ನಲಾಗುತ್ತಿರುವ) ಈ ನಾಟಕಗಳನ್ನು ಹೀಗೆ ವಿಂಗಡಿಸಬಹುದು.

೧) ಬೃಹತ್ಕಥೆಯ ಆಧಾರದ ಮೇಲೆ ರಚಿತವಾದುವು—೧. ಪ್ರತಿಜ್ಞಾಯೌಗಂಧರಾಯಣಂ ೨. ಸ್ವಪ್ನನಾಟಕಂ[1] ೩. ಅವಿಮಾರಕಂ.

೨) ರಾಮಾಯಣದ ಆಧಾರದ ಮೇಲೆ ರಚಿತವಾದುವು—೪. ಪ್ರತಿಮಾನಾಟಕಂ ೫. ಅಭಿಷೇಕ ನಾಟಕಂ.

೩) ಮಹಾಭಾರತದ ಆಧಾರದ ಮೇಲೆ ರಚಿತವಾದುವು—೬. ಮಧ್ಯಮವ್ಯಾಯೋಗಃ ೭. ಪಂಚರಾತ್ರಂ ೮. ದೂತವಾಕ್ಯಂ ೯. ದೂತಘಟೋತ್ಕಚಂ ೧೦. ಕರ್ಣಭಾರಂ ೧೧. ಊರುಭಂಗಂ.

೪) ಕೃಷ್ಣಕಥೆಯ ಆಧಾರದ ಮೇಲೆ ಬರೆದುದು—೧೨. ಬಾಲಚರಿತಂ

೫) ಜಾನಪದ ಕಥೆಗಳ ಆಧಾರದಮೇಲೆ ಬರೆದುದು—೧೩. ಚಾರುದತ್ತಂ.

ಈ ನಾಟಕಗಳ ಕರ್ತೃ ಯಾರೆಂಬುದು ಅವುಗಳೊಂದರಲ್ಲೂ ಉಕ್ತವಾಗಿರಲಿಲ್ಲವಾದ್ದರಿಂದ ಶ್ರೀ ಶಾಸ್ತ್ರಿಗಳು ಕೆಲವು ಕಾರಣಗಳನ್ನು ಮುಂದಿಟ್ಟು (೧) ಅವೆಲ್ಲವೂ ಏಕಕರ್ತೃಕಗಳೆಂದೂ (೨) ಆ ಕರ್ತೃವು ಕಾಳಿದಾಸನಿಗಿಂತ ಪ್ರಾಚೀನ

[1] ಇದನ್ನೇ ಗಣಪತಿಶಾಸ್ತ್ರಿಗಳು ಸ್ವಪ್ನವಾಸವದತ್ತಂ ಎಂಬ ಹೆಸರಿನಿಂದ ಮೊದಲು ಪ್ರಕಟಿಸಿದುದು.



ನಾಗಿ ಅವನ ಪ್ರಶಂಸೆಗೆ ಪಾತ್ರನಾಗಿದ್ದ ಭಾಸನೇ ಎಂದೂ ತಮ್ಮ ಅಭಿಪ್ರಾಯವನ್ನು ಪ್ರಕಟಿಸಿದರು.

೧. ಈ ಹದಿಮೂರು ನಾಟಕಗಳೂ ಏಕಕರ್ತೃಕ—ಈ ಎಲ್ಲ ನಾಟಕಗಳಲ್ಲೂ ಬಹುಮುಖವಾದ ಸಾಮ್ಯಗಳು ಕಂಡುಬರುತ್ತವೆ. ಎಲ್ಲವೂ 'ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ' ಎಂದು ಆರಂಭವಾಗುತ್ತವೆ. ಆಮೇಲೆ ಸೂತ್ರಧಾರನು ಪ್ರಾರ್ಥನಾಶ್ಲೋಕ (ನಾಂದೀ ?) ಹೇಳಿ ಪ್ರಸ್ತಾವನೆ ಆರಂಭಿಸುತ್ತಾನೆ. ಕಾಳಿದಾಸಾದಿ ಕವಿಗಳ ನಾಟಕಗಳಲ್ಲಿ ಹೀಗಿಲ್ಲ. ಮೊದಲು ನಾಂದೀ ಶ್ಲೋಕವೂ ಆಮೇಲೆ 'ತತಃ ಪ್ರವಿಶತಿ ಸೂತ್ರಧಾರಃ' ಎಂಬ ರಂಗ ಸೂಚನೆಯೂ ಬರುತ್ತದೆ. ಪ್ರಸ್ತಾವನೆಗಳಲ್ಲಿ ನಾಟಕದ ಹೆಸರು, ಕವಿ ಮತ್ತು ಅವನ ಆಶ್ರಯದಾತನ ಹೆಸರು ಇತ್ಯಾದಿಗಳನ್ನು ಹೇಳುವುದು ಸಂಪ್ರದಾಯ. ಆದರೆ ಈ ನಾಟಕಗಳಲ್ಲಿ ಇವೊಂದೂ ಉಕ್ತವಾಗಿಲ್ಲ. 'ಪ್ರಸ್ತಾವನೆ' ಎಂಬ ಹೆಸರಿಗೆ ಬದಲಾಗಿ 'ಸ್ಥಾಪನೆ' ಎಂಬ ಹೆಸರನ್ನು ಈ ಎಲ್ಲ ನಾಟಕಗಳಲ್ಲೂ ಬಳಸಲಾಗಿದೆ. ಈ ನಾಟಕಗಳ ಭರತವಾಕ್ಯಗಳು ಸ್ವಲ್ಪ ಹೆಚ್ಚು ಕಡಿಮೆ ಒಂದೇ. ಭಾಷೆ ಮತ್ತು ಶೈಲಿ ಈ ಎಲ್ಲ ನಾಟಕಗಳಲ್ಲೂ ಒಂದೇ ರೀತಿ ಇವೆ. 'ಪತಾಕಾಸ್ಥಾನ'ವೂ ನಾಂದೀ ಶ್ಲೋಕದಲ್ಲಿ ಮುದ್ರಾಲಂಕಾರವೂ ಈ ನಾಟಕಗಳಲ್ಲಿ ಬಹುತರವಾಗಿ ಪ್ರಯೋಗಿಸಲ್ಪಟ್ಟಿವೆ. ಒಂದೇ ಹೆಸರಿನ ನೀಚಪಾತ್ರಗಳೂ, ಒಂದೇ ಬಗೆಯ ಭಾವಗಳೂ ಈ ನಾಟಕಗಳಲ್ಲಿ ಪುನಃ ಪುನಃ ಬಳಸಲ್ಪಟ್ಟಿವೆಯಲ್ಲದೆ, ಒಂದು ನಾಟಕದಲ್ಲಿ ಬಂದ ವಾಕ್ಯ ಅಥವಾ ಪದಸಮೂಹ ಮತ್ತು ಶ್ಲೋಕ ಅಥವಾ ಶ್ಲೋಕಗಭಾಗಗಳು ಉಳಿದ ನಾಟಕಗಳಲ್ಲೂ ಪದೇ ಪದೇ ಪ್ರಯೋಗಿಸಲ್ಪಟ್ಟಿವೆ. ಈ ನಾಟಕಗಳಲ್ಲಿ ಬರುವ ಕೆಲವು ಸನ್ನಿವೇಶಗಳು ಭರತನ ನಾಟ್ಯಶಾಸ್ತ್ರನಿಯಮಗಳಿಗನುಗುಣವಾಗಿಲ್ಲ. ಮರಣ ಮತ್ತು ಯುದ್ಧಗಳೂ ನೀರನ್ನು ತರಿಸಿ ಆಚಮನಾದಿ ಮಾಡುವುದೂ ರಂಗಸ್ಥಲದ ಮೇಲೆಯೇ ಪ್ರದರ್ಶಿತವಾಗುತ್ತವೆ. ಎಷ್ಟೋಕಡೆ ರಂಗಸೂಚನೆಗಳು ಸಾಕಷ್ಟು ಇರುವುದೇ ಇಲ್ಲ. ತುಂಬ ತ್ವರೆಯನ್ನು ಸೂಚಿಸುವಂತಹ 'ನಿಷ್ಕ್ರಮ್ಯ, ಪ್ರವಿಶ್ಯ' ಮುಂತಾದ ರಂಗಸೂಚನೆ ಪ್ರಾಯಃ ಈ ಎಲ್ಲ ನಾಟಕಗಳಲ್ಲೂ ವಿಶೇಷವಾಗಿದೆ. ನಾಟಕದ ಹೆಸರು ಆಯಾ ನಾಟಕದ ಸಮಾಪ್ತಿವಾಕ್ಯದಲ್ಲಿ ಮಾತ್ರ ಬರುತ್ತದೆ.

ಇಷ್ಟು ಬಗೆಯ ಸಾಮ್ಯಗಳು ಈ ಹದಿಮೂರು ನಾಟಕಗಳಲ್ಲೂ ಇರುವುದರಿಂದ ಈ ಎಲ್ಲ ನಾಟಕಗಳೂ ಒಬ್ಬ ಕವಿಯಿಂದಲೇ ರಚಿತವಾದುವೆಂಬುದು ಯಾರಿಗೇ ಆಗಲಿ ತೋರುವುದು ಸಹಜ.

೨. ಭಾಸನೇ ಈ ಹದಿಮೂರು ನಾಟಕಗಳನ್ನೂ ರಚಿಸಿದವನು—ಈ ಎಲ್ಲ ನಾಟಕಗಳೂ ಏಕಕರ್ತೃಕಗಳೆಂದ ಮೇಲೆ ಇವುಗಳಲ್ಲಿ ಯಾವುದಾದರೂ ಒಂದನ್ನು ರಚಿಸಿದ ಕವಿ ಇಂಥವನೆಂಬುದು ಇತ್ಯರ್ಥವಾದರೆ, ಅವನೇ ಮಿಕ್ಕ ನಾಟಕಗಳನ್ನೂ ಬರೆದವನೆಂದು ಹೇಳಿದಂತೆಯೇ. ಆದ್ದರಿಂದ, ರಾಜಶೇಖರನು (ಸುಮಾರು ೧೦ನೇ ಶತಮಾನ) ಸೂಕ್ತಿಮುಕ್ತಾವಳಿಯಲ್ಲಿ **ಭಾಸ** ಮತ್ತು ಅವನ ಕೃತಿಯಾದ **ಸ್ವಪ್ನವಾಸವದತ್ತ** ಈ ಎರಡು ಹೆಸರುಗಳನ್ನೂ ಒಟ್ಟಿಗೇ ಪ್ರಯೋಗಮಾಡಿರುವ ಈ ಶ್ಲೋಕ ತುಂಬ ಉಪಕಾರಕವಾಗುತ್ತದೆ.

ಭಾಸನಾಟಕಚಕ್ರೇಽಪಿ ಚ್ಛೇಕೈಃ ಕ್ಷಿಪ್ತೇ ಪರೀಕ್ಷಿತುಂ ।
ಸ್ವಪ್ನವಾಸವದತ್ತಸ್ಯ ದಾಹಕೋಽಭೂನ್ನ ಪಾವಕಃ ॥

ಸಂಸ್ಕೃತ ಸಾಹಿತ್ಯದಲ್ಲಿ ಒಬ್ಬನೇ ಕವಿಯಿಂದ ರಚಿತವಾದ ನಾಟಕಚಕ್ರವೆಂದರೆ ಈ ಹದಿಮೂರು ನಾಟಕಗಳನ್ನು ಬಿಟ್ಟರೆ ಬೇರೆ ಇಲ್ಲ. ಅಂತಹ ನಾಟಕಚಕ್ರದಲ್ಲೇ ಸೇರಿರುವುದಾಗಿ ಹೇಳಿರುವ ಸ್ವಪ್ನವಾಸವದತ್ತವೂ ಈ ೧೩ರಲ್ಲಿ ಒಂದು ಆದ್ದರಿಂದ ಅದರ ಕರ್ತೃ ಭಾಸನೇ ಎಂದು ಧಾರಾಳವಾಗಿ ಹೇಳಬಹುದಲ್ಲದೆ, ಇದೇ ಆಧಾರದ ಮೇಲೆ, ಏಕಕರ್ತೃಕವೆಂದು ಸಿದ್ಧವಾಗಿರುವ ಈ ೧೩ ನಾಟಕಗಳನ್ನೂ ರಚಿಸಿದವನು ಭಾಸನೇ ಎಂದು ತೀರ್ಮಾನಿಸಬಹುದು. ಇದಲ್ಲದೆ, ಬಾಣಮಹಾಕವಿಯು (ಕ್ರಿ.ಶ. ೬೩೦) ಹರ್ಷಚರಿತೆಯಲ್ಲಿ ಭಾಸನ ನಾಟಕಗಳ ಸ್ಥೂಲಸ್ವರೂಪವನ್ನು ಒಂದು ಶ್ಲೋಕದಲ್ಲಿ ಹೇಳಿದ್ದಾನೆ.

[2] ಸೂತ್ರಧಾರಕೃತಾರಂಭೈರ್ನಾಟಕೈರ್ಬಹುಭೂಮಿಕೈಃ ।
ಸಪತಾಕೈರ್ಯಶೋ ಲೇಭೇ ಭಾಸೋ ದೇವಕುಲೈರಿವ ॥

ಈ ಶ್ಲೋಕದಲ್ಲಿ ಹೇಳಿರುವ ಮೂರು ಲಕ್ಷಣಗಳೂ ಈ ೧೩ ನಾಟಕಗಳಲ್ಲಿ ಪರಿಪೂರ್ಣವಾಗಿವೆ. ಈ ಕಾರಣದಿಂದಲೂ ಇವು ಭಾಸನಿಂದಲೇ ರಚಿತವಾದುವು.

---

2 ಸೂತ್ರಧಾರನಿಂದಲೇ ಪ್ರಾರಂಭಿಸಲ್ಪಟ್ಟು ಬಹುಭೂಮಿಕೆಗಳಿಂದಲೂ ಪತಾಕಾಸ್ಥಾನಗಳಿಂದಲೂ ಕೂಡಿರುವ ನಾಟಕಗಳ ಮೂಲಕ ಭಾಸನು, ಸೂತ್ರಧಾರನಾದ ಶಿಲ್ಪಿಯಿಂದ ಪ್ರಾರಂಭಿಸಲ್ಪಟ್ಟು ಅನೇಕ ಭೂಮಿಕೆಗಳಿಂದಲೂ ಧ್ವಜಗಳಿಂದಲೂ ಕೂಡಿದ ದೇವಾಲಯಗಳಂತೆ, (ಶಾಶ್ವತವಾದ) ಕೀರ್ತಿಯನ್ನು ಗಳಿಸಿದನು.



ಈಗ ಈ ಭಾಸ ಯಾರು? ಕಾಳಿದಾಸನು ತನ್ನ ಮಾಲವಿಕಾಗ್ನಿಮಿತ್ರದಲ್ಲಿ ಪ್ರಶಂಸಿಸಿರುವ (ಅವನಿಗಿಂತ) ಪ್ರಾಚೀನನಾದ ಕವಿಯೇ? ಅಥವಾ ಅರ್ವಾಚೀನನೇ? — ಎಂಬ ಪ್ರಶ್ನೆ ಏಳುತ್ತದೆ. ಈ ನಾಟಕಗಳಲ್ಲಿ ಬರುವ ಅಪಾಣಿನೀಯ ಪ್ರಯೋಗಗಳನ್ನೂ ಭರತನ ನಾಟ್ಯಶಾಸ್ತ್ರನಿಯಮಗಳು ಅನ್ವಯಿಸದ ಸನ್ನಿವೇಶಗಳನ್ನೂ ಗಮನಿಸಿದರೆ ಭಾಸನು ಪಾಣಿನಿ, ಭರತ ಇವರಿಗಿಂತ ಪ್ರಾಚೀನನಾದವನೇ ಇರಬೇಕು. ಭಾಸನಲ್ಲಿ ವ್ಯಾಸ ವಾಲ್ಮೀಕಿಗಳು ಪ್ರಯೋಗಿಸಿರುವಂತಹ ಆರ್ಷ ಶಬ್ದಪ್ರಯೋಗಗಳು ಹೆಚ್ಚು; ಶ್ಲೋಕಗಳಲ್ಲಿ ಪಾದಪೂರಣಗಳಾದ ಚ, ತು, ಹಿ ಅಲ್ಲಲ್ಲೇ ಇವೆ; ಅನುಷ್ಟುಪ್ ಶ್ಲೋಕ ವಿಶೇಷವಾಗಿ ಬಳಸಲ್ಪಟ್ಟಿದೆ; ಇತ್ತೀಚಿನ ಕಾವ್ಯಗಳಂತೆ ಅಲಂಕಾರಗಳನ್ನು ಅಧಿಕವಾಗಿ ಬಳಸಿಲ್ಲ;—ಈ ಅಂಶಗಳನ್ನು ನೋಡಿದರೆ ಈ ಕವಿ ವ್ಯಾಸ ವಾಲ್ಮೀಕಿಗಳ ಸಮಕಾಲೀನನಲ್ಲದಿದ್ದರೂ ಅವನಿಗಿಂತ ತುಂಬ ದೂರದವನಲ್ಲವೆಂದು ಹೇಳಬೇಕಾಗುತ್ತದೆ. ಜೋನರಾಜನು ಜಯಾಂಕನ (೧೨ನೆಯ ಶತಮಾನ) ಪೃಥ್ವೀರಾಜವಿಜಯದ ಒಂದು ಶ್ಲೋಕದ ವ್ಯಾಖ್ಯಾನಮಾಡುತ್ತಾ 'ಸೋಗ್ನಿರಪಿ **ಭಾಸಮುನೇಃ** ಕಾವ್ಯಂ........' ಎಂದು ಹೇಳಿ ಭಾಸನನ್ನು ಮುನಿ ಎಂದಿರುವುದು ಪ್ರಾಯಃ ಭಾಸನ ಪ್ರಾಚೀನತೆಗೆ ಉಪಷ್ಟಂಭಕವಾಗಿದೆಯೆನ್ನಬಹುದು. ಈ ೧೩ ನಾಟಕಗಳಲ್ಲಿ ಬರುವ ಭಾವಗಳೂ ಸನ್ನಿವೇಶಗಳೂ ಕಾಳಿದಾಸ, ಅಶ್ವಘೋಷ, ಶೂದ್ರಕ, ವಿಶಾಖದತ್ತ ಮುಂತಾದವರ ಕೃತಿಗಳಲ್ಲಿ ರೂಪಾಂತರಗೊಂಡು ಕಾಣಬರುತ್ತವಾದ್ದರಿಂದ ಈ ನಾಟಕಗಳನ್ನು ರಚಿಸಿದ ಭಾಸನು ಕಾಳಿದಾಸಾದಿಗಳಿಗಿಂತ ಪ್ರಾಚೀನನಾದವನೇ ಇರಬೇಕು.

೩. ಈ ನಾಟಕ ಚಕ್ರ ರಚಿಸಿದವನು ಭಾಸನೆ, ಅಲ್ಲವೆ ಎಂಬ ವಿವಾದ— ಈ ಹದಿಮೂರು ನಾಟಕಗಳೂ ಏಕಕರ್ತೃಕ; ಮತ್ತು ಈ ನಾಟಕಗಳನ್ನು ಬರೆದವನು 'ಭಾಸ'ನೇ ಎಂಬ ಈ ಎರಡು ಅಭಿಪ್ರಾಯಗಳನ್ನೂ ಪಂಡಿತ ಗಣಪತಿ ಶಾಸ್ತ್ರಿಗಳು ಪ್ರಕಟಿಸಿದ ಮೇಲೆ, ವಿದ್ವಾಂಸರು ಈ ಬಗ್ಗೆ ವಿಚಾರ ನಡೆಸಿ, 'ಈ ನಾಟಕಗಳು ಏಕಕರ್ತೃಕ' ಎಂಬಂಶವನ್ನು ಪ್ರಾಯಃ ಎಲ್ಲರೂ ಒಪ್ಪಿಕೊಂಡರೂ 'ಅವುಗಳನ್ನು ಬರೆದವನು ಭಾಸ' ಎಂಬ ವಿಚಾರದಲ್ಲಿ ಮಾತ್ರ ಕೆಲವರು ಶ್ರೀಶಾಸ್ತ್ರಿಗಳ ಮತವನ್ನು ಅನುಮೋದಿಸಿಯೂ, ಕೆಲವರು ವಿರೋಧಿಸಿಯೂ ತಮ್ಮ ತಮ್ಮ ಸಂಶೋಧನೆಗಳನ್ನು ಪ್ರಕಟಿಸಿದರು. ಹೀಗಾಗಿ ಇದೊಂದು

ವಾದ-ವಿವಾದದಲ್ಲಿ ಪರಿಣಮಿಸಿ ಈ ಬಗ್ಗೆ ಮೂರು ವಿಧವಾದ ಅಭಿಪ್ರಾಯ ಹುಟ್ಟಿತು—

೧ ಈ ಹದಿಮೂರು ನಾಟಕಗಳೂ ಭಾಸರಚಿತವಾದುವು.

೨. ಇವುಗಳಲ್ಲೊಂದೂ ಭಾಸರಚಿತವಲ್ಲ.

೩. ಇವು ಭಾಸರಚಿತ ನಾಟಕಗಳೆನ್ನಲು ಸಾಕಷ್ಟು ಆಧಾರಗಳು ಇನ್ನೂ ದೊರೆತಿಲ್ಲವಾದ್ದರಿಂದ, ಇವುಗಳನ್ನು ರಚಿಸಿದವನು ಇಂತಹವನೇ ಎಂದು ಈಗಲೇ ಹೇಳಲಾಗುವುದಿಲ್ಲ.

ಈ ನಾಟಕಗಳು ಭಾಸರಚಿತವಲ್ಲವೇ ಅಲ್ಲ, ಎಂದು ವಾದಮಾಡುವವರು ಹೇಳುವ ಕಾರಣಗಳು ಇವು—ಬಾಣನು 'ಸೂತ್ರಧಾರಕೃತಾರಂಭೈಃ......' ಶ್ಲೋಕದಲ್ಲಿ ಹೇಳಿರುವ ಲಕ್ಷಣಗಳು ದಕ್ಷಿಣದೇಶದಲ್ಲಿ ರಚಿತವಾಗಿರುವ ಇನ್ನೂ ಅನೇಕ ನಾಟಕಗಳಲ್ಲಿ ಕಂಡುಬರುತ್ತವೆಯಾಗಿ, ಅವು ನಿರ್ಣಾಯಕವಾಗ ಲಾರವು. ರಾಮಚಂದ್ರಕೃತ ನಾಟ್ಯದರ್ಪಣದಲ್ಲಿ ಭಾಸನ ಸ್ವಪ್ನವಾಸವದತ್ತ ದಿಂದ ಕೆಲವು ವಾಕ್ಯಗಳು ಉದ್ಧೃತವಾಗಿವೆ. ಅಲ್ಲಿ ವತ್ಸರಾಜನು ಶೇಫಾಲಿಕಾ ಮಂಟಪದ ಶಿಲಾತಲವನ್ನು ನೋಡಿ ಹೇಳುವ

ಪಾದಾಕ್ರಾಂತಾನಿ ಪುಷ್ಪಾಣಿ ಸೋಷ್ಮ ಚೇದಂ ಶಿಲಾತಲಂ ।
ನೂನಂ ಕಾಚಿದಿಹಾಸೀನಾ ಮಾಂ ದೃಷ್ಟ್ವಾ ಸಹಸಾ ಗತಾ ॥

ಎಂಬ ಶ್ಲೋಕವೂ ಒಂದು. ಈಗ ಸಿಕ್ಕಿರುವ ನಾಟಕದಲ್ಲಿ ಶೇಫಾಲಿಕಾ ಮಂಟಪದ ಪ್ರಸ್ತಾಪವಿದೆ; ಈ ಶ್ಲೋಕವಿಲ್ಲ. ಆದ್ದರಿಂದ ಈ ಸ್ವಪ್ನವಾಸವದತ್ತ ಭಾಸಕೃತ ನಾಟಕವಲ್ಲ. ಅದು ಅನ್ಯಕೃತವಾಗಿರಬೇಕು. ಈ ಸ್ವಪ್ನವಾಸವ ದತ್ತ ಭಾಸಕೃತವಲ್ಲವೆಂದ ಮೇಲೆ ಉಳಿದ ನಾಟಕಗಳೂ ಭಾಸಕೃತವಲ್ಲ.

ಈ ರೀತಿ ಬಲವಾದ ಎರಡು ಪಕ್ಷಗಳಲ್ಲಿ ಸಕಾರಣವಾದ ವಾದವಿವಾದ ಏರ್ಪಟ್ಟಿದ್ದರಿಂದ ಮಧ್ಯಮಮಾರ್ಗಾವಲಂಬಿಗಳಾದ ವಿದ್ವಾಂಸರ ಮೂರ ನೆಯ ಪಕ್ಷವೊಂದು ತಲೆಯೆತ್ತಿ ಯಾವುದೊಂದು ತೀರ್ಮಾನಕ್ಕೂ ಬರಲು ಸಾಕಷ್ಟು ಆಧಾರವಿಲ್ಲವೆಂದು ಅಭಿಪ್ರಾಯಪಟ್ಟಿತು.

ಹೀಗಾಗಿ ಇಂದಿನವರೆಗೂ ವಿದ್ವಾಂಸರು ಯಾವ ನಿರ್ಧಾರಕ್ಕೂ ಬರ ಲಾಗದೆ ಈ ಮೂರು ಅಭಿಪ್ರಾಯಗಳೂ ಹಾಗೆಯೇ ಉಳಿದಿರುವುದರಿಂದ ವಾದವಿವಾದ ಬಗೆಹರಿಯದೆ, ಯಾವ ಸಿದ್ಧಾಂತವೂ ಆಗದೆ, ಈ ನಾಟಕಗಳ ಕರ್ತೃತ್ವವಿಚಾರ ಜಟಿಲವಾದ ಸಮಸ್ಯೆಯಾಗಿಯೇ ಉಳಿದಿದೆ.



**ಫಲಿತಾಂಶ**—ಈ ಎಲ್ಲ ವಿಚಾರಗಳಿಂದಲೂ ಕೆಲವು ಅಂಶಗಳು ಮಾತ್ರ ಸಿದ್ಧವಾಗುತ್ತವೆ. ಕಾಳಿದಾಸನಿಗಿಂತ ಹಿಂದೆ ಭಾಸನೆಂಬ ನಾಟಕ ಕರ್ತನಿದ್ದು ಆತನು ಸ್ವಪ್ನವಾಸವದತ್ತವೆಂಬ ಉತ್ತಮರೀತಿಯ ನಾಟಕ ಬರೆ ದಿದ್ದನೆಂಬುದು ಕಾಳಿದಾಸನ ಮತ್ತು ರಾಜಶೇಖರನ ವಾಕ್ಯಗಳಿಂದ ಪ್ರಮಾ ಣಿತವಾಗಿದೆ. ಇದರಲ್ಲಿ ಸಂಶಯಕ್ಕೆ ಅವಕಾಶವಿಲ್ಲ. ಈಗ ದೊರೆತಿರುವ ಹದಿಮೂರು ರೂಪಕಗಳೂ ಏಕಕರ್ತೃಕ ಎಂಬ ಅಂಶವೂ ನಾನಾ ಹೇತುಗಳಿಂದ ಅನುಮಿತವಾಗಿದೆ. ಈ ಏಕಕರ್ತೃಕ ರೂಪಕಗಳು ಭಾಸರಚಿತವೆಂಬಂಶವಂತು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲದೆ, ಬರೀ ಊಹೆಯ ಮೇಲೆಯೇ ನಿಂತಿದೆ. ಪ್ರಸ್ತಾವನೆಗಳಲ್ಲಿ ಭಾಸನೇ ರಚಿಸಿದ್ದೆಂಬ ಸ್ಪಷ್ಟೋಕ್ತಿರೂಪವಾದ ಅಂತಃ ಪ್ರಮಾಣವಿಲ್ಲದ ಮೇಲೆ ಎಷ್ಟು ವಿಚಾರಮಾಡಿದರೂ ಭಿನ್ನಾಭಿಪ್ರಾಯಗಳಿಗೆ ಅವಕಾಶವಿದ್ದೇ ಇರುತ್ತದೆ. ಪ್ರಬಲವಾದ ಬಾಹ್ಯ ಪ್ರಮಾಣಗಳು ಮುಂದಾ ದರೂ ದೊರೆತರೆ, ಆಗ ಈ ಕರ್ತೃತ್ವದ ವಿಚಾರ ಇತ್ಯರ್ಥವಾಗಬಹುದು. ಕರ್ತೃತ್ವವಿಚಾರ ಹೇಗೆಯೇ ಇರಲಿ, ಈಗ ದೊರೆತಿರುವ ರೂಪಕಗಳೆಲ್ಲಾ ಉತ್ತ ಮೋತ್ತಮ ಕೃತಿಗಳೆಂದು ವಿದ್ವಾಂಸರ ಮೆಚ್ಚುಗೆ ಪಡೆದು ಸಂಸ್ಕೃತ ಸಾಹಿತ್ಯ ಭಂಡಾರದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿವೆ.

## ಭಾಸನ ಕಾಲ

ಕಾಳಿದಾಸನು ಭಾಸನನ್ನು ತನಗಿಂತ ಪ್ರಾಚೀನನೆಂದು ವಾಚ್ಯವಾಗಿಯೇ ಹೇಳಿದ್ದಾನೆ. ಬಾಣ ಅವನ ಯಶಸ್ಸನ್ನು ಪ್ರಸ್ತಾಪಿಸಿದ್ದಾನೆ. ಆದ್ದರಿಂದ ಕಾಳಿ ದಾಸ-ಬಾಣರಿಗಿಂತ ಭಾಸ ಹಿಂದಿನವನೆಂಬುದರಲ್ಲಿ ಸಂಶಯವಿಲ್ಲ. ಭಾಸನು ತನ್ನ ಪ್ರತಿಮಾ ಮತ್ತು ಅಭಿಷೇಕ ನಾಟಕಗಳ ವಸ್ತುವನ್ನು ವಾಲ್ಮೀಕಿ ರಾಮಾ ಯಣದಿಂದಲೂ, ದೂತವಾಕ್ಯ ಮುಂತಾದ ಏಕಾಂಕನಾಟಕಗಳ ವಸ್ತುವನ್ನು ವ್ಯಾಸನ ಮಹಾಭಾರತದಿಂದಲೂ ತೆಗೆದುಕೊಂಡಿರುವುದರಿಂದ ಅವನು ವ್ಯಾಸ ವಾಲ್ಮೀಕಿಗಳಿಗಿಂತ ಈಚಿನವನೆಂದು ಧಾರಾಳವಾಗಿ ಹೇಳಬಹುದು. ಇಷ್ಟು ಖಚಿತವಾದ ಎಲ್ಲೆಗಳು ಸಿಕ್ಕಿದ್ದರೂ ಭಾಸನ ಕಾಲ ನಿಷ್ಕೃಷ್ಟವಾಗಿ ತಿಳಿಯುವ ಹಾಗೆಯೇ ಇಲ್ಲ. ಕಾಳಿದಾಸನ ಕಾಲವಿನ್ನೂ ನಿಖರವಾಗಿ ತಿಳಿದಿಲ್ಲ. ಅವನು ಕ್ರಿ. ಪೂ. ೧ನೆಯ ಶತಮಾನದವನೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟರೆ, ಕ್ರಿ.ಶ. ೬ನೆಯ ಶತಮಾನದವನೆಂದು ಮತ್ತೆ ಕೆಲವರು ವಾದಿಸುತ್ತಾರೆ.

ವ್ಯಾಸ-ವಾಲ್ಮೀಕಿಗಳ ಕಾಲವೂ ಹಾಗೆಯೇ. ವಾಲ್ಮೀಕಿಯ ಕಾಲ ಕೀತ್‌ರವರ ಅಭಿಪ್ರಾಯದಲ್ಲಿ ಕ್ರಿ.ಪೂ. ೪ನೆಯ ಶತಮಾನವಾದರೆ, ಜಾಕೋಬಿಯವರ ಅಭಿಪ್ರಾಯದಲ್ಲಿ ಕ್ರಿ.ಪೂ. ೫ನೆಯ ಶತಮಾನಕ್ಕಿಂತ ಹಿಂದಕ್ಕೆ ಹೋಗುತ್ತದೆ. ಬಾಣನ ಕಾಲ ಒಂದು ಮಾತ್ರ ಖಚಿತವಾಗಿ ಕ್ರಿ.ಶ. ೬ನೆಯ ಶತಮಾನದ ಕೊನೆಯೆಂದು ತಿಳಿದಿದೆ. ಆದ್ದರಿಂದ ಭಾಸ ಕ್ರಿ.ಶ. ೬ನೆಯ ಶತಮಾನಕ್ಕಿಂತ ಹಿಂದಿನವನೆಂದಂತಾಯಿತು.

ಪ್ರತಿಮಾನಾಟಕದಲ್ಲಿ ಬರುವ ಒಂದು ಪ್ರಸಂಗದಿಂದ (v[46, 49]) ಭಾಸನ ಕಾಲದಲ್ಲಿ ಗೋಹತ್ಯೆ ಇನ್ನೂ ನಿಂತಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ ಕ್ರಿಸ್ತ ಶಕದ ಪ್ರಾರಂಭದ ವೇಳೆಗೇ ಗೋಹತ್ಯೆ ಸಂಪೂರ್ಣವಾಗಿ ನಿಂತುಹೋಗಿತ್ತೆಂದು ಡಾ. ಡಿ. ಆರ್. ಭಂಡಾರ್‌ಕರ್‌ರವರು ಪ್ರಮಾಣಗಳೊಡನೆ ತೋರಿಸಿದ್ದಾರೆ. ಜನರ ಮನೋಭಾವದಲ್ಲಿ ಈ ರೀತಿಯ ಪರಿವರ್ತನೆಗೆ ಬೌದ್ಧಜೈನತತ್ವಗಳಿಂದ ಪ್ರಚೋದಿತವಾದ ವೃಷಲ ಸಂಪ್ರದಾಯವೇ ಕಾರಣವೆನ್ನಬಹುದು. ಆದ್ದರಿಂದ ಭಾಸ ಈ ಸಂಪ್ರದಾಯ ಹರಡುವುದಕ್ಕೂ ಹಿಂದೆಯೇ (ಅಂದರೆ ಕ್ರಿ.ಪೂ. ೪ನೆಯ ಶತಮಾನಕ್ಕೂ ಹಿಂದೆಯೇ) ಇದ್ದಿರಬೇಕು.

ಯಜ್ಞ ಯಾಗಾದಿಗಳು ಅವಶ್ಯ ಕರ್ತವ್ಯಗಳೆಂಬುದು ಭಾಸನ ಮತ. ಅವಕಾಶ ದೊರೆತಾಗಲೆಲ್ಲಾ ಅವನು ಇದನ್ನು ಒತ್ತಿ ಹೇಳುತ್ತಾನೆ. ಪಂಚರಾತ್ರ ನಾಟಕದಲ್ಲಿ ದುರ್ಯೋಧನನಿಂದ ಆಚರಿಸಲ್ಪಟ್ಟ ಯಜ್ಞದ ಪ್ರಶಂಸೆ ಸುದೀರ್ಘವಾಗಿಯೇ ಇದೆ. ಕರ್ಣನಾಡುವ 'ಏತೇ ಸಕೋಶಾಃ ಪುರುಷಾಃ ಸರಾಷ್ಟ್ರಾಃ ನಷ್ಟಾಃ ಶರೀರೈಃ ಕ್ರತುಭಿರ್ಧರಂತೇ (—ಪಂಚರಾತ್ರ I ೨೫) ಮತ್ತು 'ಶಿಕ್ಷಾ ಕ್ಷಯಂ ಗಚ್ಛತಿ ಕಾಲಪರ್ಯಯಾತ್.... ಹುತಂ ಚ ದತ್ತಂ ಚ ತಥೈವ ತಿಷ್ಠತಿ' (—ಕರ್ಣಭಾರ ೨೨) ಎಂಬ ಶ್ಲೋಕಗಳಲ್ಲೂ ಯಜ್ಞಗಳ ವೈಶಿಷ್ಟ್ಯ ಕೊಂಡಾಡಲ್ಪಟ್ಟಿದೆ. 'ಯಜ್ಞಫಲ' ನಾಟಕದಲ್ಲಂತು ರಾಮಾದಿಗಳ ಜನನ ದಶರಥನು ಆಚರಿಸಿದ ಪುತ್ರಕಾಮೇಷ್ಟಿ ಯಾಗದ ಫಲ; ರಾಮನ ಅಸ್ತ್ರಸಂಪಾದನೆ ವಿಶ್ವಾಮಿತ್ರನ ಯಾಗದ ಸಂರಕ್ಷಣೆಯ ಫಲ; ರಾಮಾದಿಗಳ ವಿವಾಹ ಜನಕನು ಮಾಡಿದ ಯಜ್ಞದ ಫಲ; ಇಷ್ಟೇ ಅಲ್ಲದೆ 'ಯಜ್ಞಫಲ' ಎಂಬ ಮಾತು ನಾಟಕದ ಉದ್ದಕ್ಕೂ ಪುನಃ ಪುನಃ ಕೇಳಿ ಬರುತ್ತದೆ. ಯಜ್ಞಯಾಗಾದಿಗಳ ಮೇಲೆ ಭಾಸನಿಗಿದ್ದ ಈ ಅಪಾರ ಗೌರವ ಅವನ ಕಾಲದ ಜನರ ಮನೋಭಾವವನ್ನೇ



ಪ್ರತಿಬಿಂಬಿಸುತ್ತದೆಯೆನ್ನಬಹುದಾದ್ದರಿಂದ, ಜನರು ಬೌದ್ಧಮತದ ಕಡೆ ವಾಲುವುದಕ್ಕೆ ಪೂರ್ವವರ್ತಿಯಾದ ಕಾಲದಲ್ಲಿ ಭಾಸನಿದ್ದಿರಬೇಕು.

ಪಾಣಿನಿಯ ವ್ಯಾಕರಣ ನಿಯಮಗಳಿಗೂ ಭರತನ ನಾಟ್ಯಶಾಸ್ತ್ರ ಸಂಪ್ರದಾಯಗಳಿಗೂ ವಿರುದ್ಧವಾದ ಪ್ರಯೋಗಗಳು ಭಾಸನ ಈ ನಾಟಕಗಳಲ್ಲಿ ಕಂಡುಬರುವುದರಿಂದ ಭಾಸನು ಪಾಣಿನಿ ಭರತರಿಗಿಂತ ಹಿಂದಿನವನೆನ್ನುವವರಿದ್ದಾರೆಂದು ಹಿಂದೆ ಹೇಳಿದ್ದೇವೆ. ಭಾಸ ಈಚಿನವನಾಗಿದ್ದರೆ ಅವನು ಭರತ ಮತ್ತು ಪಾಣಿನಿಯ ನಿಯಮಗಳಿಗೆ ಕಟ್ಟುಬೀಳುತ್ತಿದ್ದನೆಂಬುದು ಇವರ ಅಭಿಪ್ರಾಯ. ಪಾಣಿನಿಗಿಂತ ಭಾಸ ಪ್ರಾಚೀನನಾಗಿದ್ದರೆ ಅವನು ಪ್ರಯೋಗಿಸಿರುವ ಶಬ್ದರೂಪಗಳಿಗೆ ಪಾಣಿನಿಯಿಂದಲೇ ಸಮರ್ಥನೆ ದೊರೆತು ಅದಕ್ಕೆ ತಕ್ಕಂತೆ ನಿಯಮಗಳೇರ್ಪಡುತ್ತಿದ್ದುವೆಂಬುದನ್ನು ಇವರು ಮರೆತಿದ್ದಾರೆ. ಆದ್ದರಿಂದ ಭಾಸ ಪಾಣಿನಿಯ ( ಹಿರಿಯ ) ಸಮಕಾಲೀನನಾಗಿದ್ದು ಇಬ್ಬರೂ ತುಂಬ ದೂರದ ಅಂತರವುಳ್ಳ ದೇಶಗಳಲ್ಲಿ ವಾಸಿಸುತ್ತಿದ್ದುದರಿಂದ ಭಾಸನ ಪ್ರಯೋಗಗಳು ಪಾಣಿನಿಗೆ ಆಧಾರವಾಗಲಿಲ್ಲವೆಂದು ಹೇಳುವುದೇ ಸಮಂಜಸವಾಗಬಹುದು.

ಕೆಲವು ವಿದ್ವಾಂಸರು ವ್ಯಾಸವಾಲ್ಮೀಕಿಗಳ ಕಾಲವನ್ನು ಇನ್ನೂ ಹಿಂದಕ್ಕೆ ಹಾಕಿ, ಭಾಸ ಕ್ರಿ.ಪೂ. ೬ನೆಯ ಶತಮಾನದವನೆನ್ನುತ್ತಾರೆ. ಬಾಣನ ಶ್ಲೋಕದ ಪ್ರಮಾಣವನ್ನು ಅಂಗೀಕರಿಸದೆ ಭಾಸ ಕ್ರಿ.ಶ. ೧೧ನೆಯ ಶತಮಾನದವನೆನ್ನುವವರೂ ಇದ್ದಾರೆ. ಪಾಣಿನಿಗಿಂತ ಭಾಸ ಹಿಂದಿನವನೆಂಬುದು ಗಣಪತಿಶಾಸ್ತ್ರಿಗಳ ಮತ. ಆದರೆ ಪಾಣಿನಿಯ ಕಾಲವೇ ಸರಿಯಾಗಿ ಗೊತ್ತಾಗಿಲ್ಲ. ಭಾಸನನ್ನು ಪಾಣಿನಿಗಿಂತ ಹಿಂದಿನವನೆಂದು ಎಲ್ಲರೂ ಒಪ್ಪುವುದಿಲ್ಲ. ಕಾಳಿದಾಸನಿಗಿಂತ ಸ್ವಲ್ಪ ಹಿಂದಿನವನೆನ್ನುತ್ತಾರೆ. ಹೀಗಾಗಿ ಭಾಸನ ಕಾಲವೂ ಇತ್ಯರ್ಥವಾಗದೆ ಹಾಗೆಯೇ ಉಳಿದಿದೆ.[3]

---

3 ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯರೀತ್ಯಾ ಭಾಸನ ಕಾಲ—

ಗಣಪತಿಶಾಸ್ತ್ರಿ, ಹರಪ್ರಸಾದಶಾಸ್ತ್ರಿ ಮತ್ತು ಪುಸಲ್ಕರ್.... ಕ್ರಿ.ಪೂ. ೬ನೇ ಶತಮಾನ
ಜಾಗೀರ್‌ದಾರ್, ಕುಲಕರ್ಣಿ .... ಕ್ರಿ.ಪೂ. ೩ನೇ ಶತಮಾನ
ಜಯಸ್ವಾಲ್, ಚೌಧುರಿ, ಧ್ರುವ .... ಕ್ರಿ.ಪೂ. ೨-೧ನೇ ಶತಮಾನ
ಕೋನೋ, ಸರುಪ್, ವೆಲ್ಲರ್ .... ಕ್ರಿ.ಶ. ೨ನೇ ಶತಮಾನ
ಕೀತ್, ಜಾಲಿ, ಜಾಕೋಬಿ, ಬಾನರ್ಜಿಶಾಸ್ತ್ರಿ ಮತ್ತು
ಭಂಡಾರ್‌ಕರ್.... ಕ್ರಿ.ಶ. ೩ನೇ ಶತಮಾನ

## ಭಾಸ ವಿರಚಿತ ಗ್ರಂಥಗಳು

ಗಣಪತಿಶಾಸ್ತ್ರಿಗಳು ಪ್ರಕಟಿಸಿದ ಹದಿಮೂರು ರೂಪಕಗಳೂ ಭಾಸಕೃತವೆಂದೇ ಸಾಮಾನ್ಯವಾಗಿ ಹೇಳಲಾಗುತ್ತಿದೆ. ಇದಲ್ಲದೆ ೧೯೪೧ರಲ್ಲಿ ಪ್ರಕಟಿತವಾದ ಯಜ್ಞಫಲವೆಂಬ ರಾಮಾಯಣದ ಬಾಲಕಾಂಡದ ಕಥೆಯ ಮೇಲೆ ರಚಿತವಾದ ನಾಟಕವನ್ನೂ ಭಾಸನದೆಂದೇ ಕೆಲವರು ಅಭಿಪ್ರಾಯಪಡುತ್ತಿದ್ದಾರೆ.

ಶಾರ್ಙ್ಗಧರಪದ್ಧತಿಯಲ್ಲಿ ಐದು, ಸುಭಾಷಿತಾವಳಿಯಲ್ಲಿ ನಾಲ್ಕು, ಸದುಕ್ತಿಕರ್ಣಾಮೃತದಲ್ಲಿ ಮೂರು, ಸೂಕ್ತಿಮುಕ್ತಾವಳಿಯಲ್ಲಿ ಒಂದು, — ಹೀಗೆ ಒಟ್ಟು [4]೧೩ ಶ್ಲೋಕಗಳನ್ನು ಸುಭಾಷಿತ ಸಂಗ್ರಹಕಾರರು ತಮ್ಮ ತಮ್ಮ ಸಂಗ್ರಹಗಳಲ್ಲಿ ಸೇರಿಸಿ ಅವು ಭಾಸಕೃತವೆಂದು ಹೇಳಿದ್ದಾರೆ. ಆದರೆ ಅವೊಂದೂ ಈಗ ದೊರೆತಿರುವ ನಾಟಕಗಳಲ್ಲಂತು ಬರುವುದಿಲ್ಲ. ಮುಂದೆ ದೊರಕಬಹುದಾದ ನಾಟಕಗಳಲ್ಲಿ ಈ ಪೈಕಿ ಕೆಲವು ಶ್ಲೋಕಗಳಾದರೂ ಇರಬಹುದೆಂಬ ನಿರೀಕ್ಷೆ ಇದೆ.

---

| | |
|---|---|
| ಲಿಸ್ನಿ ಮತ್ತು ವಿಂಟರ್‌ನಿಟ್ಸ್ | ....ಕ್ರಿ.ಶ. ೪ನೇ ಶತಮಾನ |
| ಶಂಕರ್ | ....ಕ್ರಿ.ಶ. ೫-೬ನೇ ಶತಮಾನ |
| ದೇವಧರ್, ಬಾರ್ನೆಟ್, ಹೀರಾನಂದಶಾಸ್ತ್ರಿ, ನೆರುರ್‌ಕರ್, ಪಿಶರೋಟಿ | ....ಕ್ರಿ.ಶ. ೭ನೇ ಶತಮಾನ |
| ಕಾಣೆ | ....ಕ್ರಿ.ಶ. ೯ನೇ ಶತಮಾನ |
| ರಾಮಾವತಾರಶರ್ಮ | ....ಕ್ರಿ.ಶ. ೧೦ನೇ ಶತಮಾನ |
| ರಂಗಾಚಾರ್ಯ ರೆಡ್ಡಿ | ....ಕ್ರಿ.ಶ. ೧೧ನೇ ಶತಮಾನ |

**ಸೂಚನೆ**— ಪ್ರೊ. ಮೆಗ್ಡಾನಲ್‌ರವರು ಭಾಸನ ಕಾಲದ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ.

[4] ಯಶಸ್ತಿಲಕ ಚಂಪೂಕಾರನಾದ ಸೋಮದೇವನು 'ಪೇಯಾ ಸುರಾ ಪ್ರಿಯತಮಾ ಮುಖಂ.........' ಎಂಬ ಶ್ಲೋಕವನ್ನು ಭಾಸನದೆಂದು ಹೇಳಿದ್ದಾನೆ. ಈ ಶ್ಲೋಕ ಶಾರ್ಙ್ಗಧರಪದ್ಧತಿಯಲ್ಲೂ ಭಾಸನದೆಂದೇ ಹೇಳಲ್ಪಟ್ಟಿದೆ. ಆದರೆ ಅದು ಮಹೇಂದ್ರವಿಕ್ರಮವರ್ಮನ 'ಮತ್ತವಿಲಾಸ'ದಲ್ಲಿದೆ. ಭಾಸನದೆಂದು ಹೇಳುವ ಇತರ ನಾಲ್ಕು ಪದ್ಯಗಳನ್ನು ಬೇರೆ ಬೇರೆ ಸುಭಾಷಿತಸಂಗ್ರಹಕಾರರು ಇತರ ಕವಿಕೃತವೆಂದು ಹೇಳಿದ್ದಾರೆ. ಒಂದೇ ಶ್ಲೋಕವನ್ನು ಬೇರೆ ಬೇರೆ ಸುಭಾಷಿತಸಂಗ್ರಹಕಾರರು ಬೇರೆ ಬೇರೆ ಕವಿಗಳದ್ದೆಂದು ಹೇಳಿರುವ ನಿದರ್ಶನಗಳು ಬೇಕಾದಷ್ಟಿವೆ. F. W. ಥಾಮಸ್‌ರವರ ಲೇಖನವನ್ನು (J.R.A.S. 1927 ಪುಟ ೮೮೩) ನೋಡಿ.



ಭಾಸರಚಿತವೆಂದು ಹೇಳಲಾಗುತ್ತಿರುವ ಅನಂತಶಯನದ ೧೩ ರೂಪಕಗಳೂ, ಗೊಂಡಾಲಿನಲ್ಲಿ ಪ್ರಕಟಿತವಾದ ಯಜ್ಞಫಲವೂ ಉತ್ತಮವಾದ ಸಂಸ್ಕೃತ ರೂಪಕಗಳೆಂಬುದರಲ್ಲಿ ಸಂದೇಹವೇ ಇಲ್ಲ. ಇವೆಲ್ಲವೂ ಪ್ರದರ್ಶನಕ್ಕೆ ಯೋಗ್ಯವಾಗಿರುವುದು ಇವುಗಳ ವೈಶಿಷ್ಟ್ಯ. ಇವು ಭಾಸಕೃತವಾದ ಮೂಲ ನಾಟಕಗಳ ಸಂಗ್ರಹಗಳು ; ಕೇರಳದೇಶದ ನಟರಿಂದ ಪ್ರದರ್ಶನಕ್ಕಾಗಿಯೇ ಹೀಗೆ ರೂಪಾಂತರಿತವಾದುವು ಎಂದು ಕೆಲವರು ವಾದಿಸುತ್ತಾರೆ. ಈ ನಾಟಕಗಳಲ್ಲಿ ಪುರುಷಪಾತ್ರಗಳೇ ಹೆಚ್ಚು. ದೂತವಾಕ್ಯ, ಕರ್ಣಭಾರಗಳಲ್ಲಿ ಸ್ತ್ರೀಪಾತ್ರವೇ ಇಲ್ಲ. ಪಂಚರಾತ್ರದಲ್ಲಿ ಬರುವ ಬೃಹನ್ನಳೆ ವಸ್ತುತಃ ಅರ್ಜುನನೇ. ಪಂಚರಾತ್ರದ ಕಥಾವಸ್ತುವಿಗೂ ಮಹಾಭಾರತದ ಕಥೆಗೂ ಸಂಬಂಧವೇ ಇಲ್ಲ. ಭಾಸನ ಪಂಚರಾತ್ರರೀತ್ಯಾ ಮಹಾಭಾರತದ ಯುದ್ಧವೇ ನಡೆಯುವುದಿಲ್ಲ. ಹೀಗೆಯೇ ಒಂದೊಂದು ನಾಟಕವಲ್ಲೂ ಭಾಸನ ಕೈವಾಡ ಪರಿಪೂರ್ಣವಾಗಿದೆ. ಒಟ್ಟಿನಲ್ಲಿ ಈ ನಾಟಕಗಳೆಲ್ಲಾ ಕಾಳಿದಾಸಾದಿಗಳಿಂದ ರಚಿತವಾದ ನಾಟಕಗಳಿಗಿಂತ ಸ್ವರೂಪತಃ ಭಿನ್ನವಾಗಿದ್ದರೂ, ಭಾವಪುಷ್ಟಿ, ರಚನಾಕೌಶಲ ಕಲಾನೈಪುಣ್ಯಗಳ ದೃಷ್ಟಿಯಿಂದ ಅವೆಲ್ಲಕ್ಕೂ ಆದರ್ಶಪ್ರಾಯವಾಗಿವೆ.

## ಇತರ ವಿಚಾರಗಳು

ಭಾಸನ ಜೀವಿತದ ವಿಚಾರದಲ್ಲಿ ವಿಶೇಷವಾಗಿ ಏನನ್ನೂ ಹೇಳುವ ಹಾಗಿಲ್ಲ. ಅವನ 'ಕಾಲ'ದ ವಿಷಯವಾಗಿ ಈಗಾಗಲೇ ಹೇಳಿ ಆಗಿದೆ. ವ್ಯಾಸ ವಾಲ್ಮೀಕಿಗಳಂತೆ ಅವನೂ ಒಬ್ಬ 'ಮುನಿ' ಯಾಗಿದ್ದಿರಬಹುದು. ಅವನು ವೈಷ್ಣವ ಸಂಪ್ರದಾಯದವನೆಂದು ಸ್ಥೂಲವಾಗಿ ಹೇಳಬಹುದು. ಭಾಸನ ನಾಟಕಗಳ ನಾಯಕರಿಗೆ ಬ್ರಾಹ್ಮಣೋಚಿತ ಕರ್ಮಗಳ ಮತ್ತು ಆಚಾರ ಸಂಪ್ರದಾಯಗಳ ವಿಚಾರದಲ್ಲಿ ಅತ್ಯಂತ ಮರ್ಯಾದೆಯಿಂದ ಕೂಡಿದ ವ್ಯವಹಾರವಿರುವುದೂ, ಬಾಲಚರಿತದಲ್ಲಿ ಕಂಸ ಹೇಳುವ — 'ಬ್ರಾಹ್ಮಣರಾಡುವ ಅಸತ್ಯವೂ ನನಗೆ ಸತ್ಯವೇ' ಎಂಬ ಮಾತೂ ಭಾಸನಿಗೆ ಬ್ರಾಹ್ಮಣರ ಮತ್ತು ಬ್ರಾಹ್ಮಣ್ಯದ ಮೇಲಿದ್ದ ಅಭಿಮಾನ ಗೌರವಗಳನ್ನು ಸೂಚಿಸುತ್ತವೆ. ಧರ್ಮ ಪರಿಪಾಲನೆ ಪ್ರತಿಯೊಬ್ಬನ ಆದ್ಯ ಕರ್ತವ್ಯ. 'ರಾಜನಾದವನು [5]ಭೂಮಿ

---

[5] ಪ್ರತಿಜ್ಞಾ i 9

ಯನ್ನು ನ್ಯಾಯವಾದ ರೀತಿಯಲ್ಲಿ ಪರಿಪಾಲಿಸಿದರೆ, ಆ ಭೂಮಿಯು ಅವನನ್ನು ಆಪತ್ಕಾಲದಲ್ಲಿ ಖಂಡಿತವಾಗಿಯೂ ರಕ್ಷಿಸುತ್ತದೆ.' [6]'ಸ್ವರ್ಗ ಪರೋಕ್ಷವಲ್ಲ; ಅದು ಬಹುಗುಣವಾಗಿ ಇಹಲೋಕದಲ್ಲೇ ಫಲಿಸುತ್ತದೆ.' [7]' ಯಾಚಿತವಾದ ಭೈಕ್ಷ್ಯದ ವಿಷಯದಲ್ಲೂ ಜನ ಆಡಿದ ಮಾತನ್ನು ಉಳಿಸಿಕೊಂಡರೇ ಅವರೂ ಉಳಿಯುವುದು '—ಇದು ಭಾಸನ ದೃಢವಾದ ನಂಬಿಕೆ.

ಯಜ್ಞಯಾಗಾದಿಗಳನ್ನೂ ದಾನಮಾಡುವುದನ್ನೂ ಭಾಸ ವಿಶೇಷವಾಗಿ ಕೊಂಡಾಡುತ್ತಾನೆ. ಕರ್ಣನಾಡುವ

ಇಕ್ಷ್ವಾಕು-ಶರ್ಯಾತಿ-ಯಯಾತಿ-ರಾಮ-ಮಾಂಧಾತೃ-ನಾಭಾಗ-ನೃಗಾಂಬರೀಷಾಃ ।
ಏತೇ ಸಕೋಶಾಃ ಪುರುಷಾಃ ಸರಾಷ್ಟ್ರಾಃ ನಷ್ಟಾಃ ಶರೀರೈಃ ಕ್ರತುಭಿರ್ಧರಂತೇ॥ ಪಂಚ iii 25
ಶಿಕ್ಷಾ ಕ್ಷಯಂ ಗಚ್ಛತಿ ಕಾಲಪರ್ಯಯಾತ್, ಸುಬದ್ಧಮೂಲಾ ನಿಪತಂತಿ ಪಾದಪಾಃ ।
ಜಲಂ ಜಲಸ್ಥಾನಗತಂ ಚ ಶುಷ್ಯತಿ, ಹುತಂ ಚ ದತ್ತಂ ಚ ತಥೈವ ತಿಷ್ಠತಿ॥ ಕ. ಭಾ. 22.

—ಈ ಎರಡು ಶ್ಲೋಕಗಳೂ ಭಾಸನ ಮನೋಗತವನ್ನೇ ಪ್ರತಿಬಿಂಬಿಸುತ್ತವೆಂಬುದರಲ್ಲಿ ಸಂಶಯವಿಲ್ಲ.

ಪುರುಷಪ್ರಯತ್ನಕ್ಕಿಂತ ಅದೃಷ್ಟವೇ ಬಲವತ್ತರವಾದುದೆಂದು[8] ಭಾಸ ಪದೇ ಪದೇ ಹೇಳಿದರೂ, ಸರಿಯಾದ ಮಾರ್ಗದಲ್ಲಿ ಆರಂಭಿಸಿದ ಉತ್ಸಾಹಶೀಲರ ಯತ್ನಗಳು ಫಲಿಸಿಯೇ ಫಲಿಸುತ್ತವೆಂದು ಸಾರುವ

ಕಾಷ್ಠಾದಗ್ನಿರ್ಜಾಯತೇ ಮಥ್ಯಮಾನಾತ್, ಭೂಮಿಸ್ತೋಯಂ ಖನ್ಯಮಾನಾ ದದಾತಿ ।
ಸೋತ್ಸಾಹಾನಾಂ ನಾಸ್ತ್ಯಸಾಧ್ಯಂ ನರಾಣಾಂ ಮಾರ್ಗಾರಬ್ಧಾಃ ಸರ್ವಯತ್ನಾಃ ಫಲಂತಿ ॥

ಎಂಬ ಅವನ ಪ್ರತಿಜ್ಞಾಯೌಗಂಧರಾಯಣದ (i 18) ಶ್ಲೋಕ ಎಂತಹ ಅದೃಷ್ಟವಾದಿಗಳನ್ನೂ ತಟ್ಟಿ ಎಬ್ಬಿಸಿ ಕಾರ್ಯೋನ್ಮುಖರಾಗುವಂತೆ ಮಾಡುತ್ತದೆ.

ಸುಭಾಷಿತಾವಳಿಯಲ್ಲಿ ಭಾಸನದೆಂದು ಹೇಳಿರುವ

[9]ದುಃಖಾರ್ತೇ ಮಯಿ ದುಃಖಿತಾ ಭವತಿ ಯಾ, ಹೃಷ್ಟೇ ಪ್ರಹೃಷ್ಟಾ ತಥಾ,
ದೀನೇ ದೈನ್ಯಮುಪೈತಿ, ರೋಷಪರುಷೇ ಪಥ್ಯಂ ವಚೋ ಭಾಷತೇ ।

---

[6] ಪಂಚರಾತ್ರ i 23 [7] ಪಂಚರಾತ್ರ iii 25

[8] ೧ ಜಾಗ್ರತೋಪಿ ಬಲವತ್ತರಃ ಕೃತಾಂತಃ—ಪ್ರತಿಜ್ಞಾ I. ೨ ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ—ಸ್ವಪ್ನ I. ೩ ಕಃ ಕಂ ಶಕ್ತೋ ರಕ್ಷಿತುಂ ಮೃತ್ಯುಕಾಲೇ ? ರಜ್ಜುಚ್ಛೇದೇ ಕೇ ಘಟಂ ಧಾರಯಂತಿ ? — ಸ್ವಪ್ನ VI 10.

[9] ಈ ಶ್ಲೋಕ ಪ್ರಾಯಃ ಸ್ವಪ್ನವಾಸವದತ್ತ ನಾಟಕದ್ದಿರಬಹುದು. ವತ್ಸರಾಜ ತನ್ನ



ಕಾಲಂ ವೇತ್ತಿ, ಕಥಾಃ ಕರೋತಿ ನಿಪುಣಾಃ, ಮತ್ಸಂಸ್ತವೇ ರಜ್ಯತಿ,
ಭಾರ್ಯಾ, ಮಂತ್ರಿವರಃ, ಸಖಾ, ಪರಿಜನಃ, ಸೈಕಾ ಬಹುತ್ವಂ ಗತಾ ॥

—ಎಂಬ ಶ್ಲೋಕ ಭಾರತೀಯ ಆದರ್ಶಪತ್ನಿಯಲ್ಲಿರಬೇಕಾದ ಮುಖ್ಯ ಲಕ್ಷಣಗಳನ್ನು ಲೋಕಕ್ಕೆ ಸಾರುವಂತಿದೆ.

ಹೆಣ್ಣುಮಕ್ಕಳಿಗಾಗಿ ವರಾನ್ವೇಷಣೆ ಮಾಡುವಾಗ ವರನಲ್ಲಿ ಯಾವ ಯಾವ ಗುಣ ಯೋಗ್ಯತೆಗಳನ್ನು ಪ್ರಧಾನವಾಗಿ ನಿರೀಕ್ಷಿಸಬೇಕೆಂಬುದನ್ನು

ಕುಲಂ ತಾವತ್+ಶ್ಲಾಘ್ಯಂ ಪ್ರಥಮಮಭಿಕಾಂಕ್ಷೇ ಹಿ ಮನಸಾ
ತತಃ ಸಾನುಕ್ರೋಶಂ, ಮೃದುರಪಿ ಗುಣೋ ಹಿ+ಏಷ ಬಲವಾನ್ ।
ತತೋ ರೂಪೇ ಕಾಂತಿಂ, ನ ಖಲು ಗುಣತಃ, ಸ್ತ್ರೀಜನಭಯಾತ್
ತತೋ ವೀರ್ಯೋದಗ್ರಂ, ನ ಹಿ ನ ಪರಿಪಾಲ್ಯಾ ಯುವತಯಃ ॥

ಎಂಬ (ಪ್ರತಿಜ್ಞಾ ii 4) ಶ್ಲೋಕದಲ್ಲಿ ಭಾಸ ವಿವರಿಸಿದ್ದಾನೆ.

ಹೀಗೆ ಭಾಸ ಬೇರೆ ಬೇರೆ ವಿಚಾರಗಳಲ್ಲಿ ತನ್ನ ಅಭಿಪ್ರಾಯಗಳನ್ನೂ ಆದರ್ಶಗಳನ್ನೂ ತನ್ನ ಒಂದೊಂದು ನಾಟಕದಲ್ಲೂ[10] ಹೃದಯಂಗಮವಾಗಿ ನಿರೂಪಿಸಿದ್ದಾನೆ.

## ಭಾಸನ ಶೈಲಿ

ಸ್ಥೂಲವಾಗಿ ನೋಡಿದಾಗ ಭಾಸನ ಶೈಲಿ ತುಂಬ ಸರಳ, ಲಲಿತ ಅನ್ನುವ ಹಾಗಿದೆಯಾದರೂ ಕೂಲಂಕಷವಾಗಿ ಪರಿಶೀಲಿಸಿದ ಮೇಲೆ ಅದು ಮೊದಲು ಎಷ್ಟೆಷ್ಟು ಲಲಿತವಾಗಿ ಕಾಣಿಸುತ್ತದೋ ಅಷ್ಟಷ್ಟು ಬಿಗಿಯಾದುದು, [11]ಸತ್ವಶಾಲಿಯಾದುದು ಎಂಬುದು ವ್ಯಕ್ತವಾಗುತ್ತದೆ. ಭಾಸನು ಅವಶ್ಯಕತೆಗಿಂತ ಒಂದು ಪದ ಕಮ್ಮಿ ಉಪಯೋಗಿಸಿಯಾನೇ ವಿನಾ ಒಂದರ್ಧ ಪದವನ್ನೂ ಹೆಚ್ಚಾಗಿ ಬಳಸುವುದಿಲ್ಲ. ಕ್ಲಿಷ್ಟವಾದ ಪದಗಳೂ ಉದ್ದುದ್ದದ ಪದಗಳೂ ಪ್ರಾಯಃ

---

ಪ್ರಿಯಪತ್ನಿ ವಾಸವದತ್ತೆಯ ಗುಣಾತಿಶಯಗಳನ್ನು ನೆನೆಸಿಕೊಂಡು ಆಡುವ ಈ ಮಾತು ಈಗ ಉಪಲಬ್ಧವಾಗಿರುವ ನಾಟಕದ ೫ನೆಯ ಅಂಕದ ೫-೬ನೆಯ ಶ್ಲೋಕಗಳಂತೆಯೇ ಇರುವುದೂ, ಅದೇ ಸಂದರ್ಭಕ್ಕೇ ಹೊಂದಿಕೊಳ್ಳುವುದೂ ಗಮನಾರ್ಹ.

[10] A.S.P. ಅಯ್ಯರ್‌ರವರ 'Bhāsa' ಪುಟ 284-294 ನೋಡಿ.

[11] ಉದಾಹರಣೆಗೆ—ಕಥಂ ಲಂಬಸಟಃ ಸಿಂಹೋ ಮೃಗೇಣ ವಿನಿಪಾತ್ಯತೇ ? ಗಜೋ ವಾ ಸುಮಹಾನ್ ಮತ್ತಃ ಶೃಗಾಲೇನ ನಿಹನ್ಯತೇ ॥ ಅಭಿಷೇಕ iii 20

ಅವನ ಕೃತಿಗಳಲ್ಲಿಲ್ಲವೆಂದೇ ಹೇಳಬಹುದು. ಆದರೆ ಕೆಲವು ಪದಗಳು ಅವನ ಕಾಲದಲ್ಲಿ ಬಳಕೆಯಲ್ಲಿದ್ದ[12] ಅರ್ಥದಲ್ಲಿ ಪ್ರಯೋಗಿಸಲ್ಪಟ್ಟದ್ದು ಈಗ ಆ ಪದಗಳಿಗೆ ಬೇರೆ ಅರ್ಥ ರೂಢಿಯಲ್ಲಿರುವ ಸಂದರ್ಭಗಳಿವೆ. ಪದಪ್ರಯೋಗದಲ್ಲಿ ಹೇಗೋ ಹಾಗೆಯೇ ಪದಸಮೂಹಗಳ ಪ್ರಯೋಗದಲ್ಲೂ ಈಚಿನವರಿಗೆ ಸಮಸ್ಯೆ ತಂದೊಡ್ಡುವ ಸಂದರ್ಭಗಳಿವೆ. ಅಂತಹ ಕಡೆಗಳಲ್ಲಿ ಅರ್ಥ ಹೇಳುವವರು ಎಡವಿದರೆ ಅದು ಭಾಸನ ತಪ್ಪಾಗಲಾರದು.

ಒಂದು ಸಲ ಬಳಸಿದ ಪದ, ಪದಸಮೂಹ, ಶ್ಲೋಕ, ಶ್ಲೋಕಭಾಗ ಮತ್ತು ವಾಕ್ಯಗಳನ್ನು [13]ಪುನಃ ಪುನಃ ಅದೇ ನಾಟಕದಲ್ಲೂ ಬೇರೆ ನಾಟಕಗಳಲ್ಲೂ ಬಳಸುವುದು ಭಾಸನ ಶೈಲಿಯ ಒಂದು ಚಾಳಿಯೆನ್ನಬಹುದು. ಅವನು ಬಳಸುವ ಅಲಂಕಾರಗಳೆಲ್ಲವೂ [14]ಸರಳವಾದವು, ಸಾಮಾನ್ಯ ಜನರು ದಿನವಹಿ ಪ್ರಯೋಗಿಸುವಂತಹವು. [15]ಶ್ಲೇಷಾರ್ಥ ಬರುವಂತೆ ಪದ ಬಳಸಿರುವ ನಿದರ್ಶನಗಳೂ ಇವೆ; ಆದರೆ ಅವು ಬಹಳ ಕಡಿಮೆ. [16]ಅನುಪ್ರಾಸ ಮತ್ತು ಯಮಕಗಳು ಅಲ್ಲಲ್ಲೇ ಬಂದು ಭಾಸನ ವಾಕ್ಯಗಳಿಗೆ ಮೆರಗು ಕೊಡುತ್ತವೆ.

ಅವನು ತನ್ನ ಪಾತ್ರಗಳಿಂದಾಡಿಸುವ ಎಷ್ಟೋ ಮಾತುಗಳು ನಿತ್ಯಸತ್ಯಗಳಿಂದ ಗರ್ಭಿತವಾಗಿದ್ದು ಸೂಕ್ತಿರತ್ನಗಳಾಗಿ ಪರಿಗಣಿತವಾಗಲು ಅರ್ಹವಾಗಿವೆ. ಅವನು ಮಧ್ಯೆ ಮಧ್ಯೆ ತರುವ ಪತಾಕಾಸ್ಥಾನಗಳಂತು ಪ್ರೇಕ್ಷಕರನ್ನೂ ವಾಚಕರನ್ನೂ ಮುಗ್ಧರನ್ನಾಗಿ ಮಾಡಿಬಿಡುತ್ತವೆ. ಅವನ ವರ್ಣನೆಗಳಲ್ಲಿ ಕೆಲವು ದೀರ್ಘವಾಗಿದ್ದರೂ ಕಣ್ಣಿಗೆ ಕಟ್ಟಿದಂತಿದ್ದು ಮನಮೋಹಕಗಳಾಗಿವೆ.

ಭಾಸನ [17]ಹಾಸ್ಯ ಎಂತಹವರನ್ನಾದರೂ ನಗುವಂತೆ ಮಾಡುತ್ತದೆ. ಎಷ್ಟೋ ಕಡೆ ಅದು ವಾಚ್ಯವಾಗಿರದೆ ಧ್ವನಿತವಾಗಿದ್ದರೂ ಎಲ್ಲರಿಗೂ ಸಾಮಾನ್ಯವಾಗಿ ಅರ್ಥವಾಗುವಂತಹುದು. ಕೆಲವು ಕವಿಗಳಿಗೆ ಸಹಜವಾಗಿಯೇ ಇರುವ ಅಶ್ಲೀಲ ಹಾಸ್ಯ ಭಾಸನಿಗೆ ಅಪರಿಚಿತ. ತಾನು ಗಂಭೀರನಾಗಿಯೇ ಆಡಿದ ಮಾತನ್ನು ಕೇಳಿದವರು ನಗುವಾಗ ಅದನ್ನು ನೋಡಿ ಅಂತರಂಕವಾಗಿ ಸಂತೃಪ್ತಿ ಪಡೆಯುವ ಮನೋವೃತ್ತಿಯುಳ್ಳವನು ಭಾಸ. ಆದ್ದರಿಂದಲೇ ಜಯದೇವ ಕವಿಯು ಭಾಸನನ್ನು [18]'ಕವಿತಾಕಾಮಿನಿಯ ಹಾಸ' ಎಂದು ಕರೆದಿದ್ದಾನೆ.

**ಪ್ರತಿಜ್ಞಾಯೌಗಂಧರಾಯಣ**—ಭಾಸನ ನಾಟಕಗಳ ಪೈಕಿ ಸ್ವಪ್ನವಾಸವದತ್ತವೇ ಅತ್ಯುತ್ತಮವಾದುದೆಂಬುದರಲ್ಲಿ ಸಂದೇಹವಿಲ್ಲ. ಆರು ಅಂಕಗಳ ಈ ನಾಟಕವು ನಾಲ್ಕು ಅಂಕಗಳ ಪ್ರತಿಜ್ಞಾಯೌಗಂಧರಾಯಣ ನಾಟಕದ ಉತ್ತರಾರ್ಧದಂತಿದೆ. ಎರಡೂ ಸೇರಿ ೧೦ ಅಂಕಗಳಾಗುವುದರಿಂದಲೂ, ಎರಡರ ಕಥೆಗಳೂ, ಪಾತ್ರಗಳು ಕೂಡ ವ್ಯತ್ಯಾಸವಿಲ್ಲದಂತೆ ಹೊಂದಿಕೊಂಡಿರುವುದರಿಂದರೂ, ಪ್ರತಿಜ್ಞಾಯೌಗಂಧರಾಯಣದ ಸ್ಥಾಪನೆಯಲ್ಲಿ 'ವಯಮಪಿ ಪ್ರಕರಣಮಾರಭಾಮಹೇ' ಎಂದು ಸೂತ್ರಧಾರ ಹೇಳುವುದರಿಂದಲೂ ಭಾಸನು ಬರೆದುದು ಒಂದು ಪ್ರಕರಣ; ಅದನ್ನು ಈಚಿನವರು ಪ್ರದರ್ಶನಕ್ಕೆ ಅಳವಡಿಸಿಕೊಳ್ಳುವಾಗ ಎರಡಾಗಿ ಒಡೆದಿರಬೇಕೆಂಬುದು ಕೆಲವರ ಅಭಿಪ್ರಾಯ. ಆದರೆ ಎರಡು ಕೃತಿಗಳಲ್ಲೂ ಇರುವ ಶೈಲಿ ಮತ್ತು ರಸಪುಷ್ಟಿಯ ಭಿನ್ನತೆಯನ್ನೂ ಸ್ವಪ್ನನಾಟಕದ ವೈಶಿಷ್ಟ್ಯವನ್ನೂ ಗಮನಿಸಿದರೆ ಭಾಸನು ಮೊದಲು ಒಂದೇ ಪ್ರಕರಣ ಬರೆಯಬೇಕೆಂದು ಆರಂಭಿಸಿ ಅದರ ಸರಣಿಯಿಂದ ತೃಪ್ತನಾಗದೆ ನಾಲ್ಕು ಅಂಕಗಳನ್ನು ಮುಗಿಸಿ ಕಾಲಾಂತರದಲ್ಲಿ ಕಥೆಯನ್ನು ಮುಂದುವರೆಸಿ ಸ್ವಪ್ನವಾಸವದತ್ತವನ್ನು ರಚಿಸಿರಬಹುದಾದ ಸಂಭವವೇ ಹೆಚ್ಚೆಂದು ತೋರುತ್ತದೆ.

---

12 ೧) ಸರ್ವಂ ಹಿ ಸೈನ್ಯಮನುರಾಗಮೃತೇ ಕಳತ್ರಂ— ಪ್ರ. ಯೌ. i 4
೨) ಮೃತೇಪಿ ಹಿ ನರಾಸ್ಸರ್ವೇ ಸತ್ಯೇ ತಿಷ್ಠಂತಿ ತಿಷ್ಠತಿ—ಪಂಚರಾತ್ರ iii 25

13 ೧) 'ವಕ್ಷಃ ಪ್ರಸಾರಯ ಕವಾಟಪುಟಪ್ರಮಾಣಂ...'-ಪ್ರತಿಮಾ iv 16; vii 7; ಪೀಠಿಕೆ ಪುಟ 7 ಅಡಿಟಿಪ್ಪಣಿ 7 ಮತ್ತು ೨ ನೋಡಿ.

14 ಉಪಮೆ, ಉತ್ಪ್ರೇಕ್ಷೆಗಳೇ ಹೆಚ್ಚು.

15 ೧) 'ವರಮುಖಂ ಪ್ರೇಕ್ಷೇ' ಮತ್ತು ಪರಕೀಯಾವಿವ ತೇ ಹಸ್ತೌ'—ಸ್ವಪ್ನ i
೨) ಅಭಿಲಷಣೀಯಾಃ ಖಲು ವರಗುಣಾಃ—ಪ್ರತಿಜ್ಞಾ ii[103]

16 ೧) ರಘುಕುಲಪ್ರದೀಪಸ್ಯ ಸರ್ವಲೋಕನಯನಾಭಿರಾಮಸ್ಯ ರಾಮಸ್ಯ, ಸುವಿಪುಲಮಹಾಗ್ರೀವಸ್ಯ ಸುಗ್ರೀವಸ್ಯ ಚ—ಅಭಿಷೇಕ—ಸ್ಥಾಪನೆ. (೨) ಸಂಪ್ರಾಪ್ತಾ ಹರಿವರಬಾಹು-ಸಂಪ್ರಗುಪ್ತಾ ಕಿಷ್ಕಿಂಧಾ ತವ ನೃಪ ಬಾಹು-ಸಂಪ್ರಗುಪ್ತಾ—ಅಭಿಷೇಕ i 7 (೩) ಶೂನ್ಯಃ ಪ್ರಾಪ್ತೋ ಯದಿ ರಥಃ ಭಗ್ನೋ ಮಮ ಮನೋರಥಃ। ನೂನಂ ದಶರಥಂ ನೇತುಂ ಕಾಲೇನ ಪ್ರೇಷಿತೋ ರಥಃ॥ ಪ್ರತಿಮಾ ii 11.



17 ಪ್ರತಿಜ್ಞಾ iii ಮತ್ತು iv; ಸ್ವಪ್ನ v; ಪ್ರತಿಮಾ iii ಪ್ರವೇಶಕ ನೋಡಿ.

18 ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋ ಮಯೂರಃ
ಭಾಸೋ ಹಾಸಃ ಕವಿಕುಲಗುರುಃ ಕಾಳಿದಾಸೋ ವಿಲಾಸಃ।
ಹರ್ಷೋ ಹರ್ಷಃ ಹೃದಯವಸತಿಃ ಪಂಚಬಾಣಃ ಸ ಬಾಣಃ
ಕೇಷಾಂ ನೈಷಾ ಕಥಯ ಕವಿತಾಕಾಮಿನೀ ಕೌತುಕಾಯ॥—ಪ್ರಸನ್ನರಾಘವ ೧

ಈ ಎರಡು ನಾಟಕಗಳೂ ಉದಯನನ ಚರಿತ್ರೆಯನ್ನೇ ಆಶ್ರಯಿಸಿ ರಚಿತವಾದುವು. ಉಜ್ಜಯಿನಿಯ ರಾಜನಾದ ಮಹಾಸೇನ ಪ್ರದ್ಯೋತನಿಂದ ವತ್ಸರಾಜನಾದ ಉದಯನನು ಬಂಧಿತನಾಗಿದ್ದಾಗ, ಆತನ ಮಂತ್ರಿ ಯೌಗಂಧರಾಯಣನು ತುಂಬ ಕೌಶಲದಿಂದ ತನ್ನ ಸ್ವಾಮಿಯ ವಿಮೋಚನೆಯನ್ನು ಸಾಧಿಸಿದುದಲ್ಲದೆ, ಅವನು ತನ್ನಲ್ಲಿ ಅನುರಕ್ತಳಾಗಿದ್ದ ಪ್ರದ್ಯೋತನ ಕುಮಾರಿ ವಾಸವದತ್ತೆಯನ್ನು ತನ್ನೊಡನೆಯೇ ಅಪಹರಿಸಿಕೊಂಡು ಹೋಗುವಂತೆಯೂ ಏರ್ಪಡಿಸಿದ ಕಥೆಯ ನಾಟಕರೂಪವೇ ಪ್ರತಿಜ್ಞಾಯೌಗಂಧರಾಯಣ. ಈ ನಾಟಕದಲ್ಲಿ ಉದಯನನಾಗಲಿ ವಾಸವದತ್ತೆಯಾಗಲಿ ಪ್ರೇಕ್ಷಕರ ಮುಂದೆ ಬರುವುದೇ ಇಲ್ಲ. ಉದಯನನ ಮಂತ್ರಿಯಾದ ಯೌಗಂಧರಾಯಣನ ಧೈರ್ಯ, ಶೌರ್ಯ, ತಂತ್ರ, ಪ್ರತಿಜ್ಞಾಪಾಲನಗಳಿಗೇ ಇಲ್ಲಿ ಪ್ರಾಧಾನ್ಯವಿರುವುದರಿಂದ ಈ ನಾಟಕದ ಹೆಸರೂ ಅನ್ವರ್ಥವಾಗಿದೆ. ಭಾಮಹನು (ಈ ನಾಟಕದ ಹೆಸರನ್ನು ಹೇಳದೆ) ಇದರ ವಸ್ತುವನ್ನು 'ನ್ಯಾಯವಿರುದ್ಧ'ವೆಂದು ಖಂಡಿಸಿದ್ದಾನೆ.

**ಸ್ವಪ್ನವಾಸವದತ್ತ**—ಪ್ರತಿಜ್ಞಾಯೌಗಂಧರಾಯಣದಲ್ಲಿ ನಿಂತಿದ್ದ ಉದಯನನ ಕಥೆ ಈ ನಾಟಕದಲ್ಲಿ ಮುಂದುವರಿಯುತ್ತದೆ. ಇಲ್ಲಿ ಉದಯನನಿಗಿಂತ ವಾಸವದತ್ತೆಗೇ ಪ್ರಾಧಾನ್ಯ. ಉದಯನನ ಹಿತದೃಷ್ಟಿಯಿಂದ, ಅವನ ಶ್ರೇಯಸ್ಸಿಗಾಗಿ, ಅವನ ಮಂತ್ರಿಯು ಲಾವಣಕದ ಬೆಂಕಿಯ ಅನಾಹುತದಲ್ಲಿ ವಾಸವದತ್ತೆಯು ದಗ್ಧಳಾದಂತೆ ವದಂತಿ ಹಬ್ಬಿಸಿ ಅವನಿಗೂ ಮಗಧ ರಾಜಕುಮಾರಿ ಪದ್ಮಾವತಿಗೂ ಮದುವೆ ಮಾಡಿಸುತ್ತಾನೆ. ಅಲ್ಲೂ ಉದಯನನಾಗಲಿ ಪದ್ಮಾವತಿಯಾಗಲಿ ನಮ್ಮನ್ನು ಅಷ್ಟಾಗಿ ಆಕರ್ಷಿಸುವುದಿಲ್ಲ. ವಾಸವದತ್ತೆ ಎಲ್ಲೋ ಇದ್ದು ಏನೋ ಮಾಡುತ್ತಿದ್ದರೂ ಕಥಾಸಂವಿಧಾನವೆಲ್ಲ ಅವಳ ಪಾತ್ರದ ಸುತ್ತಲೂ ಬೆಳೆದು ನಿಲ್ಲುತ್ತದೆ. ಅಲ್ಲಿಂದ ಮುಂದಕ್ಕಂತು ವಾಸವದತ್ತೆಯನ್ನು ಉದಯನನು ನಿದ್ದೆಯಲ್ಲಿ ಕನವರಿಸಿದುದು, ಕಂಡುದು, ಅದರ ಹಿನ್ನೆಲೆ ಮತ್ತು ಪರಿಣಾಮಗಳು ಸೊಗಸಾಗಿ ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗುತ್ತವೆ. ಆದ್ದರಿಂದಲೇ ನಾಟಕಕ್ಕೆ 'ಸ್ವಪ್ನವಾಸವದತ್ತ'ವೆಂಬ ಹೆಸರಿನ ಔಚಿತ್ಯ.

ಪ್ರತಿಜ್ಞಾಯೌಗಂಧರಾಯಣವೂ ಸ್ವಪ್ನವಾಸವದತ್ತವೂ ಬೃಹತ್ಕಥೆಯ ಆಧಾರದಮೇಲೆ ರಚಿತವಾದುವೆಂದು ಹಿಂದೆಯೇ ಹೇಳಲಾಗಿದೆ. ಆದರೆ ಮೂಲಕಥೆಗೂ ಈ ನಾಟಕಗಳ ಕಥೆಗೂ ತುಂಬ ಅಂತರವಿದೆ. ಇವು ರಸಘಟ್ಟಿಗಳು; ಕವಿಕಲ್ಪಿತವಾದ ಸ್ವಾರಸ್ಯಪೂರ್ಣ ಸನ್ನಿವೇಶಗಳಿಂದಲೂ ಸಂವಿಧಾನ ಕೌಶಲದಿಂದಲೂ ಕೂಡಿ ಅತ್ಯುತ್ತಮ ಕೃತಿಗಳೆನ್ನಿಸಿವೆ.



**ಅವಿಮಾರಕ**—ಬೃಹತ್ಕಥೆಯ ಆಧಾರದ ಮೇಲೆಯೇ ರಚಿತವಾದುದು ಭಾಸನ ಅವಿಮಾರಕವೂ. ಇದನ್ನು ಭಾಸನು ಮೊದಮೊದಲು ಬರೆದನೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಇದರ ಮೊದಲನೆಯ ಅಂಕದಲ್ಲಿ ಕುಂತಿಭೋಜನು ವರಾನ್ವೇಷಣದಲ್ಲಿ ಮಗ್ನನಾಗಿರುವುದು ಪ್ರತಿಜ್ಞಾಯೌಗಂಧರಾಯಣದ ಎರಡನೆಯ ಅಂಕದಲ್ಲಿ ಮಹಾಸೇನನು ತನ್ನ ಮಗಳಾದ ವಾಸವದತ್ತೆಗೆ ವರನನ್ನು ಹೊಂದಿಸುವುದಕ್ಕಾಗಿ ಚಿಂತಿಸುವುದನ್ನು ನೆನಪಿಗೆ ತರುತ್ತದೆ. ಆದರೆ ಅವಿಮಾರಕದಲ್ಲಿ ಈ ಸಾಂಸಾರಿಕ ಕಥಾವಸ್ತುವೂ ಕೂಡ ಪೌರಾಣಿಕ ಹೊರಕಟ್ಟನೊಳಗೆ ಬೆಳೆದು ಫಲಿಸುವುದೂ ಅಮಾನುಷವೂ ಅಸಾಧಾರಣವೂ ಆದ ಅಶ್ರದ್ಧೆಯ ಸಾಧನಗಳನ್ನು ಬಳಸಿರುವುದೂ ನಾಟಕಕ್ಕೆ ಅವಾಸ್ತವಿಕತೆಯನ್ನುಂಟುಮಾಡುತ್ತದೆ. ಏಳು ಅಂಕಗಳುಳ್ಳ ಈ ನಾಟಕದ ಕಥೆಯನ್ನು ಹೀಗೆ ಸಂಗ್ರಹಿಸಬಹುದು.

ರಾಜಾ ಕುಂತಿಭೋಜನು ತನ್ನ ಮಗಳಾದ ಕುರಂಗಿಯನ್ನು ವಿಷ್ಣುಸೇನನೆಂಬ ರಾಜಕುಮಾರನಿಗೆ ಕೊಡಬೇಕೆಂದಿರುವಾಗ, ಆ ರಾಜಕುಮಾರನು ಶಾಪಗ್ರಸ್ತನಾಗಿ ಚಂಡಾಲತ್ವ ಹೊಂದಿ ಅದೃಶ್ಯನಾಗಿಬಿಡುತ್ತಾನೆ. ಒಂದು ದಿನ ಕುರಂಗಿಯು ಕಾಡಿನಲ್ಲಿ ಮದದಾನೆಗೆ ಸಿಕ್ಕಿಬೀಳಲು ಈ ಚಂಡಾಲರೂಪಿ ವಿಷ್ಣುಸೇನನು ಅವಳನ್ನು ಬಿಡಿಸುತ್ತಾನೆ. ಆ ಬಳಿಕ ಅವರಿಬ್ಬರಿಗೂ ಪ್ರೇಮ ಬೆಳೆಯುತ್ತದೆ. ರಾಜಕುಮಾರಿಯ ಚೇಟಿಯ ಸಹಾಯದಿಂದ ವಿಷ್ಣುಸೇನನು ಅಂತಃಪುರದಲ್ಲಿ ತನ್ನ ಪ್ರೇಯಸಿಯೊಡನೆ ಸೇರಿಕೊಳ್ಳುತ್ತಾನೆ. (ವಿಷ್ಣುಸೇನನು ಬಾಲ್ಯದಲ್ಲೇ 'ಅವಿ'ಯೆಂಬ ರಾಕ್ಷಸನನ್ನು ಸಂಹರಿಸಿದ್ದುದರಿಂದ '**ಅವಿಮಾರಕ**'ನೆಂದೇ ಕರೆಯಲ್ಪಡುತ್ತಿದ್ದನು.) ಚಂಡಾಲನೊಬ್ಬನು ಅಂತಃಪುರದಲ್ಲಿ ಸೇರಿದ್ದುದು ರಾಜನಿಗೆ ತಿಳಿದು ಅವನನ್ನು ಹಿಡಿಸಬೇಕೆನ್ನಿಸುವುದರೊಳಗೆ ಅವನು ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸುತ್ತಾನೆ. ಅಷ್ಟರಲ್ಲಿ ವಿದ್ಯಾಧರನೊಬ್ಬನು ಅವನಲ್ಲಿ ಕರುಣೆಯಿಟ್ಟು ಅವನಿಗೆ ಅದೃಶ್ಯನಾಗುವ ಉಂಗುರವನ್ನು ಕೊಡುತ್ತಾನೆ. ಅದರ ಸಹಾಯದಿಂದ ಅವಿಮಾರಕನು ಪುನಃ ಕುರಂಗಿಯೊಡನೆ ಸೇರಿಕೊಳ್ಳುತ್ತಾನೆ. ಆದರೆ ಕುಂತಿಭೋಜನಿಗೆ ಇದೊಂದೂ ತಿಳಿಯದೆ ಜಯವರ್ಮನೆಂಬ ಬೇರೊಬ್ಬನಿಗೆ ಕುರಂಗಿಯನ್ನು ಕೊಟ್ಟು ಮದುವೆಮಾಡಲೇರ್ಪಡಿಸುತ್ತಾನೆ. ಆಗ ನಾರದರು ಬಂದು ನಿಜಸ್ಥಿತಿಯನ್ನು ವಿವರಿಸಿ ಅವಿಮಾರಕನೊಡನೆ ಕುರಂಗಿಯ ವಿವಾಹವು ನಡೆಯುವಂತೆ ಮಾಡುತ್ತಾರೆ. ಅದೇ ಸಂದರ್ಭದಲ್ಲೇ ಜಯವರ್ಮನಿಗೂ ಕುರಂಗಿಯ ತಂಗಿ ಸುಮಿತ್ರೆಗೂ ಮದುವೆಯಾಗುತ್ತದೆ.

ಕಥೆ ಕಟ್ಟುಕಥೆಯಂತಿದೆ. ವಸ್ತುರಚನೆಯಲ್ಲಿ ವೈಶಿಷ್ಟ್ಯವಾಗಲಿ ಸಂವಿಧಾನದಲ್ಲಿ ಕೌಶಲವಾಗಲಿ, ಸನ್ನಿವೇಶಗಳಲ್ಲಿ ರಸಪರಿಪೋಷವಾಗಲಿ ಇಲ್ಲ. ಭಾಸನ ಈ ನಾಟಕಕ್ಕೂ ಇತರ ನಾಟಕಗಳಿಗೂ ಅಜಗಜಾಂತರ.

**ಯಜ್ಞಫಲ**—ಭಾಸರಚಿತ ರಾಮಕಥಾ ನಾಟಕಗಳು ಮೂರು—ಯಜ್ಞಫಲ, ಪ್ರತಿಮಾ ನಾಟಕ, ಅಭಿಷೇಕ ನಾಟಕ. ಪ್ರತಿಮಾ ನಾಟಕದಲ್ಲಿ ಅಯೋಧ್ಯಾ ಮತ್ತು ಅರಣ್ಯ ಕಾಂಡಗಳ ಕಥೆಯೂ ಅಭಿಷೇಕ ನಾಟಕದಲ್ಲಿ ಕಿಷ್ಕಿಂಧಾ, ಸುಂದರ ಮತ್ತು ಯುದ್ಧಕಾಂಡಗಳ ಕಥೆಯೂ ಪ್ರಧಾನವಾಗಿ ಪ್ರತಿಪಾದಿತವಾಗಿರುವುದರಿಂದ ಬಾಲಕಾಂಡದ ಕಥೆಯನ್ನು ಚಿತ್ರಿಸುವ ಭಾಸ ರಚಿತ ನಾಟಕವೊಂದಿದ್ದೇ ಇರಬೇಕೆಂದು ಅನೇಕರು ನಿರೀಕ್ಷಿಸಿದ್ದರು. ಆ ನಾಟಕವೇ ಯಜ್ಞಫಲವೆಂದು ಅದು ಪ್ರಕಟಿತವಾದಮೇಲೆ ಹೇಳಲಾಗುತ್ತಿದೆ ಹಿಂದೆಯೇ ಹೇಳಿರುವಂತೆ (ಪುಟ ೧೬೨) ರಾಮಾದಿಗಳ ಜನನ ದಶರಥನು ಆಚರಿಸಿದ ಪುತ್ರಕಾಮೇಷ್ಟಿಯಾಗದ ಫಲ; ರಾಮನ ಅಸ್ತ್ರಸಂಪಾದನೆ ವಿಶ್ವಾಮಿತ್ರನ ಯಾಗದ ಸಂರಕ್ಷಣೆಯ ಫಲ; ರಾಮಾದಿಗಳ ವಿವಾಹ ಜನಕನು ಮಾಡಿದ ಯಜ್ಞದ ಫಲ. ಇಷ್ಟೇ ಅಲ್ಲದೆ 'ಯಜ್ಞಫಲ' ಎಂಬ ಹೆಸರು ನಾಟಕದ ಉದ್ದಕ್ಕೂ ಪುನಃ ಪುನಃ ಕೇಳಿಬರುತ್ತದೆ. ಹೀಗೆ ಈ ನಾಟಕದ ಹೆಸರು ಅನ್ವರ್ಥವಾಗಿದೆ.

ಯಜ್ಞಫಲ ಏಳು ಅಂಕಗಳ ನಾಟಕ. ಇದರಲ್ಲಿ ೩೯೧ ಪದ್ಯಗಳಿವೆ. ಭಾಸನ ನಾಟಕಗಳಲ್ಲೆಲ್ಲ ಈ ನಾಟಕದಲ್ಲಿರುವ ಪದ್ಯಸಂಖ್ಯೆಯೇ ಅತ್ಯಂತ ಹೆಚ್ಚು. ಇದರ ಆರನೆಯ ಅಂಕವು ಭಾಸರಚಿತವೆಂದು ಹೇಳುವುದಕ್ಕಾಗುವುದಿಲ್ಲ. ಅದು ಶಾಕುಂತಲ ನಾಟಕದ ಅನುಕರಣದಂತಿದೆ. ಅಷ್ಟೇ ಅಲ್ಲ; ಅದರಲ್ಲಿ ಚಿತ್ರಿತವಾಗಿರುವ ಶೃಂಗಾರ ದಶಕುಮಾರಚರಿತದಲ್ಲಿ ಬರುವ ಶೃಂಗಾರದ ಮಟ್ಟದ್ದು. ಈ ನಾಟಕದ ಕೊನೆಯ ಅಂಕದ ಪರಿಸಮಾಪ್ತಿವಾಕ್ಯ 'ಇತಿ ನಿರ್ವಹಣಾಂಕಃ ಷಷ್ಠಃ' ಎಂದಿರುವುದನ್ನು ಗಮನಿಸಿದರೆ ಇದು ಆರೇ ಅಂಕಗಳ ನಾಟಕ; ನಾಟಕದ ಪ್ರತಿಗಳನ್ನು ಬರೆದಿಡುವವರು ಯಾರೋ ಐದನೆಯ ಅಂಕದ ಅನಂತರ ಈಗಿರುವ ಆರನೆಯ ಅಂಕವನ್ನು ಸೇರಿಸಿ ಕೊನೆಯ ಅಂಕ ಏಳನೆಯದೆಂದು ಬರೆಯಲು ಮರೆತಿರಬೇಕೆಂದು ತೋರುವುದು ಸಹಜ.

**ಪ್ರತಿಮಾ ನಾಟಕ**—ಭಾಸನ ರಾಮಕಥಾನಾಟಕಗಳಲ್ಲಿ ಪ್ರತಿಮಾ ನಾಟಕವೇ ಅತ್ಯುತ್ತಮವಾದುದು. ಇದೂ ಏಳು ಅಂಕಗಳ ನಾಟಕ. ನಾಟಕ



ದುದ್ದಕ್ಕೂ ಕಥೆಯಲ್ಲಿ ಕವಿಕಲ್ಪಿತಾಂಶವೇ ಹೆಚ್ಚು. ರಾಮಕಥೆಯಲ್ಲಿನ ಮುಖ್ಯ ಘಟನೆಗಳನ್ನು ಮಾತ್ರ ಉಳಿಸಿಕೊಂಡು ಇತರ ವಿವರಗಳನ್ನೂ ಸನ್ನಿವೇಶಗಳನ್ನೂ ಭಾಸನು ತನ್ನ ಆದರ್ಶಕ್ಕನುಗುಣವಾಗಿ ರೂಪಿಸಿಕೊಂಡಿದ್ದಾನೆ. ಒಂದೊಂದು ಅಂಕದಲ್ಲೂ ಒಂದೊಂದು ವೈಶಿಷ್ಟ್ಯವಿದೆ, ರಮಣೀಯತೆಯಿದೆ. ಸೀತೆಯು ಸ್ತ್ರೀಸಹಜ ಕುತೂಹಲದಿಂದ ವಲ್ಕಲವುಟ್ಟುಕೊಂಡಿದ್ದಾಗ, ರಾಮ ಅಲ್ಲಿಗೆ ಬಂದು ಅವಳು ಆಭರಣಗಳನ್ನು ಧರಿಸುವುದಕ್ಕಾಗಿ ಅವಳ ಮುಂದೆ ಕನ್ನಡಿ ಹಿಡಿದು ತೋರುವಾಗ, ಅವಳು ನಾರುಮಡಿಯುಟ್ಟಿರುವುದನ್ನು ಕನ್ನಡಿಯಲ್ಲಿ ಕಂಡು ಚಕಿತನಾಗುವ ಸುಂದರ ಸನ್ನಿವೇಶ ಮೊದಲನೆಯ ಅಂಕದಲ್ಲಿದೆ. ಎರಡನೆಯ ಅಂಕದಲ್ಲಿ ಬರುವ ದಶರಥ-ಸುಮಂತ್ರರ ಸಂಭಾಷಣೆಯಲ್ಲೂ ಪಾದಚಾರಿಗಳಾಗಿ ಅರಣ್ಯದಲ್ಲಿ ಸಂಚರಿಸುತ್ತಿರುವ ರಾಮ-ಲಕ್ಷ್ಮಣರ ಮಧ್ಯೆ ಸೀತೆಯಿರುವಂತೆ ಅವರ ನಾಮನಿರ್ದೇಶ ಸಕ್ರಮವಾಗಿಯೇ ಇರಬೇಕೆಂಬ ದಶರಥನ ಒತ್ತಾಯ ಮರೆಯಲಾಗದಂತಹುದು. ಮೂರನೆಯ ಅಂಕದ ಪ್ರತಿಮಾಗೃಹ, ಅಲ್ಲಿನ ಇಕ್ಷ್ವಾಕುರಾಜರ ನಾಲ್ಕು ಪ್ರತಿಮೆಗಳ ಸ್ತೋಮ, ದಶರಥನ ಪ್ರತಿಮೆಯ ಹೆಸರನ್ನು ಕೇಳಲು ಭರತ ಹಿಂಜರಿಯುವುದು, ಆಗ ಮೊದಲು ಸ್ವಲ್ಪ ಸ್ವಲ್ಪವಾಗಿ, ಸ್ಪಷ್ಟಾಸ್ಪಷ್ಟವಾಗಿ, ಬಳಿಕ ವಿವರವಾಗಿ, ಭರತನು ದಶರಥನ ಮರಣ ಮತ್ತು ರಾಮಾದಿಗಳ ವನಗಮನ ವೃತ್ತಾಂತವನ್ನರಿಯುವ ಕ್ರಮ, ಭರತ ಕೈಕೆಯೊಡನಾಡುವ ಬಿರುಸು ಮಾತು, ಪ್ರತಿಮಾಗೃಹದಿಂದಲೇ ನೆಟ್ಟಗೆ ಅರಣ್ಯಕ್ಕೆ ಭರತ ತೆರಳುವುದು—ಈ ಒಂದೊಂದು ಪ್ರಸಂಗವೂ ಓದುಗರ ಮೇಲೆ ಬೀರುವ ಪ್ರಭಾವದ ಪ್ರಮಾಣವನ್ನು ಇಷ್ಟೇ ಎಂದು ಅಳೆದು ಹೇಳುವುದಕ್ಕಾಗುವುದಿಲ್ಲ. ನಾಲ್ಕನೆಯ ಅಂಕದಲ್ಲಿ ರಾಮನ ಮಾತಿಗೆ ಭರತನು ಸುಮಂತ್ರನನ್ನೂ ಲಕ್ಷ್ಮಣನನ್ನೂ ಸೀತೆಯನ್ನೂ ಸಾಕ್ಷಿಯಾಗಿ ಕೋರುವುದು ಎಷ್ಟು ಹೃದಯಂಗಮ! ಐದನೆಯ ಅಂಕದಲ್ಲಿ ಸೀತಾಪಹರಣದ ವಿನೂತನ ಸನ್ನಿವೇಶದ ಔಚಿತ್ಯವೂ ಅದರ ಚಿತ್ರಣದಲ್ಲಿ ಕಂಡುಬರುವ ವಾಸ್ತವಿಕತೆಯೂ ಯಾರನ್ನು ತಾನೇ ಮಂತ್ರಮುಗ್ಧರನ್ನಾಗಿ ಮಾಡುವುದಿಲ್ಲ! ಆರನೆಯ ಅಂಕದಲ್ಲಿ ಕೈಕೆ ತನ್ನ ಹಿಂದಿನ ನಡವಳಿಕೆಗೆ ವಿವರಣೆಯಿತ್ತು ದಶರಥನ ಮರಣಕ್ಕಾಗಲಿ ರಾಮನ ವನಗಮನಕ್ಕಾಗಲಿ ತಾನು ಹೊಣೆಯಲ್ಲವೆಂಬುದನ್ನು ಸಮರ್ಥಿಸಿರುವುದು ಎಷ್ಟು ಅಪೂರ್ವವೂ ಸರಿಯುಕಲ್ಪಿತವೂ ಆಗಿದೆಯೋ ಅಷ್ಟೇ ಪ್ರೇಕ್ಷಕರ ಮೇಲೆ ಪರಿಣಾಮಕಾರಿಯೂ ಆಗಿದೆ. ಕೊನೆಯದಾದ ಏಳನೆಯ ಅಂಕದಲ್ಲಿ ರಾಮನ ಸಹಾಯಕ್ಕಾಗಿ ಸೈನ್ಯದೊಡನೆ ಲಂಕಾಭಿಮುಖವಾಗಿ ಪ್ರಯಾಣ ಮಾಡುತ್ತಿದ್ದ

ಭರತನು ಸೀತಾಸಹಿತನಾದ ರಾಮನನ್ನು ಜನಸ್ಥಾನದಲ್ಲೇ ಸಂಧಿಸಿ, ರಾಮನ ಪಟ್ಟಾಭಿಷೇಕವೂ ಅಲ್ಲೇ ಆಗುವುದು ಭಾಸನ ಪ್ರತಿಭೆಗೆ ಅಚ್ಚಳಿಯದ ನಿದರ್ಶನ. ಹೀಗೆ ಒಂದರ ಮೇಲೊಂದು ಸುಂದರ ಸನ್ನಿವೇಶ ನಾಟಕದ ತುಂಬ ತುಂಬಿದೆ. ಇವುಗಳಲ್ಲಿ ಯಾವುದು ಮುಖ್ಯ, ಯಾವುದು ಉತ್ತಮ ಎಂದು ವಿವೇಚಿಸುವುದರಲ್ಲಿ ಪ್ರಯೋಜನವಿಲ್ಲ. ನಾಟಕ ಮುಗಿದ ಮೇಲೂ 'ಪ್ರತಿಮಾಗೃಹ'ದ ದೃಶ್ಯ ಮಾತ್ರ ಇತರ ಎಲ್ಲ ದೃಶ್ಯಗಳಿಗಿಂತ ಹೆಚ್ಚಾಗಿ ನಮ್ಮ ಮನಸ್ಸಿನ ಮೇಲೆ ಪರಿಣಾಮಕಾರಿ ಪ್ರಭಾವ ಬೀರುತ್ತದೆಯೆಂಬುದನ್ನು ನೆನಪಿನಲ್ಲಿಟ್ಟರೆ ಸಾಕು, 'ಪ್ರತಿಮಾ' ಎಂಬ ಈ ನಾಟಕದ ಹೆಸರಿನ ಔಚಿತ್ಯ ತಾನೇತಾನಾಗಿ ಸಿದ್ಧವಾಗಿಬಿಡುತ್ತದೆ.

**ಅಭಿಷೇಕನಾಟಕ** — ಆರು ಅಂಕಗಳುಳ್ಳ ಅಭಿಷೇಕನಾಟಕದ ಕಥಾವಸ್ತು ರಾಮಾಯಣದ ಕಿಷ್ಕಿಂಧಾ ಸುಂದರ ಮತ್ತು ಯುದ್ಧಕಾಂಡಗಳಿಗೆ ಸೇರಿದುದು. ಈ ನಾಟಕದಲ್ಲಿ ಮೂಲದ ಕಥೆಗೇ ಪ್ರಾಧಾನ್ಯ. ಕಲ್ಪಿತಭಾಗ ಕಮ್ಮಿ. ಆದರೂ ಕವಿಯ ಪ್ರತಿಭೆ ಅಲ್ಲಲ್ಲೇ ಹೊರಹೊಮ್ಮಿ ಪ್ರಸ್ಫುಟವಾಗಿ ಪ್ರಕಾಶಿಸುತ್ತದೆ.

ಸುಗ್ರೀವ, ವಿಭೀಷಣ, ರಾಮ— ಈ ಮೂವರ ಅಭಿಷೇಕ ನಡೆದ ಸನ್ನಿವೇಶಚಿತ್ರಣವೇ ಈ ನಾಟಕದ ಕಥಾವಸ್ತು. ಆದ್ದರಿಂದಲೇ ಈ ನಾಟಕಕ್ಕೆ ಅಭಿಷೇಕ ಎಂಬ ಹೆಸರು ಉಚಿತ ಎಂದು ಸ್ಥೂಲವಾಗಿ ಹೇಳಿಬಿಡಬಹುದಾದರೂ, ಇಲ್ಲಿ ಗಮನಿಸಬೇಕಾದ ಇನ್ನೂ ಒಂದು ಅಂಶವಿದೆ. ಈ ಮೂರು ಅಭಿಷೇಕಗಳ ಚಿತ್ರಣದಲ್ಲೂ ಒಂದು ವೈಶಿಷ್ಟ್ಯವಿದೆ. ಯಾರೊಬ್ಬರ ಅಭಿಷೇಕವೂ ರಂಗಮಂಚದ ಮೇಲೆ ಪ್ರದರ್ಶಿಸಲ್ಪಡುವುದಿಲ್ಲ. ಸುಗ್ರೀವನ ಅಭಿಷೇಕ ಮೊದಲನೆಯ ಅಂಕದಲ್ಲಿ ರಾಮನು ಲಕ್ಷ್ಮಣನಿಗೆ ಹೇಳುವ 'ಸುಗ್ರೀವಸ್ಯಾಭಿಷೇಕಃ ಕಲ್ಪ್ಯತಾಂ' ಎಂಬ ಮಾತಿನಿಂದಲೂ, ವಿಭೀಷಣನ ಅಭಿಷೇಕ ಆರನೆಯ ಅಂಕದ ಆದಿಯಲ್ಲಿ ರಾಮನೇ ಹೇಳುವ 'ಕೃತ್ವಾ ಚಾಪಿ ವಿಭೀಷಣಂ ಶುಭಮತಿಂ ಲಂಕೇಶ್ವರಂ ಸಾಂಪ್ರತಂ' ಎಂಬ ಮಾತಿನಿಂದಲೂ, ಕೇವಲ ಸೂಚಿತವಾಗುತ್ತದೆ. ಮೊದಲನೆಯ ಅಂಕದ ಕಥೆಯಾದ ವಾಲಿವಧಪ್ರಕರಣ ಸುಗ್ರೀವಾಭಿಷೇಕಕ್ಕೆ ಕಾರಣವಾದರೆ ಎರಡು, ಮೂರು, ನಾಲ್ಕು, ಐದನೆಯ ಅಂಕಗಳ ಕಥೆಯೂ ವಿಭೀಷಣನು ರಾವಣನನ್ನು ತ್ಯಜಿಸಿ ರಾಮನನ್ನಾಶ್ರಯಿಸಿದ



ಮೇಲೆ ನಡೆದ ರಾವಣವಧವೂ ಲಂಕಾರಾಜ್ಯದಲ್ಲಿ ವಿಭೀಷಣನ ಅಭಿಷೇಕಕ್ಕೆ ಕಾರಣವಾಗುತ್ತವೆ. ಸುಗ್ರೀವಸಖ್ಯದಿಂದ ರಾವಣವಧೆವರೆಗಿನ ಎಲ್ಲ ಪ್ರಕರಣಗಳೂ ಸೀತೆಯ ವಿಮೋಚನೆಗೆ ಕಾರಣವಾದರೂ ರಾಮ ಅವಳನ್ನಂಗೀಕರಿಸದೆ ಹೋದುದರಿಂದ ಅವಳು ಅಗ್ನಿಪ್ರವೇಶಮಾಡುವ ಪ್ರಸಂಗ ಒದಗಿ, ಅಗ್ನಿಯೇ ಸಾಕ್ಷಾತ್ತಾಗಿ ಸೀತೆಯನ್ನೆತ್ತಿಕೊಂಡು ಬಂದು ಅವಳ ಪಾವನತ್ವವನ್ನು ಎಲ್ಲರಿಗೂ ತಿಳಿಸಿ ರಾಮನಿಗೆ ಅವಳನ್ನು ಒಪ್ಪಿಸಬೇಕಾಗಿ ಬರುತ್ತದೆ. ಹೀಗೆ ಒಂದುಗೂಡಿದ ಸೀತಾರಾಮರಿಗೆ ಅಗ್ನಿಯೇ, ಸಮುದ್ರತೀರದಲ್ಲೇ, ಸ್ವರ್ಗಲೋಕದಿಂದಲ್ಲಿಗೆ ಇಳಿದು ಬಂದಿದ್ದ ದಶರಥನ ಸಮ್ಮುಖದಲ್ಲಿ, ಪಟ್ಟಾಭಿಷೇಕ ನೆರವೇರಿಸಿದುದೂ, (ಯುದ್ಧದಲ್ಲಿ ರಾಮನ ಸಹಾಯಕ್ಕೆಂದು) ಪ್ರಜೆಗಳೊಡನೆ ಭರತ ಅದೇ ಸಮಯಕ್ಕೆ ಅಲ್ಲಿಗೆ ಬಂದುದೂ ಅನಿರೀಕ್ಷಿತವಾದರೂ ಸಮುಚಿತ. ಈ ರಾಮಾಭಿಷೇಕಕ್ಕೆ ಹಿನ್ನೆಲೆ ಸುಗ್ರೀವ-ವಿಭೀಷಣರ ಅಭಿಷೇಕಗಳ ಫಲವಾದ ಸಹಕಾರ. ಆದ್ದರಿಂದಲೇ ಈ ನಾಟಕಕ್ಕೆ 'ರಾಮಾಭಿಷೇಕ' ಎಂಬ ಹೆಸರಿಗಿಂತ 'ಅಭಿಷೇಕ' ಎಂಬ ಸಂಗ್ರಹವಾದ, ಆದರೆ ವ್ಯಾಪಕವಾದ, ಹೆಸರೇ ಸಮಂಜಸವೆಂದು ಕವಿಗೂ ತೋರಿರಬೇಕು.

ರಾಮ ಪ್ರಚ್ಛನ್ನನಾಗಿದ್ದು ವಾಲಿಯ ಸಂಹಾರಮಾಡಿದುದನ್ನು ಭಾಸನು ಇಲ್ಲಿ ತನ್ನದೇ ಆದ ರೀತಿಯಲ್ಲಿ ಸಮರ್ಥಿಸುತ್ತಾನೆ. ವಾಲಿ ಮೃಗಜಾತಿಗೆ ಸೇರಿದವನು. ಮೃಗಗಳನ್ನು ಬಲೆ ಬೀಸಿ ಹಿಡಿಯುವುದೂ, ಮರೆಯಾಗಿ ನಿಂತು ಹೊಡೆಯುವುದೂ ಅಧರ್ಮವಲ್ಲ. ಅಲ್ಲದೆ ವಾಲಿ ತನ್ನ ತಮ್ಮನ ಹೆಂಡತಿಯನ್ನು ಪರಿಗ್ರಹಿಸಿದ್ದುದು ಅಧರ್ಮ. ಅದಕ್ಕೆ ವಧೆಯೇ ಶಿಕ್ಷೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಅಣ್ಣನ ಹೆಂಡತಿಯನ್ನು ತಮ್ಮನು ಪರಿಗ್ರಹಿಸಬಹುದಾದರೂ ತಮ್ಮನ ಹೆಂಡತಿಯನ್ನು ಅಣ್ಣನೆಂದಿಗೂ ಪರಿಗ್ರಹಿಸಕೂಡದು,—ಎಂದು ರಾಮನ ಬಾಯಲ್ಲೇ ಆಡಿಸಿ, ವಾಲಿಗೂ ಈ ಸಮರ್ಥನೆಯಿಂದ ಸಮಾಧಾನವಾದಂತೆ ಭಾಸ ಚಿತ್ರಿಸಿದ್ದಾನೆ.

**ಪಂಚರಾತ್ರ**—ಮಹಾಭಾರತದಲ್ಲಿ ವರ್ಣಿತವಾಗಿರುವ ಗೋಗ್ರಹಣ, ಅಭಿಮನ್ಯು ಉತ್ತರೆಯರ ವಿವಾಹ— ಈ ಎರಡು ಪ್ರಸಂಗಗಳೇ ಮೂರು ಅಂಕಗಳ 'ಪಂಚರಾತ್ರ' ನಾಟಕದ ಕಥೆಗೆ ಆಧಾರ. ನಾಟಕದ ಕಥೆ ಆರಂಭದಿಂದ ಕೊನೆಯವರೆಗೂ ಕವಿಕಲ್ಪಿತ. ಗೋಗ್ರಹಣಕ್ಕೆ ಪೂರ್ವಭಾವಿಯಾಗಿ ದುರ್ಯೋ

ಧನನು ಯಾಗ ಮಾಡಿದುದಾಗಿ ಮಹಾಭಾರತದಲ್ಲಿ ಉಕ್ತವಾಗಿಲ್ಲ. ಅಂತಹದೊಂದು ಯಾಗ ನಡೆದು, ಶ್ರೀಕೃಷ್ಣನ ಪ್ರತಿನಿಧಿಯಾಗಿ ಅಭಿಮನ್ಯು ಆ ಯಾಗಕ್ಕೆ ಹೋಗಿದ್ದನೆಂಬುದೂ, ಯಾಗ ಮುಗಿದಕೂಡಲೇ ಗೋಗ್ರಹಣ ಯುದ್ಧವಾರಂಭವಾಗಿ ಅಭಿಮನ್ಯುವು ಕೌರವರ ಕಡೆಯಿಂದ ಯುದ್ಧಮಾಡಿ ವಿರಾಟನ ಕಡೆಯವನಾದ (ಅಡುಗೆಯವನ ವೇಷದಲ್ಲಿ ಅಜ್ಞಾತವಾಸದಲ್ಲಿದ್ದ) ಭೀಮನಿಂದ ಸೆರೆ ಹಿಡಿಯಲ್ಪಟ್ಟನೆಂಬುದೂ, ಮುಂದೆ ಅಭಿಮನ್ಯುವನ್ನು ವಿರಾಟನ ಆಸ್ಥಾನಕ್ಕೆ ಕರೆಯಿಸಿದನೆಂಬುದೂ ಅವನೆದುರಿಗೇ ಪಾಂಡವರ ನಿಜಸ್ಥಿತಿ ಬಯಲಾಗಿ ಅರ್ಜುನನು ವಿರಾಟನ ಮಗಳಾದ ಉತ್ತರೆಯನ್ನು ಅಭಿಮನ್ಯುವಿಗಾಗಿ ಸ್ವೀಕರಿಸಿ ಅವರಿಬ್ಬರ ಮದುವೆ ನಿಶ್ಚಿತವಾಯಿತೆಂಬುದೂ ಕವಿಕಲ್ಪಿತವೇ ಆಗಿದ್ದರೂ ಮಹಾಭಾರತದ ಮೂಲಕಥೆಗೆ ಅಷ್ಟಾಗಿ ವಿರುದ್ಧವಾಗಿಲ್ಲ; ಹೊಂದಿಕೊಂಡಂತೆಯೇ ಇದೆ. ಆದರೆ ಮುಖ್ಯ ಪ್ರಕರಣವಾದ 'ಪಂಚ-ರಾತ್ರ'ದ ಷರತ್ತು ಮತ್ತು ಅದರಂತೆ ಪಾಂಡವರಿಗೆ ರಾಜ್ಯಾರ್ಧಪ್ರದಾನ ಇವೆರಡೂ ಮಹಾಭಾರತ ಯುದ್ಧಕ್ಕೇ ಅವಕಾಶವಿಲ್ಲದಂತೆ ಮಾಡುವ, ಮೂಲಕತೆಯ ಹೊರಕಟ್ಟನ್ನೇ ಪಲ್ಲಟಗೊಳಿಸುವ, ಅಂಶಗಳು.

ಪ್ರಾಯಃ ದುರ್ಯೋಧನನನ್ನು ಗುರುಭಕ್ತ, ಸತ್ಯಸಂಧ ಎಂದು ನಿರೂಪಿಸುವ ಉದ್ದೇಶದಿಂದ ಭಾಸ ಈ 'ಪಂಚರಾತ್ರ'ವನ್ನು ರಚಿಸಿರಬೇಕೆಂದು ತೋರುತ್ತದೆ. ಅದಕ್ಕಾಗಿ ದುರ್ಯೋಧನನ ಮಹಾಯಾಗ ಮುಗಿದಮೇಲೆ ಅವನು ಆಚಾರ್ಯದಕ್ಷಿಣೆ ನೀಡುವ ಸಂದರ್ಭದಲ್ಲಿ, ಮೊದಲೇ ತಾನು ಅಪೇಕ್ಷಿಸಿದ್ದನ್ನು ಕೊಡುವುದಾಗಿ ಅವನಿಂದ ವಾಗ್ದಾನ ಪಡೆದ ಆಚಾರ್ಯ ದ್ರೋಣನು 'ನೀನು ಪಾಂಡವರಿಗಾಗಿ ಅರ್ಧರಾಜ್ಯ ಕೊಡು. ಅದೇ ನನಗೆ ನೀನು ಕೊಡಬಹುದಾದ ಗುರುದಕ್ಷಿಣೆ' ಎಂದು ಹೇಳುತ್ತಾನೆ. ಶಕುನಿ ಮಧ್ಯೆ ಬಾರದಿದ್ದರೆ ದುರ್ಯೋಧನನು ಆ ಕೂಡಲೇ ದ್ರೋಣ ಅಪೇಕ್ಷಿಸಿದಂತೆ ಗುರುದಕ್ಷಿಣೆಯನ್ನು ಕೊಟ್ಟುಬಿಡುತ್ತಿದ್ದನೋ ಏನೋ ಎಂಬ ಭಾವನೆ ನಮಗೆಲ್ಲ ಬರುವ ರೀತಿಯಲ್ಲಿ ಮಹಾಭಾರತದ ಕಥೆಯ ಹಿನ್ನೆಲೆಯನ್ನೇ ದೂರ ಸರಿಸಿ, ಭಾಸ ಅವನ ಪಾತ್ರವನ್ನು ಚಿತ್ರಿಸಿದ್ದಾನೆ. ಶಕುನಿಯು ಮಧ್ಯೆ ಬಾಯಿಹಾಕಿದಾಗಲೂ ದುರ್ಯೋಧನ ಅವನಿಗೆ ಇದು ವಂಚನೆಯಾದರೂ ಸರಿ, ಏನೇ ಆದರೂ ಸರಿ, ನಾನು ಕೊಡುತ್ತೇನೆಂದು ಹೇಳಿರುವ ಮಾತು ಸುಳ್ಳಾಗಬಾರದು. ಹಾಗೆ ಮಾಡು'



ಎಂದು ಹೇಳುತ್ತಾನೆ. ಆಗ ಕುತಂತ್ರಿಯಾದ ಶಕುನಿ ಪಂಚರಾತ್ರದ ಷರತ್ತನ್ನು ಮುಂದಿಡುತ್ತಾನೆ; ಅಂದರೆ ಅಜ್ಞಾತವಾಸದಲ್ಲಿರುವ ಪಾಂಡವರ ಸುಳಿವನ್ನು ಐದು ದಿವಸಗಳಲ್ಲಿ ಪತ್ತೆಮಾಡಿದರೆ ಮಾತ್ರ ಅರ್ಧರಾಜ್ಯವನ್ನು ಅವರಿಗೆ ಕೊಡುವುದಾಗಿ ತಿಳಿಸುತ್ತಾನೆ. ಅದೇ ವೇಳೆಗೆ, ಕೀಚಕರನ್ನು ಯಾವನೋ ಒಬ್ಬ ನಿರಾಯುಧನಾಗಿ ಕೊಂದುಬಿಟ್ಟನೆಂಬ ವಾರ್ತೆ ವಿರಾಟನಗರದಿಂದ ಬಂದ ದೂತನಿಂದ ತಿಳಿಯುತ್ತದೆ. ಒಡನೆ ಭೀಷ್ಮನು ಆ ನಿರಾಯುಧನಾದ ವೀರ ಭೀಮನೇ ಎಂದು ಊಹಿಸಿ, ಪಂಚರಾತ್ರದ ಷರತ್ತನ್ನು ಒಪ್ಪಿಕೊಳ್ಳುವಂತೆ ದ್ರೋಣನಿಗೆ ಒತ್ತಾಯಮಾಡಿ, ವಿರಾಟನ ಗೋಗ್ರಹಣ ಮಾಡಲು ದುರ್ಯೋಧನನನ್ನು ಹುರಿದುಂಬಿಸುತ್ತಾನೆ. ಯಾಗಕ್ಕಾಗಿ ನೆರೆದಿದ್ದ ರಾಜರೆಲ್ಲ ಯುದ್ಧಕ್ಕೆ ಹೋಗುತ್ತಾರೆ. ಅಭಿಮನ್ಯುವೂ ಹೋಗುತ್ತಾನೆ. ಕಲ್ಪಿತವಾದರೂ ಕಥೆ ಇಲ್ಲಿ ತುಂಬ ಸಹಜವಾಗಿ ಮುಂದುವರಿಯುತ್ತದೆ. ವಿರಾಟನ ಕಡೆ ಬೃಹನ್ನಳೆಯನ್ನು ಸಾರಥಿಯನ್ನಾಗಿ ಹೊಂದಿ ಉತ್ತರ ಮಾತ್ರ ಯುದ್ಧಮಾಡುತ್ತಾನೆ. ವಿರಾಟನು ರಣರಂಗಕ್ಕೆ ಹೋಗುವುದೇ ಇಲ್ಲ. ಮಹಾಭಾರತದಲ್ಲಿ ವಿರಾಟ, ಭೀಮ ಎಲ್ಲರೂ ಮೊದಲೇ ಯುದ್ಧಕ್ಕೆ ತೆರಳಿದ್ದಂತೆಯೂ ಕೊನೆಯಲ್ಲಿ ಉತ್ತರ ಹೋದಂತೆಯೂ ಹೇಳಿದೆ. ಅಷ್ಟೇ ಅಲ್ಲದೆ ಮಹಾಭಾರತದಲ್ಲಿ ಗೋಗ್ರಹಣವಾದ ಮೂರು ನಾಲ್ಕು ದಿವಸಗಳ ನಂತರ, ಪಾಂಡವರ ಅಜ್ಞಾತವಾಸ ಮುಗಿದದ್ದು. ಇಲ್ಲಿ ಗೋಗ್ರಹಣದ ದಿವಸವೇ ಮುಗಿದುಹೋಗಿರುತ್ತದೆ. ಅಭಿಮನ್ಯು ಕೌರವರ ಕಡೆಯಿಂದ ಯುದ್ಧಮಾಡಿ ಸೆರೆಸಿಗುವುದೂ ಕೌರವರ ಶಿಬಿರದಲ್ಲಿ ಅಭಿಮನ್ಯು ಸೆರೆಸಿಕ್ಕ ವಿಚಾರದಲ್ಲಿ ಮಾತುಕಥೆ ನಡೆಯುತ್ತಾ ಪ್ರಾಸಂಗಿಕವಾಗಿ ಅರ್ಜುನನೇ ತಮ್ಮೆಲ್ಲರನ್ನೂ ಸೋಲಿಸಿದವನೆಂದು, ಮೊದಲು ಊಹೆಯ ಮೇಲೂ ಅನಂತರ ಭೀಷ್ಮನ ಧ್ವಜಕ್ಕೆ ನಾಟಿಕೊಂಡಿದ್ದ 'ಅರ್ಜುನ' ನಾಮಾಂಕಿತ ಬಾಣದ ಆಧಾರದ ಮೇಲೂ, ಸಿದ್ಧಾಂತ ಮಾಡಲು ಭೀಷ್ಮದ್ರೋಣರು ಯತ್ನಿಸುತ್ತಿದ್ದಾಗ ಉತ್ತರನೇ ಅಭಿಮನ್ಯು-ಉತ್ತರೆಯರ ವಿವಾಹಕ್ಕೆ ಆಹ್ವಾನಿಸುವ ನೆಪದಿಂದ ಬಂದು ಪಾಂಡವರೆಲ್ಲರೂ ವಿರಾಟನಗರದಲ್ಲಿರುವ ಅಂಶವನ್ನು ಬಹಿರಂಗಪಡಿಸುವುದೂ, ಪಂಚರಾತ್ರದ ಅವಧಿಯೊಳಗೇ ಇದೆಲ್ಲ ನಡೆದುಹೋಗಿದ್ದುದರಿಂದ ಮರುಮಾತಿಲ್ಲದೆ ದುರ್ಯೋಧನ ಅರ್ಧರಾಜ್ಯವನ್ನು ಪಾಂಡವರಿಗೆ ಬಿಟ್ಟುಕೊಟ್ಟು ತನ್ನ ಸತ್ಯಸಂಧತೆಯನ್ನು ಕಾಪಾಡಿಕೊಳ್ಳುವುದೂ ಕವಿಯು ಸ್ವಂತವಾಗಿ ಹೆಣೆದಿರುವ ಸ್ವಾರಸ್ಯಮಯ ಕಥಾಸರಣಿ.

ಇದಲ್ಲದೆ ನಾಟಕ ರಂಜಕವಾಗುವಂತೆ ಅಭಿಮನ್ಯು-ಬೃಹನ್ನಳೆ-ಭೀಮ ಇವರ ನಡುವೆ ನಡೆಯುವ ಸಂಭಾಷಣೆಯಂತು ಕಲ್ಪಿತವೆಂದು ಹೇಳಲಸಾಧ್ಯವಾಗುವಷ್ಟು ಸಹಜವಾಗಿ ಮೂಡಿಬಂದಿದೆ. ಭಾಸನ ವಸ್ತುರಚನಾಕೌಶಲ ಅಂತಹುದು.

ಪಂಚರಾತ್ರದಲ್ಲಿ ಸ್ತ್ರೀಪಾತ್ರಗಳೇ ಇಲ್ಲದಿರುವುದು ಗಮನಾರ್ಹ. ಬೃಹನ್ನಳೆಯು ರಂಗಮಂಚದಮೇಲೆ ಬರುತ್ತಾಳಾದರೂ ಅರ್ಜುನನೇ ಆ ವೇಷದಲ್ಲಿದ್ದಾನೆಂಬುದು ಅಲ್ಲೇ ಪ್ರಕಟವಾಗಿಬಿಡುತ್ತದೆ. ಸಾಧಾರಣವಾಗಿ ಎಲ್ಲ ನಾಟಕಗಳಲ್ಲೂ ಬರುವ ಪ್ರತೀಹಾರಿ (ಸ್ತ್ರೀ)ಯೂ ಇಲ್ಲಿಲ್ಲ. ಅವಳಿಗೆ ಬದಲಾಗಿ ಭಟ ಬರುತ್ತಾನೆ. ಎರಡನೆಯ ಅಂಕದಲ್ಲಿ ಗೋಪಾಲಕರೊಡನೆ ಬರುವ ಗೋಪದಾರಿಕೆಯರು ಸಂಖ್ಯಾಪೂರಣಕ್ಕೆ ಮಾತ್ರ. ಸಂಸ್ಕೃತದಲ್ಲಿ ಸ್ತ್ರೀ ಪಾತ್ರಗಳಿಲ್ಲದ ದೃಶ್ಯಕಾವ್ಯಗಳು ತುಂಬ ವಿರಳ. ವಿಶಾಖದತ್ತನ ಮುದ್ರಾರಾಕ್ಷಸವನ್ನು ಇಂತಹವುಗಳಲ್ಲಿ ಒಂದೆಂದು ಹೇಳಬಹುದು. ಅಲ್ಲೂ ಚಂದನದಾಸನ ಹೆಂಡತಿ ಒಂದು ಕ್ಷಣಕಾಲ ಮಾತ್ರ ರಂಗಮಂಚದಮೇಲೆ ಕಾಣಿಸಿಕೊಳ್ಳುತ್ತಾಳೆ. ಭಾಸನ ದೂತವಾಕ್ಯ ಕರ್ಣಭಾರಗಳಲ್ಲಿ ಮಾತ್ರ ಸ್ತ್ರೀಪಾತ್ರಪ್ರವೇಶವೇ ಇಲ್ಲ.

ಪಂಚರಾತ್ರ ಬಹುಮುಖವಾದ ವೀರರಸ ಪ್ರಧಾನವಾದದ್ದು. ಇಲ್ಲಿ ದುರ್ಯೋಧನ ಧರ್ಮವೀರ; ದ್ರೋಣ ದಯಾವೀರ; ಇತರರು ಯುದ್ಧವೀರರು. ಹಾಸ್ಯ ವಾತ್ಸಲ್ಯ ರಸಗಳು ವೀರರಸಕ್ಕೆ ಪೋಷಕವಾಗಿ ಬಂದಿವೆ.

**ಮಧ್ಯಮ ವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ ಮತ್ತು ಊರುಭಂಗ**—ಈ ಐದೂ ಭಾಸರಚಿತ ಏಕಾಂಕ ನಾಟಕಗಳು. ಇವು ಮಹಾಭಾರತದ ಆಯಾ ಪ್ರಕರಣಗಳ ಆಧಾರದ ಮೇಲೆ ರಚಿತವಾದುವು. ಇವುಗಳ ಪೈಕಿ ದೂತವಾಕ್ಯ, ಕರ್ಣಭಾರಗಳಲ್ಲಿ ಸ್ತ್ರೀಪಾತ್ರಗಳಿಲ್ಲವೇ ಇಲ್ಲ. ದೂತವಾಕ್ಯವು ಶ್ರೀಕೃಷ್ಣನು ಪಾಂಡವರ ದೌತ್ಯವಹಿಸಿ ದುರ್ಯೋಧನನಲ್ಲಿ ಸಂಧಾನಕ್ಕಾಗಿ ಹೋದ ಕಥೆಯನ್ನು ನಿರೂಪಿಸುತ್ತದೆ. ಇದರಲ್ಲಿ ಪ್ರಾಕೃತಭಾಷೆಯ ಮಾತು ಬರುವುದಿಲ್ಲ. ಬ್ರಾಹ್ಮಣ ವೇಷಧರಿಸಿ ಯಾಚಕನಾಗಿ ಬಂದ ಇಂದ್ರನಿಗೆ ಕರ್ಣನು ತನ್ನ ಕವಚಕುಂಡಲಗಳನ್ನು ದಾನಮಾಡಿದ ಪ್ರಕರಣವನ್ನು ಕರ್ಣಭಾರ ಹೃದಯಂಗಮವಾಗಿ ಚಿತ್ರಿಸುತ್ತದೆ.



ಘಟೋತ್ಕಚನು ತನ್ನ ತಾಯಿಯ ಆಹಾರಕ್ಕೆಂದು ಭೀಮಸೇನನನ್ನೇ ಅವಳಲ್ಲಿಗೆ ಕರೆದೊಯ್ದ ವಿಚಿತ್ರವಾದ ಪ್ರಸಂಗ ಮಧ್ಯಮವ್ಯಾಯೋಗದಲ್ಲಿನ ಕಥೆ. ಕೃಷ್ಣನ ದೂತನಾಗಿ ಘಟೋತ್ಕಚ ಕೌರವರಲ್ಲಿಗೆ ಹೋದ ಸನ್ನಿವೇಶ ದೂತಘಟೋತ್ಕಚದ ವಸ್ತು. ಭೀಮ ದುರ್ಯೋಧನರ ಗದಾಯುದ್ಧವೂ ತತ್ಪರಿಣಾಮವಾಗಿ ದುರ್ಯೋಧನನ ಊರುಭಂಗವೂ 'ಊರುಭಂಗ'ದಲ್ಲಿ ಚಿತ್ರಿತವಾಗಿರುವುದಲ್ಲದೆ ಸಾಂಪ್ರದಾಯಿಕ ನಿಯಮಗಳಿಗೆ ವ್ಯತಿರಿಕ್ತವಾಗಿ ದುರ್ಯೋಧನನ ಕರುಣಾಜನಕವಾದ ಮರಣವೂ ರಂಗದಮೇಲೆಯೇ ಪ್ರದರ್ಶಿತವಾಗಿದೆ.

**ಬಾಲಚರಿತ**—ಶ್ರೀಕೃಷ್ಣನ ಜನನ ಮತ್ತು ಬಾಲಲೀಲೆಗಳನ್ನು ಭಾಸನು ಐದು ಅಂಕಗಳ ಬಾಲಚರಿತದಲ್ಲಿ ಪ್ರದರ್ಶನಕ್ಕೆ ಯೋಗ್ಯವಾದ ರೀತಿಯಲ್ಲಿ ಚಿತ್ರಿಸಿದ್ದಾನೆ. ಈ ನಾಟಕದ ಪ್ರಕಾರ ಕೃಷ್ಣನು ವಸುದೇವನ ಏಳನೆಯ ಸಂತಾನ. ಇತರ ಅನೇಕ ವಿವರಗಳಲ್ಲೂ ಬಾಲಚರಿತದ ಕಥೆ ಹರಿವಂಶ, ವಿಷ್ಣುಪುರಾಣ, ಭಾಗವತಗಳಿಗಿಂತ ಭಿನ್ನವಾಗಿದೆ. ಕೃಷ್ಣನಿಗೂ ಅರಿಷ್ಟನಿಗೂ ನಡೆದ ಕಾಳಗ ಮತ್ತು ಕಂಸ ಅರಿಷ್ಟರ ಮರಣಗಳು ರಂಗದಮೇಲೆಯೇ ಪ್ರದರ್ಶಿತವಾಗುತ್ತವೆ. ಇದರ ಮೂರನೆಯ ಅಂಕದಲ್ಲಿ 'ಹಲ್ಲೀಶ' ನೃತ್ಯದ ಪ್ರದರ್ಶನವಿದೆ. ಈ ನಾಟಕದಲ್ಲಿ ಗೋಪಿಕಾಸ್ತ್ರೀಯರ ವೃತ್ತಾಂತದ ಸೋಂಕೂ ಇಲ್ಲದಿರುವುದು ಗಮನಾರ್ಹ.

**ಚಾರುದತ್ತ**—ಚಾರುದತ್ತವು ಈಗ ಉಪಲಬ್ಧವಾಗಿರುವ ಸ್ಥಿತಿಯಲ್ಲಿ ಅಸಮಗ್ರವಾಗಿದೆ. ಈಗ ಸಿಕ್ಕಿರುವುದು ಇದರ ನಾಲ್ಕು ಅಂಕಗಳು ಮಾತ್ರ. ಶೂದ್ರಕನ ಮೃಚ್ಛಕಟಿಕಕ್ಕೆ ಈ ಚಾರುದತ್ತವೇ ಆಧಾರವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಭಿನವಗುಪ್ತನು ಉಲ್ಲೇಖಿಸಿರುವ ದರಿದ್ರಚಾರುದತ್ತವೂ ಭಾಸನ ಈ ಚಾರುದತ್ತವೂ ಒಂದೇ ಇರಬಹುದು.

ಉಜ್ಜಯಿನಿಯ ವೇಶ್ಯೆಯಾದ ವಸಂತಸೇನೆಯು ಒಂದುದಿನ ದಾರಿಯಲ್ಲಿ ಹೋಗುತ್ತಿದ್ದಾಗ ರಾಜಶ್ಯಾಲಕನಾದ ಸಂಸ್ಥಾನಕನಿಂದ ಪೀಡಿತಳಾಗಿ ಚಾರುದತ್ತನ ಮನೆಯೊಳಕ್ಕೆ ಪ್ರವೇಶಿಸಿ ಆಶ್ರಯಪಡೆದು ತನ್ನ ಆಭರಣಗಳನ್ನು ಅಲ್ಲಿ ನ್ಯಾಸವಾಗಿಟ್ಟು ಹೋಗುತ್ತಾಳೆ. ಅದೇ ರಾತ್ರಿ ಸಜ್ಜಲಕನೆಂಬುವನು ಚಾರುದತ್ತನ ಮನೆಗೆ ನುಗ್ಗಿ ಅಲ್ಲಿ ದೊರೆತ ವಸಂತಸೇನೆಯ ಒಡವೆಗಳನ್ನು ಅವಳದೆಂದು ತಿಳಿಯದೆ ಕದ್ದುಕೊಂಡು ಹೋಗಿ ವಸಂತಸೇನೆಗೇ ಅವುಗಳನ್ನು ಕೊಟ್ಟು ಅವಳಲ್ಲಿ ದಾಸಿಯಾಗಿದ್ದ ತನ್ನ ಪ್ರೇಯಸಿಯನ್ನು ಪಡೆದುಕೊಳ್ಳುತ್ತಾನೆ. ಮಾರನೆಯ ಬೆಳಿಗ್ಗೆ ತನ್ನಲ್ಲಿ ನ್ಯಾಸವಾಗಿದ್ದ ಆಭರಣಗಳು ಕಳುವಾಗಿರುವುದನ್ನು ಅರಿತ ಚಾರುದತ್ತನು ಆ ಆಭರಣಗಳಿಗೆ ಪ್ರತಿಯಾಗಿ ತನ್ನ ಹೆಂಡತಿಯ ರತ್ನಹಾರವನ್ನು

ವಸಂತಸೇನೆಗೇ ಕಳುಹಿಸಿಕೊಡುತ್ತಾನೆ. ತನ್ನ ಆಭರಣಗಳು ಸಜ್ಜಲಕನಿಂದ ತನಗೇ ಬಂದುಬಿಟ್ಟದ್ದರೂ ಚಾರುದತ್ತನನ್ನು ಪುನಃ ನೋಡಲು ನೆಪ ಸಿಕ್ಕಿತೆಂದು ಆ ಹಾರವನ್ನು ವಸಂತಸೇನೆ ಸ್ವೀಕರಿಸಿ ಅವನನ್ನು ಕಾಣಲು ಹೋಗುತ್ತಾಳೆ.— ಇಲ್ಲಿಗೆ ನಾಲ್ಕನೆಯ ಅಂಕ ಮುಕ್ತಾಯವಾಗುತ್ತದೆ.

### ೨ ಶೂದ್ರಕ (ಕ್ರಿ.ಶ. ೩ನೆಯ ಶತಮಾನ?)

ಶೂದ್ರಕಕವಿ ವಿರಚಿತವಾದ ೧೦ ಅಂಕಗಳ ಮೃಚ್ಛಕಟಿಕ ಪ್ರಕರಣವೇ ನಮಗೆ ಉಪಲಬ್ಧವಾಗಿದ್ದ ಸಂಸ್ಕೃತ ನಾಟಕಗಳಲ್ಲೆಲ್ಲಾ ಅತ್ಯಂತ ಪ್ರಾಚೀನವೆಂದು ಹೇಳಲಾಗುತ್ತಿತ್ತು. ಆದರೆ ಭಾಸನ ಚಾರುದತ್ತ ಪ್ರಕಟಿತನಾದಮೇಲೆ ಮೃಚ್ಛಕಟಿಕದ ಪ್ರಾಚೀನತೆಯು ನಿರಾಕೃತವಾಗಿಬಿಟ್ಟಿತು. ಕಾಳಿದಾಸನು ತನಗಿಂತ ಹಿಂದಿನ ಕವಿಗಳನ್ನು ಉಲ್ಲೇಖಿಸುವಾಗ ಶೂದ್ರಕನ ಹೆಸರನ್ನು ಸೇರಿಸದಿರುವುದೂ ಈ ಸಂದರ್ಭದಲ್ಲಿ ಗಮನಿಸತಕ್ಕ ಅಂಶ. ಆದರೆ ಎಂಟನೆಯ ಶತಮಾನದ ವಾಮನನು ಮೃಚ್ಛಕಟಿಕದಿಂದ ಉದಾಹರಿಸಿದ್ದಾನೆ. ಆದ್ದರಿಂದ ಶೂದ್ರಕ ಏಳನೆಯ ಶತಮಾನಕ್ಕೂ ಹಿಂದಿನವನಾಗಿರಬೇಕು. ಮೃಚ್ಛಕಟಿಕದ ಪ್ರಸ್ತಾವನೆಯಲ್ಲಿ ಶೂದ್ರಕನನ್ನು ರಾಜನೆಂದು ಕರೆಯಲಾಗಿದೆ. ಈ ಹೆಸರಿನ ರಾಜನನ್ನು ಚರಿತ್ರೆಯಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ಈ ರಾಜಕವಿಯು ತನಗೆ ಒಂದುನೂರು ವರ್ಷಗಳಮೇಲೆ ೧೦ ದಿನಗಳು ತುಂಬಿದಾಗ ತನ್ನ ಮಗನನ್ನು ಪಟ್ಟಕ್ಕೇರಿಸಿ ಅಗ್ನಿಪ್ರವೇಶ ಮಾಡಿದಂತೆ ಈ ನಾಟಕದ ಪ್ರಸ್ತಾವನೆಯಲ್ಲಿ ಹೇಳಿರುವುದರಿಂದ ಈ ಭಾಗ ಪ್ರಕ್ಷಿಪ್ತವೆನ್ನದೆ ವಿಧಿಯಿಲ್ಲ. ಶೂದ್ರಕನು ಆಂಧ್ರಭೃತ್ಯರಲ್ಲಿ ಮೊದಲನೆಯವನೆಂಬ ಸ್ಕಾಂದಪುರಾಣದ ವಚನದ ಆಧಾರದ ಮೇಲೆ, ಅವನು ಕ್ರಿ. ಶ. ಎರಡನೆಯ ಶತಮಾನದವನೆಂಬುದು ವಿಲ್ಸನ್ನನ ಅಭಿಪ್ರಾಯ. ಪಿಷೆಲ್ ಎಂಬುವನು ಶೂದ್ರಕನೇ ದಂಡಿ ಎಂದು ಪ್ರತಿಪಾದಿಸಲು ಯತ್ನಿಸಿದ್ದಾನೆ. ಶೂದ್ರಕನು ದಾಕ್ಷಿಣಾತ್ಯನೆಂದು ಕಾವ್ಯಾಲಂಕಾರಸೂತ್ರ ವೃತ್ತಿಯ ವ್ಯಾಖ್ಯಾನದಲ್ಲಿ ಹೇಳಿದೆ.

ತನ್ನ ಐಶ್ವರ್ಯವನ್ನೆಲ್ಲಾ ಪರೋಪಕಾರದಲ್ಲಿ ಕಳೆದು ಬಡವನಾಗಿದ್ದ ಚಾರುದತ್ತನೆಂಬ ವರ್ತಕನಲ್ಲಿ ವೇಶ್ಯೆಯಾದ ವಸಂತಸೇನೆಗೆ ಅನುರಾಗಹುಟ್ಟಿ ಪ್ರವರ್ಧಮಾನವಾಗಿ ಫಲಿಸಿದ ಸ್ವಾರಸ್ಯಪೂರ್ಣವಾದ ಕಥೆಯೇ ಮೃಚ್ಛಕಟಿಕದ ವಸ್ತು. ಚಾರುದತ್ತ-ವಸಂತಸೇನೆಯರಿಗೆ ಸಂಬಂಧಿಸಿದ ಈ ಪ್ರಧಾನವಸ್ತು



ಸಾಮಾಜಿಕ ವೃತ್ತಾಂತವೆನ್ನಬಹುದು. ಇದರ ಜತೆಯಲ್ಲೇ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಒಂದು ರಾಜಕೀಯ ವೃತ್ತಾಂತವೂ ಈ ನಾಟಕದಲ್ಲಿದೆ. ಅದು 'ರಾಜ್ಯಕ್ರಾಂತಿ'ಯ ಸ್ವರೂಪದ್ದು. ಆರ್ಯಕನ ಕಥೆಯೇ ಅದು. ಈ ಆರ್ಯಕನು ಒಂದೇ ಒಂದು ಸಲ ಪ್ರೇಕ್ಷಕರ ಮುಂದೆ ಬರುತ್ತಾನೆ. ರಾಜನೆನ್ನಿಸಿಕೊಂಡ ಪಾಲಕ ರಂಗದ ಮೇಲೆ ಬರುವುದೇ ಇಲ್ಲ. ಇದಲ್ಲದೆ ಶರ್ವಿಲಕ-ಮದನಿಕೆಯರ ವೃತ್ತಾಂತ ಮುಂತಾದ ಉಪಕಥೆಗಳೂ ಸೇರಿಕೊಂಡಿವೆ. ಈ ನಾಟಕದಲ್ಲಿ ತನ್ನದೇ ಆದ ವ್ಯಕ್ತಿತ್ವವಳ್ಳ ಮುವ್ವತ್ತು[19] ಪಾತ್ರಗಳಿದ್ದಾರೆ. ಶಕಾರನು 'ಷ', 'ಸ'ಗಳನ್ನು 'ಶ' ಎಂದೇ ತಪ್ಪಾಗಿ ಉಚ್ಚರಿಸುತ್ತಾ ತನ್ನ ವಿಚಿತ್ರ ಮಾತುಗಳಿಂದ ಪ್ರೇಕ್ಷಕರನ್ನು ಹೊಟ್ಟೆ ಹುಣ್ಣಾಗುವಂತೆ ನಗಿಸುತ್ತಾನೆ. ಈ ನಾಟಕದಲ್ಲಿ ಪ್ರಾಕೃತ ಗದ್ಯ ಪದ್ಯಗಳೂ ಹೇರಳವಾಗಿವೆ. ಒಂದೊಂದು ದೃಶ್ಯದಲ್ಲೂ ಹಾಸ್ಯ ತುಳುಕಾಡುತ್ತದೆ. ನಾಟಕದಲ್ಲಿ ಸಪ್ಪೆಯೆನ್ನಬಹುದಾದ ಭಾಗವೇ ಇಲ್ಲವೆನ್ನಬಹುದು. ಪಾತ್ರಚಿತ್ರಣ ಪ್ರಶಂಸನೀಯವಾಗಿರುವುದಲ್ಲದೆ ವರ್ಣನೆಗಳೂ ಕಣ್ಣಿಗೆ ಕಟ್ಟಿದಂತಿವೆ. ಸಂವಿಧಾನ ಕೌಶಲವಂತು ಅಪ್ರತಿಮವಾಗಿದೆ. ಷೇಕ್ಸ್‌ಪಿಯರ್ ನಾಟಕಗಳೊಡನೆ ಹೋಲಿಸಲು ತುಂಬ ಅರ್ಹವಾದ ಸಂಸ್ಕೃತ ನಾಟಕ ಮೃಚ್ಛಕಟಿಕ ಎಂಬುದು ವಿಲ್ಸನ್‌ನ ಅಭಿಪ್ರಾಯ. ನಿದ್ರಿಸುವುದು ಮತ್ತು ಕತ್ತು ಹಿಸುಕಿ ಸಾಯಿಸುವುದು ಮುಂತಾದುವು ಈ ನಾಟಕದಲ್ಲಿ ರಂಗದ ಮೇಲೆಯೇ ಪ್ರದರ್ಶಿತವಾಗುತ್ತವೆ.

ಮೃಚ್ಛಕಟಿಕ (ಮೃತ್+ಶಕಟಿಕಾ) ಎಂದರೆ ಮಣ್ಣಿನ ಸಣ್ಣ (ಆಟದ) ಗಾಡಿ. ವಸಂತಸೇನೆಯು ತನ್ನ ಪ್ರಿಯನಾದ ಚಾರುದತ್ತನ ಮಗನ ಮಣ್ಣಿನ ಗಾಡಿಯಲ್ಲಿ ಮಾತೃವಾತ್ಸಲ್ಯದಿಂದ ತನ್ನ ಒಡವೆಗಳನ್ನು ತುಂಬಿಕೊಟ್ಟದ್ದು ಮುಂದೆ ಒಡವೆಯಾಸೆಯಿಂದ ಚಾರುದತ್ತನೇ ವಸಂತಸೇನೆಯನ್ನು ಕೊಂದುಬಿಟ್ಟನೆಂದು ನ್ಯಾಯಾಸ್ಥಾನದಲ್ಲಿ ನಿರ್ಣಯವಾಗಿ ಅವನಿಗೆ ಮರಣದಂಡನೆ ವಿಧಿಸಲ್ಪಡಲು ಕಾರಣವಾಗುವುದರಿಂದಲೇ ಈ ನಾಟಕಕ್ಕೆ ಈ ಹೆಸರುಬಂದಿದೆ.

**ಪದ್ಮಪ್ರಾಭೃತಕ**ವೆಂಬ ಮತ್ತೊಂದು 'ಭಾಣ'ಜಾತಿಗೆ ಸೇರಿದ ನಾಟಕವೂ ಶೂದ್ರಕಕವಿ ರಚಿತವೆಂದೇ ಹೇಳಲಾಗುತ್ತಿದೆ. ಕಳ್ಳರಿಗೆ ಮೂಲ

[19] ಇವರಲ್ಲಿ ಆರು ಜನ ಸಂಸ್ಕೃತವನ್ನೂ ಹದಿನೈದು ಜನ ಶೌರಸೇನಿಯನ್ನೂ ಏಳು ಜನ ಶುದ್ಧ ಮಾಗಧಿಯನ್ನೂ ಉಳಿದವರು ಮಿಶ್ರಪ್ರಾಕೃತವನ್ನೂ ಆಡುತ್ತಾರೆ.

ಪುರುಷನಾದ ಮೂಲದೇವ ಮತ್ತು ದೇವದತ್ತೆಯರ ಪ್ರೇಮವೃತ್ತಾಂತವೇ ಅದರ ಕಥಾವಸ್ತು.

**ಕೆಲವು ಪ್ರಾಚೀನ ಭಾಣಗಳು**— ಕ್ರಿಸ್ತಶಕದ ಆದಿಭಾಗಕ್ಕೆ ಸೇರಿದ ಇನ್ನೂ ಮೂರು ಭಾಣಗಳಿವೆ. **ಉಭಯಸಾರಿಕಾ** ಭಾಣವು ಪ್ರಾಯಃ ಪತಂಜಲಿಯು ಕವಿಯೆಂದು ಉಲ್ಲೇಖಿಸಿರುವ ವರರುಚಿಯಿಂದ ರಚಿತವಾಗಿರಬೇಕು. ಇದರಲ್ಲಿ ಕುಬೇರದತ್ತನೆಂಬುವನು ಇಬ್ಬರು ಸ್ತ್ರೀಯರನ್ನು ಪ್ರೇಮಿಸಿದ ಕಥೆ ನಿರೂಪಿತವಾಗಿದೆ. ಇದರಲ್ಲಿ ಸಾಂಖ್ಯ-ವೈಶೇಷಿಕದರ್ಶನಗಳ ತತ್ವಗಳಿಗೂ ನೃತ್ಯಕಲೆಗೂ ನಿರ್ದೇಶವಿದೆ. **ಧೂರ್ತವಿಟಸಂವಾದ**ವೆಂಬುದು ಈಶ್ವರದತ್ತನಿಂದ ಬರೆಯಲ್ಪಟ್ಟ ಮತ್ತೊಂದು ಭಾಣ. ಇದರಲ್ಲಿ ವೇಶ್ಯೆಯರ ವ್ಯವಹಾರಗಳೇ ಪ್ರಧಾನವಾಗಿ ಪ್ರತಿಪಾದಿತವಾಗಿವೆ. ಶ್ಯಾಮಿಲಕನೆಂಬುವವನಿಂದ ರಚಿತವಾದ **ಪಾದತಾಡಿತಕ**ವು ಮೂರನೆಯ ಭಾಣ. ಬ್ರಾಹ್ಮಣನೊಬ್ಬನು ತಾನು ವೇಶ್ಯೆಯೊಬ್ಬಳಿಂದ ತಲೆಯಮೇಲೆ ಒದೆಯಲ್ಪಟ್ಟುದಕ್ಕಾಗಿ ಯಾವ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಒಬ್ಬೊಬ್ಬರನ್ನೂ ಕೇಳುತ್ತಾ ಹೋದಾಗ ಅದೇ ವೇಶ್ಯೆಯ ಮತ್ತೊಂದು ಕಾಲಿನಿಂದಲೂ ಒದೆಯಲ್ಪಡುವುದೇ ಸರಿಯಾದ ಪ್ರಾಯಶ್ಚಿತ್ತವೆಂದು ಸಲಹೆ ಪಡೆದ ಸ್ವಾರಸ್ಯಮಯ ಕಥೆ ಈ ಭಾಣದ ವಸ್ತು.

### ೩ ಕಾಳಿದಾಸ (೪೭–೫೫ ಪುಟಗಳನ್ನೂ ನೋಡಿ)

ಕಾಳಿದಾಸ ವಿರಚಿತ ನಾಟಕಗಳು ಮೂರು—(೧) ಮಾಳವಿಕಾಗ್ನಿಮಿತ್ರ (೨) ವಿಕ್ರಮೋರ್ವಶೀಯ ಮತ್ತು ಅಭಿಜ್ಞಾನಶಾಕುಂತಲ. ಕ್ಷೇಮೇಂದ್ರನು ಔಚಿತ್ಯವಿಚಾರಚರ್ಚೆಯಲ್ಲಿ ಉಲ್ಲೇಖಿಸಿರುವ ಕುಂತೇಶ್ವರ ದೌತ್ಯದ ಸ್ವರೂಪ ಇನ್ನೂ ತಿಳಿದುಬಂದಿಲ್ಲ. ಮೇಲೆ ಹೇಳಿದ ಮೂರು ನಾಟಕಗಳೂ ಪ್ರಾಯಃ ಅದೇ ಕ್ರಮದಲ್ಲೇ ರಚಿತವಾಗಿರಬೇಕು. ವಸ್ತುರಚನೆಯಲ್ಲೂ, ಸಂವಿಧಾನ ಕೌಶಲದಲ್ಲೂ, ರಸಪರಿಪೋಷದಲ್ಲೂ, ನಿರೂಪಿಸಿರುವ ಪ್ರಣಯದ ಸ್ವರೂಪದಲ್ಲೂ, ಪದಪ್ರಯೋಗದ ಧಾಟಿಯಲ್ಲೂ ಈ ಮೂರು ನಾಟಕಗಳೂ ಅದೇ ಕ್ರಮದಲ್ಲಿ ಕವಿಪ್ರತಿಭೆಯ ಬೆಳವಣಿಗೆಯ ಪ್ರತೀಕದಂತಿವೆ. ಆದರೂ ಕವಿಯ ಕೌಶಲ ಪಕ್ವಸ್ಥಿತಿಯಲ್ಲಿ ಪರಿಪೂರ್ಣತೆ ಪಡೆದಿರುವುದು ಅಭಿಜ್ಞಾನ ಶಾಕುಂತಲ ನಾಟಕದಲ್ಲಿ.



**ಮಾಳವಿಕಾಗ್ನಿಮಿತ್ರಂ**—ಮಾಳವಿಕಾಗ್ನಿಮಿತ್ರವು ಐದು ಅಂಕಗಳ ನಾಟಕ. ಶುಂಗವಂಶದ ಅಗ್ನಿಮಿತ್ರ ಎಂಬ ರಾಜನೇ ಈ ನಾಟಕದ ನಾಯಕ. ವಿದರ್ಭದೇಶದ ರಾಜಕುಮಾರಿಯಾದ ಮಾಳವಿಕೆಯೇ ನಾಯಿಕೆ. ಆದ್ದರಿಂದಲೇ ನಾಟಕಕ್ಕೆ ಈ ಹೆಸರು. ನಾಟಕದ ಕಥೆ ಹೀಗಿದೆ—

ವಿದಿಶಾಧಿಪತಿಯಾದ ಅಗ್ನಿಮಿತ್ರನಿಗೆ ಧಾರಿಣಿ, ಇರಾವತೀ ಎಂಬ ಇಬ್ಬರು ಪತ್ನಿಯರಿದ್ದಾರೆ. ಹಿರಿಯರಾಣಿ ಧಾರಿಣಿಯೊಡನೆ ರಾಜನು ಚಿತ್ರಶಾಲೆಯಲ್ಲಿಟ್ಟಿದ್ದ ಹೊಸ ಚಿತ್ರವೊಂದನ್ನು ನೋಡುವಾಗ ಅದರಲ್ಲಿ ಚಿತ್ರಿತಳಾಗಿದ್ದ 'ಹೊಸ ಹುಡುಗಿ'ಯೊಬ್ಬಳ ರೂಪದಿಂದ ಮುಗ್ಧನಾಗುತ್ತಾನೆ. ಅವಳನ್ನು ರಾಜನು ಕಣ್ಣಾರೆ ಕಾಣಲು ವಿದೂಷಕ ಗೌತಮನು ತಂತ್ರವೊಂದನ್ನು ಹೂಡಿ ರಾಜ, ರಾಣಿ ಮತ್ತಿತರರ ಮುಂದೆ ಆ ಹುಡುಗಿಯ ನಾಟ್ಯದ ಪ್ರದರ್ಶನವಾಗುವಂತೆ ಏರ್ಪಡಿಸುತ್ತಾನೆ. ಹೀಗೆ ಅವಳ ರೂಪವನ್ನೂ ನಾಟ್ಯಕುಶಲತೆಯನ್ನೂ ಕಣ್ಣಾರೆ ಕಂಡು, ಭಾವಪೂರ್ಣ ಗಾನವನ್ನು ಕಿವಿಯಾರ ಕೇಳಿ, ರಾಜನ ಮನಸ್ಸು ಅವಳಲ್ಲಿ ನೆಲಸುತ್ತದೆ. ಅವಳೇ ಮಾಳವಿಕೆ; ಮಹಾರಾಣಿ ಧಾರಿಣಿಯ ಚೇಟಿ. ಅವಳ ಮನಸ್ಸೂ ರಾಜನಲ್ಲಿ ಅನುರಕ್ತವಾಗುತ್ತದೆ. ಪರಸ್ಪರ ಸಂದರ್ಶನದಿಂದ ಅನುರಕ್ತರಾದ ಪ್ರೇಮಿಗಳಿಬ್ಬರೂ ಮುಂದೆ ಒಟ್ಟಿಗೆ ಸೇರಿ ಸಂಭಾಷಿಸುವಂತೆಯೂ ವಿದೂಷಕನೇ ಏರ್ಪಡಿಸುತ್ತಾನೆ. ಇಂತಹದೊಂದು ಸಂದರ್ಭದಲ್ಲಿ ಯಾದೃಚ್ಛಿಕವಾಗಿ ಕಿರಿಯರಾಣಿ ಅಲ್ಲಿಗೇ ಬಂದು ಅವರ ಪ್ರಣಯವೃತ್ತಾಂತವನ್ನು ಪ್ರತ್ಯಕ್ಷವಾಗಿ ಕಂಡು ಹಿರಿಯರಾಣಿಗೆ ಎಲ್ಲವನ್ನೂ ತಿಳಿಸಿಬಿಡುತ್ತಾಳೆ. ತತ್ಪರಿಣಾಮವಾಗಿ ಮಾಳವಿಕೆಯೂ ಅವಳಿಗೆ ಸಹಾಯಕಳಾದ ಸಖಿಯೂ ಅಂತರ್ಗೃಹವೊಂದರಲ್ಲಿ ಬಂಧಿತರಾಗುತ್ತಾರೆ. ಆದರೆ ರಾಜನಿಗೆ ಸಹಾಯಕನಾಗಿರುವ ವಿದೂಷಕನ ಬುದ್ಧಿ ಅಸಾಧಾರಣವಾದುದು. ತನ್ನನ್ನು ಹಾವು ಕಚ್ಚಿತೆಂದು ನಟಿಸಿ ಚಿಕಿತ್ಸೆಗಾಗಿ ವಿಷವೈದ್ಯನಾದ ಧ್ರುವಸಿದ್ಧಿಯಲ್ಲಿಗೆ ರಾಣಿಯ ನಾಗಮುದ್ರಿಕೆ ಬರುವಂತೆ ಮಾಡಿ ಅದನ್ನು ಅಂತರ್ಗೃಹದ ಬಾಗಿಲಲ್ಲಿ ಕಾಯುತ್ತಿದ್ದವಳಿಗೆ ತೋರಿಸಿ ರಾಣಿಯ ಆಜ್ಞೆಯೆಂದು ಹೇಳಿ ಬಂಧಿತರಿಬ್ಬರ ವಿಮೋಚನವನ್ನೂ ಸಾಧಿಸಿಬಿಟ್ಟು ಉದ್ಯಾನದಲ್ಲಿದ್ದ ಒಂದು ವಿಲಾಸಗೃಹದಲ್ಲಿ ಮಾಳವಿಕೆಯೊಡನೆ ರಾಜನು ಸಂಧಿಸುವಂತೆ ಮಾಡುತ್ತಾನೆ. ದುರದೃಷ್ಟವಶಾತ್ ಇದೂ ಇರಾವತಿಯ ಗಮನಕ್ಕೆ ಬಂದು ಅವಳು ಅವರಿಬ್ಬರ ಮುಂದೆಯೇ ಕಾಣಿಸಿಕೊಳ್ಳುತ್ತಾಳೆ. ಅದೇ ಸಮಯಕ್ಕೆ ಕೋತಿಯೊಂದರ ಹಾವಳಿಯಿಂದ ಕೂಗಾಟವೇಳಲು ರಾಜನು ಅಲ್ಲಿಂದ ಜಾರಿಕೊಳ್ಳುತ್ತಾನೆ. ಸ್ವಲ್ಪ ಹಿಂದೆ ಅಶೋಕವೃಕ್ಷಕ್ಕೆ ಮಾಳವಿಕೆ ನೀಡಿದ್ದ ದೋಹದದ ಫಲವಾಗಿ ಅದು ಐದು ದಿನಗಳೊಳಗೇ ಪುಷ್ಪಿತವಾಗಿದ್ದುದರಿಂದ ಮಾಳವಿಕೆಯ 'ಅಭಿಲಾಷೆ'ಯನ್ನು ಧಾರಿಣಿಯು ಪೂರ್ಣಮಾಡುವ ಆಶೆಯುಂಟಾಗಿ ಮಾಳವಿಕೆಯೂ ಸಮಾಧಾನಪಟ್ಟುಕೊಳ್ಳುತ್ತಾಳೆ.

ಈ ಮಧ್ಯೆ ಧಾರಿಣಿಯ ತಮ್ಮನೂ ಸೇನಾಪತಿಯೂ ಆಗಿದ್ದ ವೀರಸೇನನು ವಿದರ್ಭರಾಜನಾಗಿದ್ದ ಯಜ್ಞಸೇನನನ್ನು ಸೋಲಿಸಿ ಅವನಿಂದ ಬಂಧಿತನಾಗಿದ್ದ ಅವನ ದಾಯಾದಿ ಮಾಧವಸೇನನನ್ನು ಬಿಡಿಸಿ ಆ ಶುಭವೃತ್ತಾಂತದೊಡನೆ ಇಬ್ಬರು ಕುಶಲೆಯರಾದ ಕನ್ಯೆಯರನ್ನೂ ಧನಕನಕಾದಿ ಉಪಹಾರಗಳನ್ನೂ ರಾಜನಲ್ಲಿಗೆ ಕಳುಹಿಸುತ್ತಾನೆ. ಆ ಕನ್ಯೆಯರು

ಮಾಳವಿಕೆಯನ್ನು ಮಾಧವಸೇನನ ತಂಗಿಯೆಂದು ಗುರುತಿಸುತ್ತಾರೆ. ಬಳಿಕ ವಿಚಾರ ಕ್ರಮದಲ್ಲಿ ಮಾಧವಸೇನ ಸೆರೆಯಾದಮೇಲೆ ಅವನ ಮಂತ್ರಿಯು ಮೊದಲೇ ಮಾತಾಗಿದ್ದಂತೆ ರಾಜಕುಮಾರಿ ಮಾಳವಿಕೆಯನ್ನು ಅಗ್ನಿಮಿತ್ರನಿಗೆ ವಿವಾಹಮಾಡಿಕೊಡಲು ಕರೆತರುತ್ತಿದ್ದಂತೆಯೂ ದಾರಿಯಲ್ಲಿ ದಸ್ಯುಗಳ ಕೈಗೆ ಸಿಕ್ಕಿ ಮಂತ್ರಿಯು ಹತನಾದಂತೆಯೂ, ವೀರಸೇನನು ಕಳ್ಳರಿಂದ ಮಾಳವಿಕೆಯನ್ನು ಬಿಡಿಸಿ ಧಾರಿಣಿಯಲ್ಲಿಗೆ ಕಳುಹಿಸಿದ್ದನೆಂದೂ ತಿಳಿದು ಬರುತ್ತದೆ. ಅದೇ ಸಮಯಕ್ಕೆ ಸರಿಯಾಗಿ ಧಾರಿಣಿಯ ಮಗ ವಸುಮಿತ್ರನು ತನ್ನ ತಾತನ ಯಜ್ಞಾಶ್ವವನ್ನು ಹಿಂಬಾಲಿಸಿ ಜಯಶೀಲನಾಗಿ ಹಿಂದಿರುಗಿದ್ದ ವರ್ತಮಾನವೂ ಬರುತ್ತದೆ. ಈ ಎರಡು ಸಂತೋಷಸಮಾಚಾರಗಳಿಂದ ಪರಿತುಷ್ಟಳಾದ ಧಾರಿಣಿಯು ಮಾಳವಿಕೆಗೆ ತಾನು ಹಿಂದೆ ಇತ್ತಿದ್ದ ವಚನದಂತೆ ಅವಳ ಅಭಿಲಾಷೆಯು ಪೂರ್ಣವಾಗುವಂತೆ ತನ್ನ ಪತಿಗೆ ಅವಳನ್ನು ತಾನೇ ಒಪ್ಪಿಸುತ್ತಾಳೆ.

ಹೀಗೆ ಚರಿತ್ರೆಯ ರಾಜಪುರುಷರಿಗೆ ಸಂಬಂಧಿಸಿದಂತೆ ಹೆಣೆದು ಕಟ್ಟಿರುವ ರಾಜನೊಬ್ಬನ ಗೃಹಕೃತ್ಯಕ್ಕೆ ಸಂಬಂಧಿಸಿದ ಪ್ರೇಮದ ಕಥೆ ಈ ನಾಟಕದ ವಸ್ತು. ಕಥೆ ಸ್ವಾರಸ್ಯವಾಗಿ ಬೆಳೆದು ನಿರೀಕ್ಷಿತ ಘಟ್ಟವನ್ನು ಸೇರುವಂತೆ ಕವಿಯು ವಸ್ತುವನ್ನು ರಚಿಸಿದ್ದಾನೆ. ಸಂವಿಧಾನಗಳಲ್ಲೂ ಕವಿಯ ಕುಶಲತೆಯನ್ನು ಕಾಣಬಹುದು. 'ಕೋತಿಯ ಹಾವಳಿ' ಪ್ರಸಂಗದಿಂದ ಕಥೆಗೆ ಅಸಹಜತೆಯುಂಟಾಗಿದೆಯೆನ್ನಬೇಕು. ಹಿಂದೂ ರಾಜರಲ್ಲಿ ಬಹುಪತ್ನೀತ್ವ ಬಹಳ ಹಿಂದಿನ ಕಾಲದಿಂದಲೂ ಬಂದಿದೆ. ಅಗ್ನಿಮಿತ್ರನ ಈ ಬಹುಪತ್ನೀತ್ವವನ್ನು ಆಧುನಿಕದೃಷ್ಟಿಯಿಂದ ವಿಮರ್ಶಿಸುವುದು ತಪ್ಪಾದೀತು. ಪ್ರೇಮದ ಸ್ವರೂಪ ಅನಿರ್ವಚನೀಯವಾದದ್ದು. ನಾವು ಇಲ್ಲಿ ಗಮನಿಸಬೇಕಾದುದು ತನ್ನ ಪತ್ನಿಯರಲ್ಲಿ ಅಗ್ನಿಮಿತ್ರನಿಗಿದ್ದ ಕರ್ತವ್ಯನಿಷ್ಠೆಯನ್ನು. ಹಿರಿಯ ಅಥವಾ ಕಿರಿಯರಾಣಿಯ ಮನಸ್ಸಿಗೆ ಸ್ವಲ್ಪವೂ ನೋವಾಗಬಾರದೆಂಬುದೇ ಅವನ ಅಪೇಕ್ಷೆ. ತಾನು ಪ್ರೇಮಿಸಿದವಳನ್ನು ತತ್ಕಾಲದಲ್ಲಿ ಮಾತ್ರ ತನ್ನ ಕಾಮದ ವಸ್ತುವನ್ನಾಗಿ ಬಳಸಿಕೊಂಡು ಅನಂತರ ದೂರಮಾಡುವ ಅನೈತಿಕತೆ ಅವನಲ್ಲಿರಲಿಲ್ಲ. ಅವನ ಪ್ರೇಮವು ವಿವಾಹದಲ್ಲೇ ಫಲಿಸುತ್ತಿತ್ತು. 'ರಾಜಾನೋ ಬಹುವಲ್ಲಭಾಃ' ಎಂದು ಎಲ್ಲರೂ ಹೇಳುತ್ತ ಅದೇ ರೀತಿ ಅನುಷ್ಠಿಸುತ್ತಿದ್ದ ಕಾಲ ಅದು. ಆದ್ದರಿಂದ ಇದೊಂದನ್ನೇ ದೊಡ್ಡದುಮಾಡಿ ಅಗ್ನಿಮಿತ್ರನನ್ನು ಕೀಳಾಗಿ ಕಾಣುವುದಾಗಲಿ, ಅವನು ನಾಯಕನಾಗಲು ತಕ್ಕವನಲ್ಲವೆಂದು ಹೇಳುವುದಾಗಲಿ ತರವಲ್ಲ. ನಮ್ಮ ಚರಿತ್ರೆಯಲ್ಲಿ, ಇತಿಹಾಸ ಪುರಾಣಗಳಲ್ಲಿ, ಅಂತಹ ಏಕಪತ್ನೀತ್ವದ ಆದರ್ಶವನ್ನು ನಾವು ಶ್ರೀರಾಮನೊಬ್ಬನಲ್ಲಿ ಮಾತ್ರ ಕಾಣ



ಬಹುದು. ನಾಟಕಗಳಲ್ಲಿ ನಾಯಕರು ಇತ್ತೀಚಿನ ಆದರ್ಶಕ್ಕೆ ತಕ್ಕವರಾಗಿರಬೇಕೆನ್ನುವುದಾದರೆ ಎಲ್ಲ ನಾಟಕಗಳೂ ರಾಮನೊಬ್ಬನ ಕಥೆಯನ್ನೇ ನಿರೂಪಿಸಬೇಕಾಗುತ್ತದೆ. ಅಗ್ನಿಮಿತ್ರನಲ್ಲಿರುವ ದಾಕ್ಷಿಣ್ಯಪರತೆಯೇ ಮೊದಲಾದ ಇತರ ಗುಣಗಳನ್ನೂ ನಾವು ಗಮನಿಸಬೇಕು. ಸಂಸ್ಕೃತ ನಾಟಕಕಾರನ ಧ್ಯೇಯ ಚರಿತ್ರಚಿತ್ರಣವಲ್ಲ, ರಸಪರಿಪೋಷ—ಎಂದು ಹಿಂದೆಯೇ ಹೇಳಿದ್ದೇವೆ. ಆದ್ದರಿಂದ ಆ ನಾಟಕ ರಚಿತವಾದಾಗ ಪ್ರಚಲಿತವಾಗಿದ್ದ ಸಾಮಾಜಿಕ ರಾಜಕೀಯ ಲಾಕ್ಷಣಿಕ ಹಿನ್ನೆಲೆಗಳಲ್ಲಿ ಅಲ್ಲಿನ ನಾಯಕ ನಾಯಿಕೆಯರನ್ನು ವಿಮರ್ಶಿಸಬೇಕು. ಹಾಗಲ್ಲದಿದ್ದರೆ ವಯಸ್ಕನಾದ ರಾಜನಲ್ಲಿ ಇನ್ನೂ ಎಳೆಯ ಪ್ರಾಯದ ಮಾಳವಿಕೆ ಅನುರಕ್ತಳಾದುದೂ ಈಗಿನ ಹುಡುಗಿಯರಿಗೆ ವಿಚಿತ್ರವಾಗಿಯೇ ಕಾಣಬಹುದಲ್ಲವೆ?

ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ಸುಂದರವಾದ ವರ್ಣನೆಗಳಿವೆ; ನೆನಪಿಡಬೇಕಾದ ಅನೇಕ ಅನುಭವೋಕ್ತಿಗಳಿವೆ; ನಿತ್ಯಸತ್ಯಗಳಾದ ನುಡಿಮುತ್ತುಗಳಿವೆ. ಅಂತಹವುಗಳಲ್ಲಿ ಇವು ಕೆಲವು—

೧. ಹಳೆಯದು–ಹೊಸದು

ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಸರ್ವಂ ನವಮಿತ್ಯವದ್ಯಂ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯಬುದ್ಧಿಃ॥

೨. ನಾಟ್ಯದ ಮೇಲ್ಮೆ

ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ।

೩. ಪತಿವ್ರತೆಯ ನಿಃಸ್ವಾರ್ಥತೆ

ಪ್ರತಿಪಕ್ಷೇಣಾಪಿ ಪತಿಂ ಸೇವಂತೇ ಭರ್ತೃವತ್ಸಲಾಃ ಸಾಧ್ವ್ಯಃ।
ಅನ್ಯಸರಿತಾಂ ಶತಾನಿ ಹಿ ಸಮುದ್ರಗಾಃ ಪ್ರಾಪಯಂತ್ಯಬ್ಧಿಮ್॥

೪. ಉತ್ತಮ ಶಿಕ್ಷಕ

ಶಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ।
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ ಧುರಿ ಪ್ರತಿಷ್ಠಾಪಯಿತವ್ಯ ಏವ॥

೫. ಜೀವಿಕೆಗಾಗಿ ವಿದ್ಯೆ

ಯಸ್ಯಾಗಮಃ ಕೇವಲಜೀವಿಕಾಯೈ ತಂ ಜ್ಞಾನಪಣ್ಯಂ ವಣಿಜಂ ವದಂತಿ।

೬. ವಿದ್ವತ್ಸಹವಾಸ

ಮಂದೋಽಪ್ಯಮಂದತಾಮೇತಿ ಸಂಸರ್ಗೇಣ ವಿಪಶ್ಚಿತಃ॥
ಪಂಕಚ್ಛಿದಃ ಫಲಸ್ಯೇವ ನಿಕಷೇಣಾವಿಲಂ ಪಯಃ॥

**ವಿಕ್ರಮೋರ್ವಶೀಯಂ**—ಐದು ಅಂಕಗಳ ವಿಕ್ರಮೋರ್ವಶೀಯವನ್ನು ಲಾಕ್ಷಣಿಕರು ಉಪರೂಪಕಗಳಲ್ಲಿನ ಒಂದು ಪ್ರಭೇದವಾದ [20]**ತ್ರೋಟಕ**ವೆಂದು ಕರೆಯುತ್ತಾರೆ. ಚಂದ್ರವಂಶದ ರಾಜನಾದ ಪುರೂರವ ಮತ್ತು ಅಪ್ಸರಸ್ತ್ರೀಯಾದ ಉರ್ವಶಿ-ಇವರಿಬ್ಬರ ಪ್ರೇಮದ ಕಥೆ ಈ ತ್ರೋಟಕದ ವಸ್ತು. ಉರ್ವಶೀ ಪುರೂರವರ ಪ್ರೇಮವೃತ್ತಾಂತ ವೇದಗಳಲ್ಲೂ (ಋಗ್ವೇದ ಮಂ. ೧೦ ಸೂ. ೯೫) ಪುರಾಣಗಳಲ್ಲೂ ಕಥಾಸರಿತ್ಸಾಗರದಲ್ಲೂ ಬರುತ್ತದೆ. ಆ ವೃತ್ತಾಂತದಲ್ಲಿ ಅಂತಹ ಸ್ವಾರಸ್ಯವೇನೂ ಇಲ್ಲದಿದ್ದರೂ ಕಾಳಿದಾಸನ ಕೈಯಲ್ಲಿ ಆ ಸಾಮಾನ್ಯ ಕಥೆಯೇ ಹೊಸದೆಂಬಂತೆ ಮಾರ್ಪಟ್ಟು ಶೃಂಗಾರಮಯ ಸನ್ನಿವೇಶಗಳಿಂದ ಸಜ್ಜಾಗಿ ಮನೋಹರವಾದ ನಾಟಕವಾಗಿಬಿಟ್ಟಿದೆ. ಈ ನಾಟಕದ ಕಥೆ ಹೀಗಿದೆ—

ಒಂದು ದಿನ ರಾಜಾ ಪುರೂರವನು ಕೇಶಿಯೆಂಬ ದಾನವನಿಂದ ಉರ್ವಶಿಯನ್ನು ಬಿಡಿಸಿ ತನ್ನ ರಥದಲ್ಲೇ ಕುಳ್ಳಿರಿಸಿಕೊಂಡು ಬಂದು ಅವಳ ಸಖಿಯರಿಗೆ ಒಪ್ಪಿಸುತ್ತಾನೆ. ಈ ರೀತಿ ಸಂಭವಿಸಿದ ಪ್ರಥಮ ಸಂದರ್ಶನದಲ್ಲಿ ಉರ್ವಶೀಪುರೂರವರಿಗೆ ಪ್ರೇಮ ಉತ್ಪನ್ನವಾಗುತ್ತದಾದರೂ ಅವರು ಬಹಳ ಬೇಗ ಅಗಲಬೇಕಾಗುತ್ತದೆ.

ವಿರಹಪೀಡಿತನಾದ ರಾಜನು ವಿದೂಷಕನೊಡನೆ ಉದ್ಯಾನದಲ್ಲಿರುವಾಗ ಉರ್ವಶಿಯೂ ತನ್ನ ಸಖಿ ಚಿತ್ರಲೇಖೆಯೊಡನೆ ಬಂದು ಅದೃಶ್ಯಳಾಗಿದ್ದುಕೊಂಡೇ ರಾಜನ ಸಂಭಾಷಣೆಯನ್ನು ಆಲಿಸುತ್ತಾಳೆ. ರಾಜನಿಗೆ ತನ್ನ ಮೇಲಿರುವ ಪ್ರೀತಿ ಮನವರಿಕೆಯಾಗಿ ಮೊದಲು ಒಂದು ಭೂರ್ಜಪತ್ರದ ಮೂಲಕ ತನ್ನ ಅನುರಾಗವನ್ನು ಸೂಚಿಸಿ ಬಳಿಕ ಅವನೆದುರಿಗೇ ಕಾಣಿಸಿಕೊಳ್ಳುತ್ತಾಳೆ. ಸ್ವಲ್ಪ ಹೊತ್ತಿನಲ್ಲಿ ಇಂದ್ರನಿಂದ ಕರೆ ಬರಲು ಅವಳು ಮನಸ್ಸಿಲ್ಲದಿದ್ದರೂ ಹೊರಟುಹೋಗಬೇಕಾಗುತ್ತದೆ. ಈ ಮುಂಚೆಯೇ ವಿದೂಷಕನ ಅಜಾಗರೂಕತೆಯಿಂದ ಉರ್ವಶೀವೃತ್ತಾಂತವನ್ನು ಅರಿತಿದ್ದ ರಾಣಿ ಔಶೀನರಿಯು ರಾಜನನ್ನು ಹುಡುಕಿಕೊಂಡು ಉದ್ಯಾನವನಕ್ಕೆ ಬರುತ್ತಾಳೆ. ದಾರಿಯಲ್ಲಿ ಉರ್ವಶಿಯ ಭೂರ್ಜಪತ್ರ ಗಾಳಿಗೆ ಹಾರಿಕೊಂಡು ಅವಳ ಬಳಿಗೇ ಬರುತ್ತದೆ. ಅದನ್ನವಳು ಕೈಗೆತ್ತಿಕೊಂಡು ರಾಜನ ಮುಂದೆ ಹೋಗಿ ನಿಂತು ಆ ಪತ್ರವನ್ನು ಅವನಿಗೇ ನೀಡಿ ಅವನ ಅನುನಯಗಳನ್ನು ಲಕ್ಷಿಸದೆ ಮಳೆಗಾಲದ ಹೊಳೆಯಂತೆ ವೇಗವಾಗಿ ಹೊರಟುಹೋಗುತ್ತಾಳೆ.

ಅತ್ತ ಇಂದ್ರನ ಸಭೆಯಲ್ಲಿ ಲಕ್ಷ್ಮೀಸ್ವಯಂವರನಾಟಕದಲ್ಲಿ ಲಕ್ಷ್ಮಿಯ ಪಾತ್ರವಹಿಸಿದ ಉರ್ವಶಿಯು ತಾನು 'ಪುರುಷೋತ್ತಮ'ನನ್ನು ವರಿಸುವುದಾಗಿ ಹೇಳಬೇಕಾಗಿದ್ದಾಗ ಅನ್ಯಮನಸ್ಕತೆಯಿಂದ 'ಪುರೂರವನನ್ನು' ಎಂದು ಹೇಳಿ ನಾಟ್ಯಾಚಾರ್ಯರಾದ ಭರತಮುನಿಗಳಿಂದ ಶಪ್ತಳಾಗಿಬಿಡುತ್ತಾಳೆ. ಆದರೆ ಇಂದ್ರನ ದಯೆಯಿಂದ 'ಮರ್ತ್ಯಲೋಕದಲ್ಲಿ ಪುರೂರವನೊಡನೆ ಸಂತಾನದರ್ಶನವಾಗುವವರೆಗೆ ಇದ್ದು ಬಳಿಕ ದೇವಲೋಕಕ್ಕೆ ಬರಬಹುದು'

[20] ಸಪ್ತಾಷ್ಟನವಪಂಚಾಂಕಂ ದಿವ್ಯಮಾನುಷಸಂಶ್ರಯಂ ।
ತ್ರೋಟಕಂ ನಾಮ ತತ್ ಪ್ರಾಹುಃ ಪ್ರತ್ಯಂಕಂ ಸವಿದೂಷಕಂ ॥



ಎಂಬ ಅವಧಿಯೇರ್ಪಟ್ಟುದರಿಂದ ಉರ್ವಶಿಯು ತನ್ನ ಸಖಿಯೊಡನೆ ಪುರೂರವನ ಮಣಿಹರ್ಮ್ಯಪ್ರಾಸಾದದ ಮೇಲೆ ಬಂದಿಳಿಯುತ್ತಾಳೆ. ಅಲ್ಲಿ ರಾಜನ ಸಮ್ಮುಖದಲ್ಲಿ ರಾಣಿಯು ರೋಹಿಣೀಯುಕ್ತನಾದ ಚಂದ್ರನನ್ನು ಪೂಜಿಸಿ ತನ್ನ 'ಪ್ರಿಯಾನುಪ್ರಸಾದನ' ವ್ರತವನ್ನು ಸಾಂಗವಾಗಿ ನೆರವೇರಿಸಿ 'ಇಂದಿನಿಂದ ಆರ್ಯಪುತ್ರನು ಯಾವ ಸ್ತ್ರೀಯನ್ನು ಬಯಸುತ್ತಾನೋ ಮತ್ತು ಯಾವಳು ಆರ್ಯಪುತ್ರನ ಸಮಾಗಮವನ್ನು ಅಪೇಕ್ಷಿಸುತ್ತಾಳೋ ಅವಳಲ್ಲಿ ನಾನು ಪ್ರೀತಿಯಿಂದಿರುತ್ತೇನೆ' ಎಂದು ಹೇಳಿ ರಾಜನ ಉತ್ತರಕ್ಕೆ ಕಾಯದೆ ಹೊರಟುಹೋಗುತ್ತಾಳೆ. ಉರ್ವಶಿಯು ತಿರಸ್ಕರಣಿಯನ್ನು ದೂರಮಾಡಿ ಪುರೂರವನ ಪತ್ನಿಯಾಗಿ ಅವನೊಡನೆ ವಾಸಿಸುತ್ತಾಳೆ.

ಉರ್ವಶಿಯೊಡನೆ ಪುರೂರವನು ಗಂಧಮಾದನ ಪರ್ವತದಮೇಲೆ ವಿಹರಿಸುವಾಗ ಒಬ್ಬ ವಿದ್ಯಾಧರಕನ್ನಿಕೆಯನ್ನೇ ಅವನು ಸ್ವಲ್ಪಕಾಲ ನೋಡುತ್ತಿದ್ದುದನ್ನು ಗಮನಿಸಿದ ಉರ್ವಶಿ ಕೋಪಗೊಂಡು ಕುಮಾರವನದೊಳಕ್ಕೆ ತಿಳಿಯದೆ ಪ್ರವೇಶಿಸಿ ಲತೆಯಾಗಿ ರೂಪಾಂತರ ಹೊಂದಿಬಿಡುತ್ತಾಳೆ. ಉರ್ವಶಿಯನ್ನು ಕಾಣದೆ ವಿರಹದುಃಖದಿಂದ ರಾಜನು ಕಾಡಿನಲ್ಲಿ ಹುಚ್ಚನಂತೆ ಅಲೆಯುತ್ತಿರುವಾಗ 'ಸಂಗಮನೀಯ' ಎಂಬ ಮಣಿಯು ಅವನಿಗೆ ಸಿಗುತ್ತದೆ. ಅದರ ಪ್ರಭಾವದಿಂದ ಲತೆಯಾಗಿದ್ದ ಉರ್ವಶಿಗೆ ಪುನಃ ಹಿಂದಿನ ರೂಪ ಬರುತ್ತದೆ.

ಒಂದು ದಿನ ಮಾಂಸದ ತುಂಡೆಂಬ ಭ್ರಮೆಯಿಂದ ಆ ಮಣಿಯನ್ನು ಒಂದು ಹದ್ದು ಎತ್ತಿಕೊಂಡು, ರಾಜನು ಬಾಣಪ್ರಯೋಗ ಮಾಡುವುದರೊಳಗೆ, ಹಾರಿಹೋಗಿಬಿಡುತ್ತದೆ. ಆದರೆ ಸ್ವಲ್ಪ ಹೊತ್ತಿನಲ್ಲೇ ಯಾರೋ ಆ ಹದ್ದನ್ನು ಬಾಣಬಿಟ್ಟು ಕೊಂದರೆಂದು ಹೇಳುತ್ತಾ ಕಿರಾತಿಯೊಬ್ಬಳು ಆ ಮಣಿಯನ್ನೂ ಬಾಣವನ್ನೂ ತಂದುಕೊಡುತ್ತಾಳೆ. ಬಾಣದ ಮೇಲೆ 'ಉರ್ವಶೀ-ಪುರೂರವರ ಮಗ ಆಯು' ಎಂಬ ಹೆಸರನ್ನು ರಾಜನು ಓದಿ ವಿಸ್ಮಿತನಾಗುತ್ತಿರುವಾಗಲೇ ತಾಪಸಿಯೊಬ್ಬಳು ಒಬ್ಬ ಬಾಲಕನೊಡನೆ ಅಲ್ಲಿಗೇ ಬರುತ್ತಾಳೆ. ಉರ್ವಶಿಗೆ ಈ ನಡುವೆ ಪುತ್ರಪ್ರಾಪ್ತಿಯಾಗಿತ್ತೆಂದೂ, ಆದರೆ ಸಂತಾನವನ್ನು ರಾಜನು ವೀಕ್ಷಿಸಿಬಿಟ್ಟರೆ ತಾನು ದೇವಲೋಕಕ್ಕೆ ಹಿಂದಿರುಗಬೇಕಾಗುತ್ತಿದ್ದುದರಿಂದ ಅವಳು ಆ ಮಗನನ್ನು ತನ್ನ ರಕ್ಷಣೆಯಲ್ಲಿಟ್ಟಿದ್ದುದಾಗಿಯೂ, ಆಶ್ರಮವೃತ್ತಿಗೆ ವಿರುದ್ಧವಾಗಿ ಅವನು ಹದ್ದನ್ನು ಹೊಡೆದು ಕೊಂದುದರಿಂದ ಉರ್ವಶಿಗೇ ಅವನನ್ನು ಒಪ್ಪಿಸಿಬಿಡಲು ಕರೆತಂದಿರುವುದಾಗಿಯೂ ತಾಪಸಿಯು ಹೇಳುತ್ತಾಳೆ. ಪುತ್ರಪ್ರಾಪ್ತಿಯಿಂದ ಮೊದಲು ಸಂತೋಷವಾದರೂ ಉರ್ವಶಿಯು ಇನ್ನು ದೇವಲೋಕಕ್ಕೆ ಹಿಂದಿರುಗುವುದು ಅನಿವಾರ್ಯವಾದುದರಿಂದ ಎಲ್ಲರಿಗೂ ದುಃಖವಾಗುತ್ತದೆ. ಆದರೆ ಇಂದ್ರನಿಗೆ ಪುರೂರವನ ಸಹಾಯ ಆಗ ಅಗತ್ಯವಾಗಿದ್ದುದರಿಂದ ಅವನನ್ನು ಪ್ರಸನ್ನನಾಗಿ ಮಾಡಲು ಉರ್ವಶಿ ಅವನೊಡನೆಯೇ ಯಾವಜ್ಜೀವವೂ ಇರಬಹುದೆಂದು ನಾರದರ ಮೂಲಕ ಹೇಳಿಕಳುಹಿಸುತ್ತಾನೆ. ನಾರದರೇ 'ಆಯು'ವಿಗೆ ಯೌವರಾಜ್ಯಾಭಿಷೇಕ ಮಾಡುತ್ತಾರೆ.

— ಇದಿಷ್ಟೂ ಕಾಳಿದಾಸನ ವಿಕ್ರಮೋರ್ವಶೀಯದ ಅಂಕಾನುಕ್ರಮ ಕಥೆ. ಇದರ ನಾಯಕನಾದ ಪುರೂರವನು ಚಂದ್ರನ ಮೊಮ್ಮಗ; ಚಂದ್ರವಂಶದ ದೊರೆಗಳಲ್ಲಿ ಮೊದಲನೆಯವನು. ಇವನು ಮರ್ತ್ಯ; ದೇವತೆಯಲ್ಲ. ನಾಯಿಕೆ

ದೇವಲೋಕದ ಅಪ್ಸರೆ, ಉರ್ವಶಿ. ಇವರಿಬ್ಬರ ಪ್ರೇಮವನ್ನು ಚಿತ್ರಿಸಬೇಕಾದರೆ ಭೂಲೋಕ ದೇವಲೋಕಗಳ ನಡುವೆ ಇರುವ ಅಂತರ ಮಾಯವಾಗಿ ಎರಡಕ್ಕೂ ನಿಕಟಸಂಬಂಧವೇರ್ಪಡಬೇಕು. ಆದ್ದರಿಂದಲೇ ಕಥೆಯಲ್ಲಿ ಚಿತ್ರರಥಾದಿಗಳನ್ನೂ ನಾರದರನ್ನೂ ಸೇರಿಸಬೇಕಾದುದು ಅನಿವಾರ್ಯ. ಪ್ರಾಚೀನ ಕಥಾವಸ್ತುವನ್ನು ನಾಟಕಕ್ಕೆ ಅಳವಡಿಸಿಕೊಳ್ಳುವಾಗ ಅತಿಮಾನುಷ ಶಕ್ತಿಯ ಪಾತ್ರಗಳ ಅವಶ್ಯಕತೆಯಿರುತ್ತದೆ. ಉರ್ವಶಿಯು ತಿರಸ್ಕರಿಣಿಯ ಸಹಾಯದಿಂದ ಅದೃಶ್ಯಳಾಗಿದ್ದುಕೊಂಡೇ ರಾಜೋದ್ಯಾನದಲ್ಲೂ ಮಣಿಹರ್ಮ್ಯದ ಮೇಲೂ ಎಲ್ಲವನ್ನೂ ಪ್ರತ್ಯಕ್ಷವಾಗಿ ಅರಿತುಕೊಳ್ಳುವುದು ಅಷ್ಟು ಅಸಹಜವಲ್ಲವೆನ್ನಬಹುದಾದರೂ ಅವಳ ಪ್ರೇಮವು ಸ್ವಾರ್ಥಪರವೆಂದು ಟೀಕಿಸಲವಕಾಶವಿದೆ. ಹೀಗೆ ಟೀಕಿಸುವಾಗ ಅವಳು ಅಪ್ಸರೆಯೆಂಬುದನ್ನೂ ಸಾಮಾನ್ಯವಾಗಿ ಅಪ್ಸರೆಯರ ಪ್ರೇಮ ಸಮಯೋಚಿತವಾದುದೆಂಬುದನ್ನೂ ತಾತ್ಕಾಲಿಕವೆಂಬುದನ್ನೂ ನೆನಪಿನಲ್ಲಿಟ್ಟುಕೊಂಡಿದ್ದರೆ ಉರ್ವಶಿಯ ಪ್ರೇಮ ಸಾಧಾರಣ ಅಪ್ಸರೆಯ ಪ್ರೇಮಕ್ಕಿಂತ ಎಷ್ಟೋ ಮೇಲಿನದೆಂಬುದು ಗೋಚರವಾದೀತು. ಪುರೂರವನಲ್ಲಿ ಅವಳಿಗೆ ಅಂತಹ ಗಾಢವಾದ ನೈಜವಾದ ಪ್ರೇಮವಿತ್ತಾದುದರಿಂದಲೇ ಅವಳು ಪುತ್ರವಾತ್ಸಲ್ಯವನ್ನೂ ದೂರಮಾಡಿ ಅವನ ಸಾನ್ನಿಧ್ಯಾಕಾಂಕ್ಷಿಣಿಯಾಗಿದ್ದುದು; ಆದರ್ಶ ಪತಿವ್ರತೆಯಂತೆ ತನ್ನ ಪತಿಯ ಸಂತೋಷಕ್ಕಾಗಿ ಸದಾ ಅವನೊಡನೆಯೇ ಇರುತ್ತಿದ್ದುದು. ತತ್ಕಾಲದಲ್ಲಿ ತನ್ನ ಮಗನ ಬಗ್ಗೆ ವಾತ್ಸಲ್ಯದೂರಳಾಗಿದ್ದುದೂ ತನ್ನ ಪತಿಗೂ ತನಗೂ ವಿರಹವೇರ್ಪಡದಿರಬೇಕೆಂಬ ಧ್ಯೇಯದಿಂದಲೇ. ವಿಮರ್ಶಕನು ಉದಾರಿಯಾಗಿದ್ದರೆ ಇಲ್ಲಿ ಉರ್ವಶಿಯ ತ್ಯಾಗಬುದ್ಧಿಯನ್ನು ಕಾಣಲವಕಾಶವಿದೆ. ಸಂಕುಚಿತಬುದ್ಧಿಯವನಾದರೆ ಉರ್ವಶಿಯಲ್ಲಿ ಸ್ವಾರ್ಥವನ್ನು ಕಾಣುತ್ತಾನೆ.

ಮಾಳವಿಕಾಗ್ನಿಮಿತ್ರದಲ್ಲಿ ಹೇಗೋ ಹಾಗೆಯೇ ವಿಕ್ರಮೋರ್ವಶೀಯದಲ್ಲೂ ಕಾಳಿದಾಸನು ನಿರೂಪಿಸಿರುವುದು ಸ್ತ್ರೀ-ಪುರುಷ ಪ್ರೇಮವೇ ಆದರೂ ಪುರುಷನಿಗಾಗಿ ಸ್ತ್ರೀಯ ಪ್ರೇಮದ ಚಿತ್ರಣಕ್ಕೇ ಪ್ರಾಧಾನ್ಯವಿದೆ. ಮಾಲವಿಕೆ ಮಾನವಿ; ಮರ್ತ್ಯಲೋಕದ ಸ್ತ್ರೀಗೆ ಸಹಜವಾದ ಲಜ್ಜಾವಿನಯಾದಿಗಳಿಂದ ಕೂಡಿ ಆತ್ಮಮರ್ಯಾದೆಯನ್ನು ಮೀರದವಳು. ಅಗ್ನಿಮಿತ್ರನಿಗಾಗಿ ಇವಳಲ್ಲಿ ಮೂಡಿ ರೂಪಿತವಾದ ಪ್ರೇಮದ ಸ್ವರೂಪ ಗಂಭೀರವಾದುದು; ಶುದ್ಧವೂ ಸಹಜವೂ ಆದುದು. ಪುರೂರವನಲ್ಲಿ ಉರ್ವಶಿಗಿದ್ದ ಪ್ರೇಮ ಇನ್ನೊಂದು



ರೀತಿಯದು. ಇವಳು ದಿವ್ಯಸ್ತ್ರೀ; ಅತಿಮಾನುಷ ಶಕ್ತಿಯುಳ್ಳವಳು. ಇಂದ್ರನಿಗೆ ಅಧೀನಳೆಂಬುದೊಂದನ್ನು ಬಿಟ್ಟರೆ ಇತರ ವಿಚಾರಗಳಲ್ಲಿ ಸ್ವತಂತ್ರೆ. ಪುರೂರವನನ್ನು ಮೋಹಿಸಿ ಅವನನ್ನು ತಾನೇ ಅರಸಿಕೊಂಡು ಹೋಗುವುದು ಅವಳಿಗೆ ಅಸಹಜವಲ್ಲ. ಅಪ್ಸರೆಯ ನಡವಳಿಕೆಯೇ ಅಂತಹುದು. ಆದರೆ ಅವಳು ಮರ್ತ್ಯನೊಬ್ಬನನ್ನು ಕೂಡಿ ಅವನೊಡನೆ ಸಂಸಾರೀಕಳಾಗಿ ಬಾಳುವಾಗ ಭೂಲೋಕದ ಕಟ್ಟುಪಾಡುಗಳಿಗೆ ಬದ್ಧಳಾಗಿ, 'ಪತಿವ್ರತೆ'ಯಾಗಿ, ಇತರ ಎಲ್ಲ ಅಭಿಮಾನ, ವಾತ್ಸಲ್ಯಾದಿಗಳನ್ನೂ ದೂರಮಾಡಿಬಿಡುತ್ತಾಳೆ. ಇದೊಂದು ಬಗೆಯ 'ದಿವ್ಯಪ್ರೇಮ'. ಈ ಎರಡು ವಿಧ ಪ್ರೇಮಗಳ ಜತೆ ಜತೆಯಲ್ಲೇ ಧಾರಿಣಿ ಮತ್ತು ಔಶೀನರಿ ಈ ಇಬ್ಬರಲ್ಲೂ ಇರುವ, ಸುಲಭವಾಗಿ ಎಲ್ಲರ ಮೆಚ್ಚುಗೆಯನ್ನೂ ಗಳಿಸುವ, ಗಾರ್ಹಸ್ಥ್ಯ ಅಥವಾ ಸಾಧ್ವೀಪ್ರೇಮ ಮತ್ತೊಂದು ರೀತಿಯದು. ಶಕುಂತಲೆಯಲ್ಲಿ ಕಾಳಿದಾಸನು ತೋರಿಸುವುದು ನಾಲ್ಕನೆಯದೊಂದು ರೀತಿಯ ಅಸಾಧಾರಣಪ್ರೇಮವನ್ನು. ಇದು ಈ ವರೆಗೆ ಹೇಳಿದ ಮೂರು ವಿಧ ಪ್ರೇಮಕ್ಕಿಂತ ಮೇಲಿನದು. ಇದರಲ್ಲಿ ಸ್ವಾರ್ಥದ ಲವಲೇಶವೂ ಇಲ್ಲ. ದೈಹಿಕ ಸೌಖ್ಯದ ಅಪೇಕ್ಷೆಯ ಹಿನ್ನೆಲೆ ಇಲ್ಲ. ಇದೊಂದು ರೀತಿಯ ಉದಾತ್ತವೂ ಅನ್ಯೋನ್ಯವೂ ಸಮಾನವೂ ಆದ ಪ್ರೇಮ; ಅಮರಗಳಾದ ಎರಡು ಸಮ್ಮಿಳಿತ ಆತ್ಮಗಳ ಅನವರತ ಪ್ರೇಮ.

ವಿಕ್ರಮೋರ್ವಶೀಯದಲ್ಲಿ ಎರಡು ಮುಖ್ಯ ಪಾಠಭೇದಗಳಿವೆ. ಒಂದು ರಂಗನಾಥ ವ್ಯಾಖ್ಯಾನಮಾಡಿರುವ ಔತ್ತರೇಯ ಪಾಠ. ಇದರ ನಾಲ್ಕನೆಯ ಅಂಕದಲ್ಲಿ ಪ್ರಾಕೃತಭಾಷೆಯ ಗದ್ಯ-ಪದ್ಯ ಭಾಗಗಳು ಹೇರಳವಾಗಿವೆ. ನಾಯಕನೇ ಪ್ರಾಕೃತದಲ್ಲೂ ಸಂಸ್ಕೃತದಲ್ಲೂ ಸರದಿಯ ಮೇಲೆ ಮಾತಾಡುತ್ತಾನೆ. ಇದೆಲ್ಲಾ ಏಕಪಾತ್ರಭಾಷಣರೂಪದಲ್ಲಿ ಉನ್ಮತ್ತನಾದ ನಾಯಕನು ಆಡಿದಂತಿದೆ. ಈ ನಾಟಕದ ಮತ್ತೊಬ್ಬ ವ್ಯಾಖ್ಯಾತನಾದ ಕಾಟಯವೇಮನು ಈ ಪ್ರಾಕೃತಭಾಗವೊಂದನ್ನೂ ಪಾಠಾಂತರವನ್ನಾಗಿಯೂ ಹೇಳಿಲ್ಲ. ಈತನು ಉಪಯೋಗಿಸಿಕೊಂಡಿರುವುದು ದಾಕ್ಷಿಣಾತ್ಯಪಾಠ. ಈ ಕಾಟಯವೇಮನು ಕೊಂಡವೀಡುವಿನ ರೆಡ್ಡಿರಾಜನಾದ ಕುಮಾರಗಿರಿಯ (ಕ್ರಿ.ಶ. ೧೪೦೮) ಮಂತ್ರಿಯಾಗಿದ್ದವನು. ಕಾಳಿದಾಸನ ಮೂರು ನಾಟಕಗಳಿಗೂ ಅಮರುಶತಕಕ್ಕೂ ಈತ ವ್ಯಾಖ್ಯಾನ ಬರೆದಿದ್ದಾನೆ.

ವಿಕ್ರಮೋರ್ವಶೀಯದ ನಾಲ್ಕನೆಯ ಅಂಕ ಭಾವಗೀತಾತ್ಮಕವಾಗಿಯೇ ಇದೆ. ಅಲ್ಲಿನ ಕೆಲವು ಭಾವಗಳಂತು ಜೀವಕಳೆ ತುಂಬಿಕೊಂಡು ತುಂಬ ಮನೋಹರಪಾಗಿವೆ ( iv 66, 73 ನೋಡಿ ). ನಾವು ಎಂದಿಗೂ [21]ಮರೆಯಲಾಗದಂತಹ ಮಾತುಗಳು ಈ ನಾಟಕದಲ್ಲೂ ಹೇರಳವಾಗಿವೆ. ಇಲ್ಲಿನ ತಿಳಿಹಾಸ್ಯಗಳು ಕಾಳಿದಾಸನ ಸರಸ ಚಿತ್ತವೃತ್ತಿಯನ್ನು ವ್ಯಕ್ತಪಡಿಸುತ್ತವೆ. ‘ನಾಸ್ತಿ ವಿಧೇರಲಂಘನೀಯಂ’ ‘ನಾಸ್ತ್ಯಗತಿಃ ಮನೋರಥಾನಾಂ’ ‘ಮಹದಪಿ ಪರದುಃಖಂ ಶೀತಲಂ ಸಮ್ಯಗಾಹುಃ’ ‘ಯದೇವೋಪನತಂ ದುಃಖಾತ್ ಸುಖಂ ತದ್ರಸವತ್ತರಂ’ ಮುಂತಾದ ಅನುಭವೋಕ್ತಿಗಳು ನಾಟಕದ ತುಂಬ ಇವೆ.

**ಅಭಿಜ್ಞಾನಶಾಕುಂತಲಂ**— ಸಂಸ್ಕೃತನಾಟಕಗಳಲ್ಲೆಲ್ಲಾ ಅತ್ಯುತ್ತಮವೆಂದು ಪರಿಗಣಿತವಾಗಿರುವ ಅಭಿಜ್ಞಾನಶಾಕುಂತಲವು ಶೃಂಗಾರರಸಪ್ರಧಾನವಾದ ಏಳು ಅಂಕಗಳ ನಾಟಕ. ಚಂದ್ರವಂಶದಲ್ಲಿ ಪುರೂರವನ ಪೀಳಿಗೆಯಲ್ಲೇ ರಾಜನಾಗಿದ್ದ ದುಷ್ಯಂತ ಮತ್ತು ವಿಶ್ವಾಮಿತ್ರ-ಮೇನಕೆಯರ ಮಗಳಾಗಿ ಜನಿಸಿ ಕಣ್ವಾಶ್ರಮದಲ್ಲಿ ಋಷಿಕನ್ಯೆಯಾಗಿ ಬೆಳೆದ ಶಕುಂತಲೆ— ಈ ಇಬ್ಬರ ಪ್ರೇಮದ ಕಥೆಯೇ ಈ ನಾಟಕದ ವಸ್ತು. ಶಕುಂತಲಾ-ದುಷ್ಯಂತರ ಕಥೆ ಮಹಾಭಾರತದ ಆದಿಪರ್ವದಲ್ಲಿ (ಅಧ್ಯಾಯ ೬೯-೧೦೦) ಶಕುಂತಲೋಪಾಖ್ಯಾನ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪಾದ್ಮಪುರಾಣದ ಸ್ವರ್ಗಖಂಡದಲ್ಲೂ ಬರುತ್ತದೆ. ಆದರೆ ಪಾದ್ಮಪುರಾಣದಲ್ಲಿ ಬರುವ ಈ ಉಪಾಖ್ಯಾನವೂ ರಾಮೋಪಾಖ್ಯಾನವೂ ಕಾಳಿದಾಸನ ಅಭಿಜ್ಞಾನಶಾಕುಂತಲ ಮತ್ತು ರಘುವಂಶಗಳಲ್ಲಿರುವಂತೆಯೇ ಇರುವುದರಿಂದ ಕಾಳಿದಾಸನಿಗೆ ಆಧಾರವಾಗಿದ್ದುದು ಮಹಾಭಾರತದ ಉಪಾಖ್ಯಾನವೇ ಎಂದು ಎಲ್ಲರೂ ಒಪ್ಪುತ್ತಾರೆ. ಅದನ್ನು ಹೀಗೆ ಸಂಗ್ರಹಿಸಬಹುದು.

ರಾಜಾ ದುಷ್ಯಂತನು ಒಂದು ಸಲ ಬೇಟೆಗೆ ಹೋಗಿದ್ದಾಗ ಒಬ್ಬಂಟಿಗನಾಗಿ ಕಾಶ್ಯಪರ ಆಶ್ರಮವನ್ನು ಪ್ರವೇಶಿಸುತ್ತಾನೆ. ಆಗ ಕಾಶ್ಯಪರು ಹಣ್ಣುಹಂಪಲುಗಳನ್ನು ತರಲು

21 ನಿರ್ವಾಣಾಯ ತರುಚ್ಛಾಯಾ ತಪ್ತಸ್ಯ ಹಿ ವಿಶೇಷತಃ iii 171; ಏಕಂ ಕೃತಿ ಶರೀರೇಽಸ್ಮಿನ್ ಶೇಷಮಂಗಂ ಭುವೋ ಭರಃ iii 84

22 (೧) ಛಿನ್ನಹಸ್ತೇ ಮತ್ಸ್ಯೇ ಪಲಾಯಿತೇ ಧೀವರೋ ಭಣತಿ —‘ಧರ್ಮೋ ಮೇ ಭವಿಷ್ಯತಿ’ ಇತಿ iii 128 (೨) ಕಿಂ ವಾ ಸ್ವರ್ಗೇ ಸ್ಮರ್ತವ್ಯಂ ? ನ ವಾ ಅಶ್ಯತೇ, ನ ವಾ ಪೀಯತೇ । ಕೇವಲಮನಿಮಿಷೈರ್ನಯನೈರ್ಮೀನಾ ವಿಡಂಬ್ಯಂತೇ iii 157 (೩) ನನು ಪಶ್ಯ, ಆಶ್ವಾಸಿತಃ ಪಿಶಾಚೋಽಪಿ ಭೋಜನೇನ ii 192



ಹೋಗಿದ್ದುದರಿಂದ ಅವರ ಸಾಕುಮಗಳು ಶಕುಂತಲೆಯೇ ರಾಜನನ್ನು ಆದರಿಸಿ ಸತ್ಕರಿಸುತ್ತಾಳೆ. ರಾಜನ ಪ್ರಶ್ನೆಗಳಿಗೆ ಉತ್ತರವಾಗಿ ತಾನು ವಿಶ್ವಾಮಿತ್ರ-ಮೇನಕೆಯರ ಮಗಳೆಂದೂ, ಜನಿಸಿದ ಕೂಡಲೇ ತಾಯಿಯು ತನ್ನನ್ನು ತೊರೆದುಬಿಟ್ಟಾಗ ‘ಶಕುಂತ’ (ಪಕ್ಷಿ)ಗಳು ರಕ್ಷಿಸಿದುದರಿಂದ ಆ ಬಳಿಕ ತಮ್ಮ ರಕ್ಷಣೆಗೆ ತನ್ನನ್ನು ತೆಗೆದುಕೊಂಡ ಕಾಶ್ಯಪರು ತನ್ನನ್ನು ಶಕುಂತಲಾ ಎಂದೇ ಕರೆದರೆಂದೂ ತಿಳಿಸುತ್ತಾಳೆ. ರಾಜನು ಅವಳ ರೂಪ ಲಾವಣ್ಯಗಳಿಗೆ ಮನಸೋತು, ಕ್ಷತ್ರಿಯರಿಗೆ ಗಾಂಧರ್ವವಿವಾಹ ವಿಹಿತವಾದುದೆಂದು ಹೇಳಿ, ಅವಳ ಅಪೇಕ್ಷೆಯಂತೆ ಅವಳ ಮಗನನ್ನೇ ಯುವರಾಜನನ್ನಾಗಿ ಮಾಡುವುದಾಗಿ ಒಪ್ಪಿ, ಗಾಂಧರ್ವರೀತಿಯಲ್ಲಿ ಅವಳೊಡನೆ ಸಂಬಂಧ ಬೆಳಸಿ, ಕಾಶ್ಯಪರಿಗೆ ಈ ವಿಚಾರ ತಿಳಿದರೆ ಏನು ಮಾಡುತ್ತಾರೋ ಎಂದು ಹೆದರಿ, ರಾಜೋಚಿತವಾದ ರೀತಿಯಲ್ಲಿ ಶಕುಂತಲೆಯನ್ನು ಅರಮನೆಗೆ ಕರೆಯಿಸಿಕೊಳ್ಳುವುದಾಗಿ ಅವಳಿಗೆ ಆಶ್ವಾಸನೆಯಿತ್ತು ಹೊರಟು ಹೋಗುತ್ತಾನೆ. ಕಾಶ್ಯಪರು ಆಶ್ರಮಕ್ಕೆ ಹಿಂದಿರುಗಿದ ಮೇಲೆ ತಮ್ಮ ಜ್ಞಾನದೃಷ್ಟಿಯಿಂದ ಅಲ್ಲಿ ನಡೆದಿದ್ದುದನ್ನೆಲ್ಲಾ ಕಂಡುಕೊಂಡು ‘ಸಾರ್ವಭೌಮಪ್ರಸವಿನಿಯಾಗು’ ಎಂದು ಶಕುಂಶಲೆಯನ್ನು ಹರಸುತ್ತಾರೆ.

ಇತ್ತ ರಾಜಧಾನಿಗೆ ಹಿಂದಿರುಗಿದ ದುಷ್ಯಂತನು ಶಕುಂತಲೆಯನ್ನು ಕರೆಸಿಕೊಳ್ಳುವುದೇ ಇಲ್ಲ. ಮೂರು ವರ್ಷಗಳ ನಂತರ ಕಾಶ್ಯಪರ ಆಶ್ರಮದಲ್ಲೇ ಶಕುಂತಲೆಗೆ ಪುತ್ರ ಜನನವಾಗುತ್ತದೆ. ಆ ಕುಮಾರನೇ ಮುಂದೆ ಸಾರ್ವಭೌಮನಾಗುವುದಾಗಿ ಇಂದ್ರನು ಘೋಷಿಸುತ್ತಾನೆ. ಇದು ತಿಳಿದರೂ ಋಷಿಭಯದಿಂದ ರಾಜನು ತಟಸ್ಥನಾಗಿಯೇ ಇರುತ್ತಾನೆ. ತನಗೆ ಆರು ವರ್ಷಗಳು ತುಂಬುವಷ್ಟರಲ್ಲೇ ಆ ಕುಮಾರನು ಶಾಂತವಾದ ಆಶ್ರಮಕ್ಕೆ ವಿರುದ್ಧವಾದ ವೀರಕೃತ್ಯಗಳಲ್ಲಿ ಆಸಕ್ತನಾದುದರಿಂದ ಅವನಿಗೆ ಸರ್ವದಮನ ಎಂದು ಹೆಸರಾಗುತ್ತದೆ. ಹೀಗಿರುವಾಗ ಒಂದು ದಿನ, ಗೃಹಿಣಿಯಾದವಳು ತೌರುಮನೆಯಲ್ಲಿ ದೀರ್ಘಕಾಲವಿರಬಾರದೆಂದು ಹೇಳಿ, ಕಾಶ್ಯಪರು ಶಕುಂತಲೆಯನ್ನು ಮಗನೊಡನೆ ದುಷ್ಯಂತನ ಅರಮನೆಗೆ ಋಷಿಪರಿವಾರದೊಡನೆ ಕಳುಹಿಸಿಕೊಡುತ್ತಾರೆ. ಈ ಭಾಗ ತುಂಬ ಕರುಣಾಜನಕವಾಗಿದೆ. ನಗರದಲ್ಲಿನ ಜನರು ಶಕುಂತಲೆಯನ್ನೂ ಅವಳ ಮಗನನ್ನೂ ಇಂದ್ರನ ಹೆಂಡತಿ ಮತ್ತು ಕುಮಾರನೆಂದು ಆದರಿಸಿದರೂ ವಿಚಿತ್ರವಾಗಿ ಕಂಡ ತಪಸ್ವಿಗಳನ್ನು ಗೇಲಿಮಾಡುತ್ತಾರೆ. ಇದರಿಂದ ಮನನೊಂದ ತಪಸ್ವಿಗಳು ಅವರಿಬ್ಬರನ್ನೂ ನಗರದಲ್ಲಿ ಇದ್ದಕ್ಕಿದ್ದಂತೆ ಬಿಟ್ಟುಬಿಟ್ಟು ಅರಣ್ಯಕ್ಕೆ ಹಿಂದಿರುಗುತ್ತಾರೆ.

ಶಕುಂತಲೆ ಬಹಳ ಕಷ್ಟದಿಂದ ರಾಜನ ಆಸ್ಥಾನಕ್ಕೆ ಬರುತ್ತಾಳೆ. ಸರ್ವದಮನನಿಗೂ ರಾಜನಿಗೂ ಇರುವ ಹೋಲಿಕೆಯನ್ನು ಕಂಡು ಎಲ್ಲರಿಗೂ ವಿಸ್ಮಯವಾಗುತ್ತದೆ. ಶಕುಂತಲೆಯು ಹಿಂದಿನದನ್ನೆಲ್ಲಾ ರಾಜನ ನೆನಪಿಗೆ ತರುತ್ತಾಳೆ. ಅವಳನ್ನು ಕಂಡೊಡನೆಯೇ ರಾಜನಿಗೂ ಎಲ್ಲವೂ ಸ್ಮೃತಿಗೆ ಬರುತ್ತದೆ. ಆದರೆ ಏನೂ ತಿಳಿಯದವನಂತೆ ನಟಿಸುತ್ತಾ ಶಕುಂತಲೆಯನ್ನು ನಿರಾಕರಿಸುತ್ತಾನೆ. ಶಕುಂತಲೆಯೂ ನಿಃಸಹಾಯಕಳಾಗಿ ಇನ್ನೇನು ಹೊರಡಬೇಕೆನ್ನುವುದರಲ್ಲಿ ಶಕುಂತಲೆಯು ದುಷ್ಯಂತನ ಧರ್ಮಪತ್ನಿಯೆಂದೂ ಆ ಕುಮಾರನು ದುಷ್ಯಂತನ ಮಗನೇ ಎಂದೂ ರಾಜನು ಅವರನ್ನು ಪರಿಗ್ರಹಿಸಬೇಕೆಂದೂ ಅಶರೀರವಾಣಿಯಾಗುತ್ತದೆ. ಲೋಕಾಪವಾದಕ್ಕೆ ಹೆದರಿ ತಾನು ಅವರನ್ನು ನಿರಾಕರಿಸಿದು

ದಾಗಿ ದುಷ್ಯಂತನು ತಿಳಿಸಿ, ಶಕುಂತಲೆಯನ್ನು ಸಮಾಧಾನಪಡಿಸಿ ಅವಳನ್ನು ಪಟ್ಟಮಹಿಷಿಯನ್ನಾಗಿಯೂ ಕುಮಾರನನ್ನು ಯುವರಾಜನನ್ನಾಗಿಯೂ ಅಂಗೀಕರಿಸುತ್ತಾನೆ.

ಇದಿಷ್ಟು ಪೌರಾಣಿಕ ಶಕುಂತಲೋಪಾಖ್ಯಾನ; ದುಷ್ಯಂತ, ಶಕುಂತಲೆ, ಕಾಶ್ಯಪರು, ಸರ್ವದಮನ—ಈ ನಾಲ್ಕೇ ಜನರಿಗೆ ಸಂಬಂಧಿಸಿದ ಕಥೆ. ಕಾಳಿದಾಸನ ನಾಟಕದಲ್ಲಿ ಪಾತ್ರಗಳೂ ಹೆಚ್ಚು, ಕಥೆಯೂ ವಿಸ್ತಾರವಾಗಿ, ಸ್ವಾರಸ್ಯವಾಗಿ, ನೈಜವಾಗಿ ಬೆಳೆದು ಸಾಗುತ್ತದೆ. ಶಕುಂತಲೆಯ ಸಖಿಯರಾದ ಪ್ರಿಯಂವದೆ-ಅನಸೂಯೆ, ಋಷಿಕುಮಾರಕರಾದ ಶಾರ್ಙ್ಗರವ-ಶಾರದ್ವತರು, ಗೌತಮಿ, ವಿದೂಷಕ ಇವರೆಲ್ಲರಲ್ಲೂ ಅವರವರದೇ ಆದ ವ್ಯಕ್ತಿತ್ವವಿದೆ. ವಸ್ತುರಚನೆಯಲ್ಲಿ ಇವರೆಲ್ಲರದೂ ತುಂಬ ಉಪಯುಕ್ತವಾದ ಪಾತ್ರ; ಈ ಪಾತ್ರವೈವಿಧ್ಯದಿಂದ ನಾಟಕಕ್ಕೆ ಹೊಸದೊಂದು ಜೀವಕಳೆಯೇ ಏರ್ಪಟ್ಟಿದೆಯೆಂದು ಹೇಳಬಹುದು

ದುಷ್ಯಂತ-ಶಕುಂತಲೆಯರ ಪ್ರಥಮ ಸಮಾಗಮ, ಗಾಂಧರ್ವವಿವಾಹ, ಅಗಲಿಕೆ, ಪುನಸ್ಸಮಾಗಮ—ಈ ನಾಲ್ಕು ಘಟನೆಗಳನ್ನು ಬಿಟ್ಟು ಉಳಿದುದೆಲ್ಲವೂ ನಾಟಕದಲ್ಲಿ ಹೊಸದೇ. ಈ ನಾಲ್ಕು ಘಟನೆಗಳಿಗೆ ಸಂಬಂಧಿಸಿದ ವಿವರಗಳೂ ಮೂಲದಿಂದ ಭಿನ್ನವಾದುವೇ. ಅಸಂಭವನೀಯವೆನ್ನಬಹುದಾದ ಅಂಶವೇ ಇಲ್ಲದಂತೆ, ಒಂದೊಂದೂ ಆಕಸ್ಮಿಕವಾಗಿ ನಮ್ಮ ಜೀವನದಲ್ಲಿ ಸಂಭವಿಸುವಂತೆಯೇ ಒದಗಿ ಬಂತೆಂಬಂತೆ ಕಾಳಿದಾಸನು ಈ ನಾಟಕದ ವಸ್ತುವನ್ನು ಶ್ಲಾಘ್ಯರೀತಿಯಲ್ಲಿ ರೂಪಿಸಿದ್ದಾನೆ. ದುಷ್ಯಂತನು ಕಣ್ವಾಶ್ರಮಕ್ಕೆ ಪ್ರವೇಶಿಸಲು ಕಾರಣವಾದ ಮೃಗಮೃಗಯೂ, ಅಲ್ಲಿ ಋಷಿಕನ್ಯೆಯರ ದರ್ಶನ, ತಪಸ್ವಿಗಳ ಯಜ್ಞರಕ್ಷಣೆಗಾಗಿ ಸ್ವಲ್ಪ ದಿವಸ ಆಶ್ರಮದಲ್ಲಿ ರಾಜನೊಬ್ಬನೇ ನಿಲ್ಲಬೇಕಾಗುವುದು, ಅದರಿಂದೇರ್ಪಟ್ಟ ನಿರ್ಬಾಧವಾದ ಶಕುಂತಲಾ ಸಹವಾಸ, ತತ್ಫಲವಾದ ಅವರ ಗಾಂಧರ್ವವಿವಾಹ,—ಒಂದೊಂದೂ ಕಾರ್ಯಕಾರಣ ಭಾವದಿಂದ ಹೆಣೆದುಕೊಂಡಂತೆ, ಕ್ರಮಕ್ರಮವಾಗಿ, ಪರಿಚಯ ಪ್ರಣಯವಾಗಿ ವಿವಾಹದಲ್ಲಿ ಫಲಿಸಿರುವುದರಲ್ಲಿ ಸ್ವಾಭಾವಿಕತೆಯಿದೆ. ಮುಂದೆಯೂ ಹಾಗೆಯೇ. ರಾಜಧಾನಿಗೆ ಹಿಂದಿರುಗುವಾಗ ದುಷ್ಯಂತನು ಶಕುಂತಲೆಗೆ ಸ್ವನಾಮಾಂಕಿತ ಅಂಗುಲೀಯಕವನ್ನು ಕೊಟ್ಟು ಅದರಲ್ಲಿ ಕೆತ್ತಿದ ಮೂರು ಅಕ್ಷರಗಳನ್ನು ದಿನವೂ ಒಂದೊಂದರಂತೆ ಎಣಿಸುತ್ತ ಮೂರು ದಿನ ಕಳೆಯುವುದರೊಳಗೆ ಅವಳನ್ನು ರಾಜಧಾನಿಗೆ ಕರೆಯಿಸಿಕೊಳ್ಳುವುದಾಗಿ ನೀಡಿದ ಆಶ್ವಾಸನೆ, ಹೀಗೆ ಅಗಲಿದ್ದ



ಶಕುಂತಲೆಯ ಅನ್ಯಮನಸ್ಕತೆಯ ಕಾಲದಲ್ಲಿ ದೂರ್ವಾಸರ ಆಗಮನ, ಅವರ ಶಾಪ, ಸಖಿಯರಿಂದ ದೂರ್ವಾಸರ ಪ್ರಸಾದನ, ಕಣ್ವರು ದೂರಪ್ರವಾಸದಿಂದ ಹಿಂದಿರುಗಿದಮೇಲೆ ಶಕುಂತಲೆಯ ವೃತ್ತಾಂತವನ್ನೆಲ್ಲಾ ಅರಿಯುವ ಬಗೆ, ಪತಿಗೃಹಕ್ಕೆ ಅವಳನ್ನು ಕಳುಹಿಸಿಕೊಡುವ ರೀತಿ, ದಾರಿಯಲ್ಲಿ ಅಪ್ಸರಸ್ತೀರ್ಥದಲ್ಲಿ ರಾಜಾಂಗುಳೀಯಕ ಕಳೆದುಹೋಗುವಿಕೆ, ರಾಜನ ವಿಸ್ಮೃತಿ, ಅವನ ಆಸ್ಥಾನದಲ್ಲಿ ಅವಳ ಪ್ರತ್ಯಾಖ್ಯಾನ, ಅವಳ ಅಂತರ್ಧಾನ, ರಾಜಾಂಗುಳೀಯಕವು ರಾಜನಲ್ಲಿಗೇ ತಿರುಗಿ ಬರುವುದು, ರಾಜನ ಸ್ಮೃತಿಲಾಭ, ವಿರಹದುಃಖ, ಪರಿತಾಪ, ಕಶ್ಯಪಾಶ್ರಮದಲ್ಲಿ ಸರ್ವದಮನನ ದರ್ಶನ, ಶಕುಂತಲೆಯೊಡನೆ ಪುನರ್ಮಿಲನ—ಎಲ್ಲವೂ ಸಹಜವಾಗಿ, ಕಲ್ಪಿತವೆಂಬ ಭಾವನೆಗೂ ಅವಕಾಶವಿಲ್ಲದ ರೀತಿಯಲ್ಲಿ, ಮುಂದುವರಿದು ಪರ್ಯವಸಿತವಾಗುತ್ತದೆ. ನಾಟಕದ ಮೊದಲಿನಲ್ಲಿ ನಾಯಕ-ನಾಯಿಕೆಯರ ಪ್ರಥಮಸಮಾಗಮ ಹೇಗೋ ಹಾಗೆಯೇ ಕೊನೆಯ ಪುನರ್ಮಿಲನದಲ್ಲೂ ವಿಧಿವಿಲಾಸದ ಪ್ರಾಬಲ್ಯ ಎದ್ದು ಕಾಣುತ್ತದೆ. ಅವರ ಪುನರ್ಮಿಲನದ ಸನ್ನಿವೇಶವೊಂದೇ ಸಾಕು ಕಾಳಿದಾಸನ ಸಂವಿಧಾನಕೌಶಲವನ್ನು ಮನಗಾಣುವುದಕ್ಕೆ. ಇಂದ್ರನಿಂದ ಬಹುಮಾನಿತನಾಗಿ ದುಷ್ಯಂತನು ಭೂಲೋಕಕ್ಕೆ ಇಳಿದುಬರುವಾಗ [23]ಹೇಮಕೂಟ ಕಾಣಿಸಲು ಕಶ್ಯಪರನ್ನು ನಮಸ್ಕರಿಸಬೇಕೆಂಬ ಧರ್ಮಬುದ್ಧಿಯಿಂದ ಆ ತಪೋವನವನ್ನವನು ಪ್ರವೇಶಿಸುತ್ತಾನೆ. ಅಲ್ಲಿ ಸಿಂಹದ ಮರಿಯೊಂದಿಗೆ ಆಟವಾಡುತ್ತಿದ್ದ ಬಾಲಕನೊಬ್ಬನನ್ನು ಕಂಡು ಪುತ್ರವಾತ್ಸಲ್ಯದಿಂದ ಬೆರಗಾಗುತ್ತಾನೆ. ಸ್ವಲ್ಪದರೊಳಗೇ ಅವನು ಋಷಿಕುಮಾರನಲ್ಲವೆಂದೂ, ಪುರುಕುಲಸಂಜಾತನೆಂದೂ, ಅವನ ತಾಯಿ ಅಪ್ಸರಸ್ತ್ರೀಯ ಮಗಳೆಂದೂ, ತಂದೆ ಧರ್ಮಪತ್ನಿಯನ್ನು ತ್ಯಜಿಸಿದವನೆಂದೂ ತಿಳಿದುಬರುತ್ತದೆ. ತಾಪಸಿಯೊಬ್ಬಳು 'ಶಕುಂತಲಾವಣ್ಯಂ ಪಶ್ಯ' ಎಂದರೆ 'ತಾಯಿ ಎಲ್ಲಿ' ಎಂದು ಕುಮಾರನು ಕೇಳುತ್ತಾನೆ. ದುಷ್ಯಂತನಿಗೆ ಆ ಕುಮಾರನಲ್ಲಿ ಆತ್ಮೀಯಭಾವನೆ ಹೀಗೆ ಕ್ರಮವಾಗಿ ತಲೆದೋರುತ್ತದೆ. ತನಗೂ ಅವನಿಗೂ ಇರುವ ಹೋಲಿಕೆಯ ಅರಿವೂ ಆಗುತ್ತದೆ. ಅವನ ಕೈಗೆ ಕಟ್ಟಿದ ರಕ್ಷಾಯಂತ್ರ ಕೆಳಗೆ ಬಿದ್ದಾಗ ಅದನ್ನು ದುಷ್ಯಂತ ಎತ್ತಿಕೊಂಡರೂ ಅದು ಹಾವಾಗಿ ಕಚ್ಚುವು

---

23 ಕಾಳಿದಾಸನಿಗೆ ಹೇಮಕೂಟದ ಮೇಲೆ ವಿಶೇಷ ಅಭಿಮಾನವಿತ್ತೆಂದು ತೋರುತ್ತದೆ. ವಿಕ್ರಮೋರ್ವಶೀಯದಲ್ಲೂ ಈ ಹೇಮಕೂಟದ ಪ್ರಸ್ತಾಪವಿದೆ.

ದಿಲ್ಲ. ಅದರಿಂದ ಅಲ್ಲಿದ್ದವರಿಗೂ 'ಈತನೇ ಕುಮಾರನ ತಂದೆಯೋ ?' ಎಂಬ ಸಂದೇಹಕ್ಕೂ ಅವಕಾಶವಾಗುತ್ತದೆ. ದುಷ್ಯಂತನು ಅವನನ್ನು 'ವತ್ಸ' ಎಂದರೆ 'ನನ್ನ ತಂದೆ ದುಷ್ಯಂತ, ನೀನು ಯಾರು' ಎಂದು ಕೇಳುತ್ತಾನೆ. ಆಗ ಏಕವೇಣೀಧರೆಯಾದ ಶಕುಂತಲೆ ಅಲ್ಲಿಗೇ ಬರುತ್ತಾಳೆ. ಹೀಗೆ ಕ್ರಮಕ್ರಮವಾಗಿ ಸುಂದರವಾದೊಂದು ಸನ್ನಿವೇಶದಲ್ಲಿ, ಕಶ್ಯಪರ ಆಶ್ರಮದ ಪುನೀತವಾದ ವಾತಾವರಣದಲ್ಲಿ, ಅವರಿಬ್ಬರ ಅನಿರೀಕ್ಷಿತವೂ ಸುಖಪರ್ಯವಸಾಯಿಯೂ ಆದ ಪುನರ್ಮಿಲನವನ್ನು ಕಾಳಿದಾಸ ಚಿತ್ರಿಸಿರುವುದರಲ್ಲಿ ಕೌಶಲವಿದೆ, ಔಚಿತ್ಯವಿದೆ. ಪ್ರಥಮ ಮಿಲನವು ಕಾಶ್ಯಪ (ಕಣ್ವ)ರ ಆಶ್ರಮದಲ್ಲಿ, ಕಾಶ್ಯಪರು ಅಲ್ಲಿಲ್ಲದಾಗ, ಅವರ ಅನುಮತಿಯಿಲ್ಲದೆ, ಆಗಿ ಅದು ಎಷ್ಟೋ ಕಷ್ಟನಷ್ಟಗಳಿಗೆಡೆಕೊಟ್ಟಿತ್ತು. ಆದರೆ ಈಗ ಕಶ್ಯಪ (ಮಾರೀಚ)ರ ಆಶ್ರಮದಲ್ಲಿ, ಅವರ ಸಮ್ಮುಖದಲ್ಲಿ, ಅವರ ಆಶೀರ್ವಾದದೊಡನೆ ಪುನರ್ಮಿಲನವಾಗುವುದರಿಂದ ಮುಂದೆ ಸುಖಸಂತೋಷಗಳೇ.

ಶಾಕುಂತಲ ನಾಟಕದಲ್ಲಿ ನಾಯಕನಿಗಿಂತ ನಾಯಿಕೆಗೇ ಹೆಚ್ಚು ಪ್ರಾಧಾನ್ಯ. ನಾಟಕ ಆರಂಭವಾಗುವುದೂ, ಸಾಗುವುದೂ, ಮುಗಿಯುವುದೂ ಎಲ್ಲವೂ ಶಕುಂತಲೆಯಿಂದಲೇ. ನಾಯಕನಾದ ದುಷ್ಯಂತ ಎಲ್ಲ ರಾಜರಂತೆಯೇ ಧೀರೋದಾತ್ತ, ಧರ್ಮಭೀರು, ಸುಗುಣಿ, ಕರ್ತವ್ಯನಿಷ್ಠ. ಶಕುಂತಲೆ ಮಾತ್ರ ಇತರ ನಾಯಿಕೆಯರಂತಲ್ಲ. ಈಕೆಯಲ್ಲಿ ಅಸಾಧಾರಣ ವ್ಯಕ್ತಿತ್ವವಿದೆ. ಕ್ಷತ್ರಿಯನಾದ ವಿಶ್ವಾಮಿತ್ರನ ಮಗಳಾಗಿ ಇವಳು ಕ್ಷಾತ್ರವನ್ನು ಮೈಗೂಡಿಸಿಕೊಂಡಿದ್ದಾಳೆ; ಆದರೆ ಅದನ್ನು ಯಾವಾಗಲೂ ಉಪಯೋಗಿಸುವುದಿಲ್ಲ. ರಾಜನು ತನ್ನನ್ನು ಪರಿತ್ಯಾಗಮಾಡಿಬಿಟ್ಟಾಗ ಮಾತ್ರ ಕ್ಷತ್ರಿಯನ, ಅದೂ ವಿಶ್ವಾಮಿತ್ರನ ಮಗಳಂತೆಯೇ ಮಾತಾಡಿ ವ್ಯವಹರಿಸುತ್ತಾಳೆ. ಅಪ್ಸರೆಯ ಮಗಳಾದುದರಿಂದ ತನ್ನ ಮುಗ್ಧಾವಸ್ಥೆಯಲ್ಲಿ ದುಷ್ಯಂತನ ವ್ಯಾಮೋಹಕ್ಕೊಳಗಾಗುತ್ತಾಳಾದರೂ ಕಣ್ವರ ಪರಮಪವಿತ್ರವಾದ ಆಶ್ರಮದಲ್ಲಿ ಬೆಳೆದು ಯುಕ್ತಾಯುಕ್ತ ವಿವೇಕ, ಧರ್ಮಾಧರ್ಮ ಪರಿಜ್ಞಾನ, ಪಾತಿವ್ರತ್ಯಾದಿ ಸಾಧ್ವೀಗುಣಗಳು ಮುಂತಾದುವುಗಳಿಂದ ಆದರ್ಶ 'ಗೃಹಿಣೀ ಪದ'ಕ್ಕೆ ಅರ್ಹಳಾಗಿದ್ದಾಳೆ. ದುಷ್ಯಂತನಿಂದ ಪ್ರತ್ಯಾಖ್ಯಾತಳಾದಾಗ ದುಃಖದಿಂದ ಸ್ವಲ್ಪ ಕಟುವಾಗಿ ಮಾತಾಡಿದ್ದರೂ ಅವನ ಮೇಲೆ ಅವಳಿಗಿದ್ದ ಪ್ರೇಮ ಪ್ರಣಯ ವಿಚಲಿತವಾಗುವುದೇ ಇಲ್ಲ. ಮುಂದೆ ಅವನನ್ನು ಕಂಡಾಗ 'ಆರ್ಯಪುತ್ರ ಎಷ್ಟು ಬಡವಾಗಿಬಿಟ್ಟಿದ್ದಾನೆ' ಎಂದು ದುಃಖಿತಳಾಗುತ್ತಾಳೆ. ಅವಳ ಸಖೀಪ್ರೇಮ, ಪಿತೃಪ್ರೇಮ ಮುಂತಾದುವುಗಳಂತು



ಅನಿರ್ವಚನೀಯವಾದುವು. ಒಟ್ಟಿನಲ್ಲಿ ಅವಳಲ್ಲಿ ದೋಷ ಹುಡುಕಿದರೂ ಸಿಕ್ಕಲಾರದು.

ಸ್ತ್ರೀಯರಿಗಿರಬಹುದಾದ ವಿವಿಧ ಪ್ರೇಮಗಳನ್ನೂ ಇತರ ನಾಟಕಗಳಲ್ಲಿ ಕಾಳಿದಾಸನು ಚಿತ್ರಿಸಿರುವ ಬಗೆಯನ್ನೂ ಹಿಂದೆಯೇ ತಿಳಿಸಿದ್ದೇವೆ. ಹಾಗೆ ಚಿತ್ರಿಸಲು ಕವಿಯು ಅಲ್ಲಿ ಬೇರೆ ಬೇರೆ ನಾಯಿಕೆಯರನ್ನು ಆರಿಸಿಕೊಂಡಿದ್ದಾನೆ. ಮುಗ್ಧೆಯ ಪ್ರೇಮವು ಮಾಳವಿಕೆಯಲ್ಲಿದ್ದರೆ, ಉರ್ವಶಿಯಲ್ಲಿ ಪ್ರೌಢೆಯಾದ ಹೆಂಗಸಿನ ಪ್ರೇಮವಿದೆ; ಔಶೀನರಿ ಮತ್ತು ಧಾರಿಣಿಯರಲ್ಲಿ ಅದಕ್ಕೂ ಮಿಂಚಿದ ಸಾಧ್ವೀಗೃಹಿಣೀಪ್ರೇಮವಿದೆ. ಶಾಕುಂತಲ ನಾಟಕದಲ್ಲಿಯಾದರೋ ಈ ಮೂರು ಬಗೆಯ ಪ್ರೇಮವೂ ಶಕುಂತಲೆಯೊಬ್ಬಳಲ್ಲೇ ರೂಪಿತವಾಗಿದೆ. ಕಣ್ವಾಶ್ರಮದಲ್ಲಿ ಶಕುಂತಲೆ ಮುಗ್ಧೆಯಾಗಿಯೂ, ಅವಳು ದುಷ್ಯಂತನಿಂದ ಅಗಲಿದ್ದ ಮಧ್ಯವರ್ತಿ ಕಾಲದಲ್ಲಿ ಮತ್ತು ಮಾರೀಚಾಶ್ರಮದಲ್ಲಿ ವಿರಕ್ತಳಾದ ಸಾಧ್ವಿಯಾಗಿಯೂ ನಮಗೆ ಗೋಚರಿಸುತ್ತಾಳೆ. ಮುಂದೆ ಪುನರ್ಮಿಲನವಾದಮೇಲೆ ಅವಳ ಪ್ರಣಯ ನಿಃಸ್ವಾರ್ಥವೂ ಪವಿತ್ರವೂ ಆಗುತ್ತದೆಂದು ಧಾರಾಳವಾಗಿ ನಿರೀಕ್ಷಿಸಬಹುದು.

ಶಕುಂತಲೆಯ ವಿಷಯದಲ್ಲಿ ದುಷ್ಯಂತನ ಪ್ರೇಮವೂ ಮೇಲ್ಮಟ್ಟದ್ದೆಂದೇ ಹೇಳಬೇಕು. ಅವನಿಗೂ ಇತರ ಹೆಂಡತಿಯರಿದ್ದಾರೆ. ಆ ಪೈಕಿ ಒಂದೇ ಒಂದು ಸಲ ದಷ್ಯಂತನೊಡನೆ ಸಮಾಗಮ ಹೊಂದಿ ನಿತ್ಯವೂ ಅವನ ದಾರಿಯನ್ನೇ ಇದಿರುನೋಡುತ್ತಿದ್ದ ಹೆಂಡತಿ ಹಂಸಪದಿಕೆಯೊಬ್ಬಳೇ ಎಂದು ಹೇಳುವಂತೆಯೂ ಇಲ್ಲ. ಶಕುಂತಲೆಯನ್ನು ತ್ಯಜಿಸಿದ ಮೇಲೆ ತಾನು ಮಾಡಿದ್ದು ತಪ್ಪಾಯಿತೆಂದು ತನ್ನ ಮುದ್ರೆಯುಂಗುರದ ದರ್ಶನದಿಂದ ಮನವರಿಕೆಯಾದ ಬಳಿಕ ದುಷ್ಯಂತನ ಸ್ವಭಾವವೇ ಪರಿವರ್ತಿತವಾಗಿಬಿಡುತ್ತದೆ. ಸದಾ ಶಕುಂತಲೆಯದೇ ಚಿಂತೆಯಾಗಿ ಅವನ ಸ್ಥಿತಿಯನ್ನು ಕಂಡ ಒಬ್ಬೊಬ್ಬರೂ ಅವನಲ್ಲಿ ಕನಿಕರಗೊಳ್ಳುವಂತಾಗುತ್ತದೆ. ಪ್ರಥಮ ಸಂದರ್ಶನದಲ್ಲಿ ಕಣ್ವರ ಅನುಮತಿಯಿಲ್ಲದೆ ಶಕುಂತಲೆಯನ್ನು ಪ್ರೇಮಿಸಿದುದರ ಫಲವೋ ಎಂಬಂತೆ ಅವನ ಪರಿತಾಪ ಹೆಚ್ಚುತ್ತಲೇ ಹೋಗುತ್ತದೆ. ಅವಳಮೇಲಿನ ಪ್ರೇಮವೂ ಹೆಚ್ಚು ಹೆಚ್ಚು ಗಾಢವೂ ಪವಿತ್ರವೂ ಆಗುತ್ತದೆ. ಈ ಹಂತದಲ್ಲಿ ಅವನ ಮತ್ತು ಶಕುಂತಲೆಯ-ಇಬ್ಬರ ಪ್ರೇಮದಲ್ಲಿ ಸ್ವಾರ್ಥದ ಲೇಶವೂ ಇರುವುದಿಲ್ಲ; ದೈಹಿಕ ಸೌಖ್ಯದ ಆಕಾಂಕ್ಷೆಯಿರುವುದಿಲ್ಲ. ಮೊದಲು ಮನಸ್ಸು ಒಂದಾಗಿದ್ದು ಬಳಿಕ ಶರೀರಗಳು

ಆಗಲಿದ್ದರೂ, ಕೊನೆಗೆ ಸ್ವಲ್ಪಸ್ವಲ್ಪವಾಗಿ ಆತ್ಮಗಳೂ ಒಂದಾಗುತ್ತವೆ, ಪ್ರೇಮ ತಪಸ್ಯೆಯ ಫಲವಾಗಿ.

ಶಾಕುಂತಲನಾಟಕ ಮನೋಹರವಾದ ನಾಟಕ; ರಂಗದಮೇಲೆ ಪ್ರದರ್ಶಿಸಿ ಜನಮೆಚ್ಚುಗೆ ಪಡೆಯಲು ಸಾಧ್ಯವಾದ ನಾಟಕ; ಲಾಕ್ಷಣಿಕರ ಪ್ರೇಕ್ಷಕರ ವಾಚಕರ ಏಕಪ್ರಕಾರವಾದ ಪ್ರಶಂಸೆಗೆ ಅರ್ಹವಾದ ನಾಟಕ. ಇದರಲ್ಲಿ ಬರುವ ಪದ್ಯಗಳ ಕಾವ್ಯಸೌಂದರ್ಯ ಅನಿರ್ವಚನೀಯ. ಕಾವ್ಯಗಳಲ್ಲಿ ನಾಟಕ ರಮ್ಯ; ನಾಟಕಗಳಲ್ಲಿ ಶಾಕುಂತಲ ರಮ್ಯ; ಶಾಕುಂತಲದಲ್ಲಿ [24]ನಾಲ್ಕನೆಯ ಅಂಕ ರಮ್ಯ; ಆ ನಾಲ್ಕನೆಯ ಅಂಕದಲ್ಲೂ ನಾಲ್ಕು ಶ್ಲೋಕಗಳು[25] ತುಂಬ ರಮ್ಯ ಎಂದು ಸಾಮಾನ್ಯವಾಗಿ ಹೇಳಲಾಗುತ್ತಿದೆ. ಈ ನಾಟಕದಲ್ಲಿ ಬರುವ ವರ್ಣನೆಗಳೂ ಹಾಗೆಯೇ. ಶಕುಂತಲೆಯನ್ನು 'ಮೂರ್ತಿವೆತ್ತ ಸತ್ಕ್ರಿಯೆ' ಎಂದೂ ಅವಳ ರೂಪವನ್ನು 'ಪುಣ್ಯಗಳ ಅಖಂಡ ಫಲದಂತೆ ಅನಘ' ಎಂದೂ ವರ್ಣಿಸಿರುವುದರ ಔಚಿತ್ಯವನ್ನು ಸುಲಭವಾಗಿ ಮನಗಾಣಬಹುದು. 'ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ' i 180 'ಅತಿಸ್ನೇಹಃ ಪಾಪಶಂಕೀ' iv 144 'ಬಲವದಪಿ ಶಿಕ್ಷಿತಾನಾಂ ಆತ್ಮನ್ಯಪ್ರತ್ಯಯಂ ಚೇತಃ' i 8 'ಬಿಡಾಲಗೃಹೀತೋ ಮೂಷಕ ಇವ ನಿರಾಶೋಽಸ್ಮಿ ಜೀವಿತೇ ಸಂವೃತ್ತಃ' vi 221 'ವಿವಕ್ಷಿತಂ ಹ್ಯನುಕ್ತಂ ಅನುತಾಪಂ ಜನಯತಿ' iii 70 'ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ' i 98 'ಸರ್ವಃ ಸಗಂಧೇಷು ವಿಶ್ವಸಿತಿ' v 100 'ಸ್ರಜಮಪಿ ಶಿರಸ್ಯಂಧಃ ಕ್ಷಿಪ್ತಾಂ ಧುನೋತ್ಯಹಿಶಂಕಯಾ' vii 116 ಮುಂತಾದ ಅನುಭವೋಕ್ತಿಗಳು ಸಂಭಾಷಣೆಗೆ ಜೀವಕಳೆಯನ್ನೀಯುತ್ತವೆ.

### ಕಾಳಿದಾಸನ ವೈಶಿಷ್ಟ್ಯ (ಪುಟ ೫೫ ನ್ನೂ ನೋಡಿ)

ಕಾಳಿದಾಸನು ತನ್ನ ಕಾವ್ಯಗಳಿಗೂ ಮತ್ತು ನಾಟಕಗಳಿಗೂ ಅಳವಡಿಸಿಕೊಂಡಿರುವ ವಸ್ತುಗಳಲ್ಲೂ ಒಂದು ವೈಶಿಷ್ಟ್ಯವನ್ನು ನಾವು ಕಾಣಬಹುದು.

---

[24] ನಾಲ್ಕನೆಯ ಅಂಕಕ್ಕಿಂತ ಐದನೆಯ ಅಂಕದ ರಮ್ಯತೆಯೇ ಹೆಚ್ಚೆಂಬ ಅಭಿಪ್ರಾಯವೂ ಇದೆ—ಶಾಕುಂತಲ-ಚತುರ್ಥೋಂಕಃ ಸರ್ವೋತ್ಕೃಷ್ಟ ಇತಿ ಪ್ರಥಾ।
ನ ಸರ್ವಸಮ್ಮತಾ ಯಸ್ಮಾತ್ ಪಂಚಮೋಽಸ್ತಿ ತತೋಽಧಿಕಃ ॥

[25] iv ೬ (ಯಾಸ್ಯತ್ಯದ್ಯ...,); iv ೯ (ಪಾತುಂ ನ ಪ್ರಥಮಂ....); iv ೧೭ (ಅಸ್ಮಾನ್ ಸಾಧು...); iv ೧೮ (ಶುಶ್ರೂಷಸ್ವ ಗುರೂನ್ ...). ಕೆಲವರು ೧೭ನೆಯ ಶ್ಲೋಕವನ್ನು ಬಿಟ್ಟು ೧೯ನೆಯ ( ಅಭಿಜನವತೋ ಭರ್ತುಃ... ) ಶ್ಲೋಕವನ್ನು ಈ ಶ್ಲೋಕಚತುಷ್ಟಯದಲ್ಲಿ ಸೇರಿಸಿಕೊಳ್ಳುತ್ತಾರೆ.



ಕುಮಾರಸಂಭವದಲ್ಲಿ ದಿವ್ಯದಂಪತಿಗಳಾದ ಪಾರ್ವತೀಪರಮೇಶ್ವರರ ಆದರ್ಶ ಪ್ರೇಮವನ್ನು, ಪರಸ್ಪರ ಬಯಸಿ ತಪಶ್ಚರ್ಯೆಮಾಡಿ ದಾಂಪತ್ಯಭಾವದಿಂದ ಒಂದಾದುದನ್ನು ಕಾವ್ಯಾತ್ಮಕವಾಗಿ ಕವಿಯು ನಿರೂಪಿಸಿರುವುದಲ್ಲದೆ ಹಿಮವತ್ ಪರ್ವತದ ಸುಂದರವೂ ವಾಸ್ತವವೂ ಆದ ವರ್ಣನೆಯನ್ನು ಮಾಡಿ ನಮ್ಮ ಅಖಂಡ ಭಾರತದೇಶದ ಉತ್ತರದ ಗಡಿಯ ಪ್ರಾಚೀನತೆಯನ್ನು ಯಾರೂ ಶಂಕಿಸದ ರೀತಿಯಲ್ಲಿ ಬರೆದಿಟ್ಟಿದ್ದಾನೆ. ರಘುವಂಶದಲ್ಲಿ ಸೂರ್ಯವಂಶದ ರಾಜರ ಚರಿತ್ರೆಯನ್ನು ಚಿತ್ರಿಸಿರುವುದಲ್ಲದೆ ಭರತಖಂಡದ ಎಲ್ಲ ಪ್ರಾಂತ್ಯಗಳನ್ನೂ ರಘುವಿನ ದಿಗ್ವಿಜಯದ ಪ್ರಕರಣದಲ್ಲಿ ಯಥಾವತ್ತಾಗಿ ವಿವರಿಸಿ ಭಾರತದ ಅಖಂಡತ್ವ ಎಷ್ಟು ಹಿಂದಿನ ಕಾಲದ್ದೆಂಬುದನ್ನು ತೋರಿಸಿದ್ದಾನೆ. ಮೇಘಸಂದೇಶದಲ್ಲಿ ಈ ಹಿಂದೆಯೇ ಹೇಳಿರುವಂತೆ ಭಾರತದ ದಕ್ಷಿಣದ ರಾಮಗಿರಿಯಿಂದ ಉತ್ತರದ ಅಲಕಾವತಿಯ ವರೆಗಿನ ಪ್ರಮುಖವಾದ ಪ್ರದೇಶಗಳನ್ನು ವರ್ಣಿಸಿ ರಾಷ್ಟ್ರೈಕ್ಯತೆಯ ಸ್ವರೂಪದ ದಿಗ್ದರ್ಶನ ಮಾಡಿಕೊಟ್ಟಿದ್ದಾನೆ. ಮಾಳವಿಕಾಗ್ನಿಮಿತ್ರದಲ್ಲಿ ಐತಿಹಾಸಿಕ ಪ್ರಸಿದ್ಧಿಗಳಿಸಿದ ತನ್ನ ಕಾಲದ ಅಗ್ನಿಮಿತ್ರರಾಜನ ಗೃಹಕೃತ್ಯದ ಕಥೆಯನ್ನೇ ನಿರೂಪಿಸ ಹೊರಟಿದ್ದರೂ ಆಗಿನ ಧಾರ್ಮಿಕ ಮತ್ತು ರಾಜಕೀಯ ಪರಿಸ್ಥಿತಿಯ ಸ್ಪಷ್ಟಸೂಚನೆಯಿತ್ತಿದ್ದಾನೆ. ವಿಕ್ರಮೋರ್ವಶೀಯವಂತು ಚಂದ್ರವಂಶದ ಪ್ರಪ್ರಥಮ ರಾಜನಾದ ಪುರೂರವನ ಕಥೆ; ಅವನ ಮಗ 'ಆಯು'ವಿನ ವೈಶಿಷ್ಟ್ಯಪೂರ್ಣ ಜನನದ ಕಥೆ. ಶಾಕುನ್ತಲದ ವಸ್ತು ನಮ್ಮ ದೇಶಕ್ಕೆ 'ಭಾರತ' 'ಭರತಖಂಡ' ಎಂಬ ಹೆಸರು ಬರಲು ಕಾರಣನಾದ, ಮೊದಲು ಸರ್ವದಮನನೆಂದು ಕರೆಯಲ್ಪಟ್ಟಿದ್ದು ಬಳಿಕ 'ಭರತ'ನೆಂದು ಪ್ರಸಿದ್ಧನಾದ ಪ್ರಪ್ರಥಮ 'ಸಾರ್ವಭೌಮ'ನ ಜನ್ಮವೃತ್ತಾಂತ. ಈ ಅಂಶವನ್ನು ಪರಿಶೀಲಿಸಿದರೆ, ಈ ಕಾವ್ಯನಾಟಕಗಳ ರಸಪರಿಪೋಷ ಹಾಗಿರಲಿ, ಅವುಗಳಿಗೆಲ್ಲ ಆಧಾರವಾಗಿ ರಾಷ್ಟ್ರಪ್ರೇಮ ಪ್ರೇರಣೆಯಿಂದ ಕಾಳಿದಾಸನು ಆರಿಸಿಕೊಂಡಿರುವ ವಸ್ತುಗಳೂ ಸರ್ವಶ್ಲಾಘ್ಯವೆನ್ನುವುದರಲ್ಲಿ ಸಂದೇಹವಿಲ್ಲ.

## ೭ ಅಶ್ವಘೋಷ (೫೬–೫೮ ಪುಟಗಳನ್ನೂ ನೋಡಿ)

೧೯೧೧ರಲ್ಲಿ ಲೂಡರ್ಸ್ ಎಂಬ ಜರ್ಮನ್ ಪಂಡಿತನು ಮಧ್ಯಏಷ್ಯಾದ ಟುರ್ಫಾನ್ ಎಂಬಲ್ಲಿ ದೊರೆತ ಪ್ರಾಚೀನವಾದ ಮೂರು ನಾಟಕಗಳ ಭಾಗಗಳನ್ನು ಪ್ರಕಟಿಸುವವರೆಗೆ ಅಶ್ವಘೋಷನು ನಾಟಕಗಳನ್ನೂ ರಚಿಸಿದ್ದಾ

ನೆಂಬುದು ತಿಳಿದಿರಲಿಲ್ಲ. ಮೇಲ್ಕಂಡ ನಾಟಕಭಾಗಗಳು ಓಲೆಯ ಮೇಲೆ ಮಸಿಯಲ್ಲಿ ಬರೆದುವು; ಅಲ್ಲದೆ ಈವರೆಗೆ ದೊರೆತಿರುವ ಓಲೆ ಪುಸ್ತಕಗಳಲೆಲ್ಲಾ ಅತ್ಯಂತ ಪ್ರಾಚೀನವಾದುವು. ಅವುಗಳು ಈಗ್ಗೆ ೧೮೦೦ ವರ್ಷಗಳ ಹಿಂದೆ ಕುಶಾನ್ ರಾಜರ ಕಾಲದಲ್ಲಿ ಪ್ರಚಲಿತವಾಗಿದ್ದ ಲಿಪಿಯಲ್ಲಿ ಬರೆದವು. ಭಾಷೆ ಸಂಸ್ಕೃತ ಮತ್ತು ಪ್ರಾಕೃತ. ಈ ಓಲೆಗಳೆಲ್ಲ ಬಹುಶಃ ತುಂಡುತುಂಡಾಗಿವೆ. ಇವುಗಳನ್ನು ಅರ್ಥವಾಗುವಂತೆ ಜೋಡಿಸಿ ಪ್ರಕಟಿಸಿದ ಲೂಡರ್ಸ್ ಪಂಡಿತನ ಶ್ರಮ ಅಭಿನಂದನೀಯ

ಮೇಲೆ ಹೇಳಿದ ಮೂರು ನಾಟಕಭಾಗಗಳಲ್ಲಿ ಮೊದಲನೆಯದು 'ಶಾರಿಪುತ್ರಪ್ರಕರಣ' ಅಥವಾ 'ಶಾರದ್ವತೀಪ್ರಕರಣ'ವೆಂದೂ ಅದು ಒಂಭತ್ತು ಅಂಕಗಳುಳ್ಳದ್ದೆಂದೂ ಬರೆದವನು ಅಶ್ವಘೋಷನೆಂದೂ ಶಾರಿಪುತ್ರ ಮತ್ತು ಮೌದ್ಗಲ್ಯಾಯನರು ಬುದ್ಧರ ಶಿಷ್ಯರಾದುದೇ ಅದರ ವಸ್ತುವೆಂದೂ ನಮಗೆ ದೊರೆತಿರುವ ಭಾಗವಾದ ಎಂಟನೆಯ ಅಂಕದ ಕೊನೆ ಮತ್ತು ಕೊನೆಯದಾದ ಒಂಭತ್ತನೆಯ[26] ಅಂಕಗಳಿಂದ ತಿಳಿದುಬರುತ್ತದೆ. ಶಾರಿಪುತ್ರನಿಗೆ ಬ್ರಾಹ್ಮಣನಾದ ವಿದೂಷಕ (ಸಖ) ನೊಬ್ಬನಿದ್ದಾನೆ. ಇದರಲ್ಲಿ ಉತ್ತಮ ಪಾತ್ರಗಳು ಸಂಸ್ಕೃತವನ್ನೂ ನೀಚಪಾತ್ರಗಳು ಪ್ರಾಕೃತವನ್ನೂ ಆಡುತ್ತಾರೆ. ರೂಪಕವು ಭರತವಾಕ್ಯದಿಂದ ಉಪಸಂಹೃತವಾಗುತ್ತದೆ.

ಶಾರಿಪುತ್ರಪ್ರಕರಣದ ಜತೆಯಲ್ಲೇ ಅದೇ ಪುಸ್ತಕದಲ್ಲಿ ಬರೆದಿದ್ದ ಮತ್ತೆರಡು ನಾಟಕಗಳ ಕರ್ತೃ ಅಶ್ವಘೋಷನೇ ಅಲ್ಲವೇ ಹೇಳಲು ಆಧಾರಗಳು ದೊರೆತಿಲ್ಲ. ಆದರೂ ಒಟ್ಟಿಗೇ ಒಂದೇ ಪುಸ್ತಕದಲ್ಲಿ ಬರೆದಿದ್ದುದರಿಂದ ಮೂರೂ ಅಶ್ವಘೋಷನವೇ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಈ ಎರಡರಲ್ಲಿ ಒಂದು ಕೃಷ್ಣಮಿಶ್ರನ ಪ್ರಬೋಧಚಂದ್ರೋದಯವನ್ನು ಹೋಲುತ್ತದೆ. ಮತ್ತೊಂದು ಚಾರುದತ್ತ ಅಥವಾ ಮೃಚ್ಛಕಟಿಕದ ರೀತಿಯಲ್ಲಿ ಜೀರ್ಣೋದ್ಯಾನ, ವೇಶ್ಯಾಗೃಹ, ಪ್ರವಹಣಗಳಿಂದ ಕೂಡಿದೆ. ಮೂರು ನಾಟಕಗಳೂ ಧಾರ್ಮಿಕ ನಾಟಕಗಳೇ ಆಗಿದ್ದಿರಬಹುದು. ಅಶ್ವಘೋಷನು 'ರಾಷ್ಟ್ರಪಾಲನಾಟಕ'ವೆಂಬ ರೂಪಕವನ್ನೂ ರಚಿಸಿರಬೇಕೆಂಬ ಅಭಿಪ್ರಾಯವೂ ಇದೆ.[27]

---

26 ಪ್ರಕರಣದಲ್ಲಿ ಹತ್ತು ಅಂಕಗಳಿರಬೇಕು. ಇಲ್ಲಿರುವುದು ಒಂಭತ್ತೇ ಅಂಕಗಳಾದರೂ ಇದೂ ಪ್ರಕರಣವೆಂದೇ ಕರೆಯಲ್ಪಟ್ಟಿದೆ.

27 ಎ. ಆರ್. ಕೃಷ್ಣಶಾಸ್ತ್ರಿಗಳ 'ಸಂಸ್ಕೃತನಾಟಕ,' ಪುಟ ೬೮ ನೋಡಿ.



## ೫ ವಿಶಾಖದತ್ತ (೮ ಮತ್ತು ೯ ನೆಯ ಶತಮಾನಗಳ ಮಧ್ಯೆ)

**ವಿಶಾಖದತ್ತನ ಕಾಲ**—ವಿಶಾಖದತ್ತನು ಸಾಮಂತ ವಟೇಶ್ವರದತ್ತನ ಮೊಮ್ಮಗನೆಂದೂ ಮಹಾರಾಜ ಭಾಸ್ಕರದತ್ತನ ಮಗನೆಂದೂ ಮುದ್ರಾರಾಕ್ಷಸ ನಾಟಕದ ಪ್ರಸ್ತಾವನೆಯಲ್ಲಿ ಹೇಳಿದೆ. ಆದರೆ ವಟೇಶ್ವರದತ್ತನಾಗಲೀ ಭಾಸ್ಕರದತ್ತನಾಗಲಿ ಯಾರು, ಯಾವಾಗ ಎಲ್ಲಿ ಆಳಿದನೆಂಬುದನ್ನು ಚರಿತ್ರೆಯಲ್ಲಿ ಗುರುತಿಸಲು ಸಾಧ್ಯವಾಗಿಲ್ಲ. ಆದ್ದರಿಂದ ವಿಶಾಖದತ್ತನ ಕಾಲವೂ ಊಹೆಯ ಮೇಲೆಯೇ ನಿಂತಿದೆ. ಹತ್ತನೆಯ ಶತಮಾನದ ಧನಂಜಯನು ತನ್ನ ದಶರೂಪಕದಲ್ಲಿ ಮೂರು ಬೇರೆ ಬೇರೆ ಕಡೆ ಮುದ್ರಾರಾಕ್ಷಸವನ್ನು ನಾಮತಃ ನಿರ್ದೇಶಿಸಿ ಉದಾಹರಿಸಿರುವುದರಿಂದಲೂ, ಅದೇ ಶತಮಾನದ ಭೋಜನೂ ತನ್ನ ಸರಸ್ವತೀಕಂಠಾಭರಣದಲ್ಲಿ ಈ ನಾಟಕದ ಎರಡು ಶ್ಲೋಕಗಳನ್ನು ಉದಾಹರಿಸಿರುವುದರಿಂದಲೂ ಮುದ್ರಾರಾಕ್ಷಸನಾಟಕದ ಕಾಲದ ಉತ್ತರಾವಧಿ ೯ನೆಯ ಶತಮಾನವೆಂದು ನಿರ್ಧರವಾಗಿ ಹೇಳಬಹುದು. ಈ ನಾಟಕದ ಭರತವಾಕ್ಯದ 'ಪಾರ್ಥಿವಶ್ಚಂದ್ರಗುಪ್ತಃ' ಎಂಬುದರಿಂದ ನಿರ್ದಿಷ್ಟನಾಗುವ ಚಂದ್ರಗುಪ್ತನು ಮೌರ್ಯವಂಶೀಯನಲ್ಲವೆಂದೂ ಐದನೆಯ ಶತಮಾನದ ಗುಪ್ತವಂಶೀಯನೆಂದೂ ಇತಿಹಾಸಜ್ಞರು ಅಭಿಪ್ರಾಯಪಡುತ್ತಾರೆ. ವಿಶಾಖದತ್ತನ ಮತ್ತೊಂದು ಕೃತಿಯಾದ ದೇವೀಚಂದ್ರಗುಪ್ತದ ಕೆಲವು ಭಾಗಗಳೂ ಈ ಅಭಿಪ್ರಾಯವನ್ನೇ ಸಮರ್ಥಿಸುತ್ತವೆ. ಆದರೆ '(ಪಾರ್ಥಿವಃ) ಚಂದ್ರಗುಪ್ತಃ' ಎಂಬುದಕ್ಕೆ 'ದಂತಿವರ್ಮಾ' 'ರಂತಿವರ್ಮಾ' '(ಅ) ವಂತಿವರ್ಮಾ' ಎಂಬ ಮೂರು ಪಾಠಾಂತರಗಳಿವೆ. ದಂತಿವರ್ಮನೆಂಬ ಹೆಸರಿನ ಒಬ್ಬ ಪಲ್ಲವರಾಜನೂ (ಸುಮಾರು ಕ್ರಿ.ಶ. ೮೦೦), ಒಬ್ಬ ಲಾಟರಾಜನೂ (ಸುಮಾರು ಕ್ರಿ.ಶ. ೮೫೦), ಒಬ್ಬ ರಾಷ್ಟ್ರಕೂಟರಾಜನೂ (ಸುಮಾರು ಕ್ರಿ.ಶ. ೯೦೦) ಚರಿತ್ರೆಯಲ್ಲಿ ಪರಿಚಿತರಾಗಿದ್ದರೂ ಇವರ ಪೈಕಿ ಯಾರೊಡನೆಯೂ ವಿಶಾಖದತ್ತನ ಸಂಬಂಧ ತಿಳಿದು ಬಂದಿಲ್ಲ. 'ರಂತಿವರ್ಮಾ' ಎಂಬುದು 'ವಂತಿವರ್ಮಾ' ಎಂದು ಬರೆಯುವಾಗ ಆಗಿರಬಹುದಾದ 'ಅಕ್ಷರಸ್ಖಾಲಿತ್ಯ'ವೆಂದೇ ಹೇಳಬೇಕು. ಅವಂತಿವರ್ಮಾ ಎಂಬುದು ಕನೋಜದ ಹರ್ಷವರ್ಧನನ ತಂಗಿ ರಾಜ್ಯಶ್ರೀಯ ಮಾವನಾದ ಮೌಖಾರಿ ರಾಜನ ಹೆಸರು. 'ಅವಂತಿವರ್ಮಾ' ಎಂಬ ಪಾಠವನ್ನು ಪರಿಗ್ರಹಿಸುವುದಾದರೆ ಅವನ ಕಾಲ ಸುಮಾರು ಕ್ರಿ.ಶ. ೬೦೦ ಆದ್ದರಿಂದಲೂ,

ಆದೇ ಭರತವಾಕ್ಯದಲ್ಲಿ 'ಅಧುನಾ' ಎಂದಿರುವುದರಿಂದಲೂ, ಆ ನಾಟಕ ರಚಿತ
ವಾದ ಕಾಲವೂ ಸುಮಾರು ಕ್ರಿ.ಶ. ೬೦೦ ಎಂದೇ ಹೇಳಬೇಕಾಗುತ್ತದೆ. 'ಚಂಪ್ರ
ಗುಪ್ತಃ' ಎಂಬ ಪಾಠ ಅಂಗೀಕರಿಸಿ ಆ ಚಂದ್ರಗುಪ್ತನು ಗುಪ್ತವಂಶೀಯನೆಂದೂ
ವಿಶಾಖದತ್ತನು ಅವನ ಕಾಲದಲ್ಲಿ ಈ ನಾಟಕ ರಚಿಸಿದನೆಂದೂ ಒಪ್ಪುವುದಾದರೆ
ಅವನ ಕಾಲ ಐದನೆಯ ಶತಮಾನವೆನ್ನಬೇಕು. ಏನೇ ಆಗಲಿ ವಿಶಾಖದತ್ತನ
ಕಾಲದ ಪೂರ್ವಾವಧಿ ಐದನೆಯ ಶತಮಾನವೆನ್ನುವುದರಲ್ಲಿ ಬಾಧಕವಿಲ್ಲ
ವೆನ್ನಬಹುದು. ಅಂದರೆ ವಿಶಾಖದತ್ತನು ಕ್ರಿ.ಶ. ೫ರಿಂದ ೯ನೆಯ ಶತಮಾನದ
ಅವಧಿಯಲ್ಲಿ ಯಾವಾಗಲೋ ಇದ್ದಿರಬೇಕೆಂದಂತಾಯಿತು.

**ವಿಶಾಖದತ್ತನ ಕೃತಿಗಳು**—ವಿಶಾಖದತ್ತರಚಿತವಾಗಿ ನಮಗೆ ದೊರೆ
ತಿರುವ ಸಮಗ್ರ ನಾಟಕ ಮುದ್ರಾರಾಕ್ಷಸ ಒಂದೇ. ವಿಶಾಖದತ್ತನು 'ದೇವೀ
ಚಂದ್ರಗುಪ್ತ', 'ಅಭಿಸಾರಿಕಾವಂಚಿತಕ' ಮತ್ತು 'ರಾಘವಾನಂದ' ಎಂಬ
ನಾಟಕಗಳನ್ನೂ ಬರೆದಿರುವುದಾಗಿ ಭೋಜನ ಶೃಂಗಾರಪ್ರಕಾಶದಿಂದ ತಿಳಿದು
ಬರುತ್ತದೆ. ಸದುಕ್ತಿಕರ್ಣಾಮೃತದಲ್ಲಿ ಅವನದೆಂದು ಹೇಳಿರುವ ಒಂದು
ಶ್ಲೋಕವು ರಾಘವಾನಂದ ನಾಟಕದ್ದಾಗಿರಬಹುದು. ರಾಮಚಂದ್ರ ಗುಣ
ಚಂದ್ರರು ತಮ್ಮ ನಾಟ್ಯದರ್ಪಣದಲ್ಲಿ ವಿಶಾಖದೇವವಿರಚಿತ **ದೇವೀಚಂದ್ರ
ಗುಪ್ತ**ದಿಂದ ಉದಾಹರಸಿದ್ದಾರೆ. ಅಭಿನವಗುಪ್ತನೂ ನಾಟ್ಯಶಾಸ್ತ್ರವ್ಯಾಖ್ಯಾನ
ದಲ್ಲಿ ಈ ನಾಟಕವನ್ನು ನಿರ್ದೇಶಿಸಿದ್ದಾನೆ. ದೇವೀಚಂದ್ರಗುಪ್ತದಲ್ಲಿ ಇಮ್ಮಡಿ
ಚಂದ್ರಗುಪ್ತನ ಜೀವನಚರಿತ್ರೆಯ ಕೆಲವು ವಿವರಗಳು ಉಕ್ತವಾಗಿವೆ. ನಮಗೆ
ಈಗ ದೊರೆತಿರುವುದು ಈ ನಾಟಕದ ಕೆಲವು ಭಾಗಗಳು ಮಾತ್ರ. ಅಭಿಸಾರಿಕಾ
ವಂಚಿತಕಕ್ಕೆ ಅಭಿಸಾರಿಕಾಬಂಧಿತಕ ಎಂಬ ಹೆಸರೂ ಇದೆ. ಇದು ವಿಶಾಖದೇವ
ರಚಿತವೆಂದೇ ಉಕ್ತವಾಗಿದೆ. ಅಭಿನವಗುಪ್ತನೂ ಇದರಿಂದ ಉದಾಹರಿಸಿದ್ದಾನೆ.

ಈ ನಾಟಕಗಳಲ್ಲದೆ ಸುಭಾಷಿತಾವಳಿಯಲ್ಲಿ ವಿಶಾಖದೇವನ[28] ಎರಡು
ಅನುಷ್ಟುಪ್ ಶ್ಲೋಕಗಳಿವೆ. ಮುದ್ರಾರಾಕ್ಷಸದ ಕರ್ತನೇ ಈ ವಿಶಾಖದೇವ
ನೆಂಬುದು ಡಾ. ಪೀಟರ್‌ಸನ್‌ರ ಮತ.

---

28 ತತ್ ತ್ರಿವಿಷ್ಟಪಮಾಖ್ಯಾತಂ ತನ್ವಂಗ್ಯಾ ಯದ್ವಲಿತ್ರಯಂ ।
ಯೇನಾನಿಮಿಷದೃಷ್ಟಿತ್ವಂ ನೃಣಾಮಪ್ಯುಪಜಾಯತೇ ॥ ೯೫೪೮
ಸೇಂದ್ರಚಾಪೈಃ ಶ್ರಿತಾ ಮೇಘೈರ್ನಿಪತನ್ನಿರ್ಝರಾಪಗಾಃ ।
ವರ್ಣಕಂಬಲಸಂವರ್ತಾ ಬಭುರ್ಮತ್ತಾ ದ್ವಿಪಾ ಇವ ॥ ೧೬೨೮.



**ಮುದ್ರಾರಾಕ್ಷಸನಾಟಕ**—ಪಾತ್ರಸೃಷ್ಟಿ, ವಸ್ತುರಚನೆ, ಸಂವಿಧಾನ
ಕೌಶಲ ಮುಂತಾದ ಅನೇಕ ವಿಷಯಗಳಲ್ಲಿ ವೈಶಿಷ್ಟ್ಯದಿಂದ ಕೂಡಿರುವ
ನಾಟಕ ಮುದ್ರಾರಾಕ್ಷಸ. ಇದರಲ್ಲಿ ಏಳು ಅಂಕಗಳಿವೆ. ಇದರ ವಸ್ತು
ಚರಿತ್ರೆಯಲ್ಲಿ ನಡೆದದ್ದಾದರೂ ಕವಿಕಲ್ಪಿತಭಾಗಗಳಿಂದ ಕೂಡಿಕೊಂಡು
ಅತ್ಯಂತ ಸ್ವಾರಸ್ಯವಾಗಿದೆ. ಇದರಲ್ಲಿನ ಪ್ರಮುಖ ಘಟನೆಗಳೆಂದರೆ ನಂದ
ಕುಲೋತ್ಪಾಟನ, ಚಂದ್ರಗುಪ್ತರಾಜ್ಯಪ್ರಾಪ್ತಿ, ಅಮಾತ್ಯರಾಕ್ಷಸನು ಚಂದ್ರ
ಗುಪ್ತನ ಮಂತ್ರಿಯಾಗುವುದು. ಇವನ್ನು ಉಪಾಯಗಳಿಂದಲೇ ಸಾಧಿಸಿದ
ಮೇಧಾವೀ ವ್ಯಕ್ತಿ ಚಾಣಕ್ಯ. ಅವನದೇ ಈ ನಾಟಕದಲ್ಲಿ ಅತ್ಯಂತ ಪ್ರಧಾನ
ಪಾತ್ರ. ಅವನ ತಂತ್ರಗಳಿಂದಲೇ ನಾಟಕ ಮೈಗೂಡಿಕೊಂಡು ಸ್ವಾರಸ್ಯವಾಗಿ
ಸಾಗುವುದು.

ಚಾಣಕ್ಯನು ನಂದಮೂಲೋತ್ಪಾಟನಮಾಡಿ ಚಂದ್ರಗುಪ್ತನನ್ನು ರಾಜ
ಪದವಿಯಲ್ಲಿ ಪ್ರತಿಷ್ಠಿಸುವುದಾಗಿ ತಾನು ಮಾಡಿದ್ದ ಪ್ರತಿಜ್ಞೆಯನ್ನು ಅಸಾಧಾರಣ
ಬುದ್ಧಿಕೌಶಲದಿಂದ, ಕುಟಿಲ ತಂತ್ರಗಳಿಂದ ಸಾಧಿಸಿದವನು. ತಾನು ಪ್ರತಿ
ಷ್ಠಿಸಿದ ಚಂದ್ರಗುಪ್ತನಿಗೆ ಮುಂದೆಂದೂ ಅಪಾಯವೊದಗಬಾರದೆಂಬ ಪ್ರಧಾ
ನೋದ್ದೇಶದಿಂದ ಸ್ವಾಮಿನಿಷ್ಠನಾದ ಅಮಾತ್ಯರಾಕ್ಷಸನೇ ಚಂದ್ರಗುಪ್ತನ
ಮಂತ್ರಿಯಾಗುವಂತೆ ಏರ್ಪಡಿಸಿದ ಅಸಮಾನ ಸಾಹಸಿ ಅವನು. ಅವನ ಕಥೆ
ಯನ್ನು ವಿಶಾಖದತ್ತನು ಈ ನಾಟಕದಲ್ಲಿ ಚಿತ್ರಿಸಿರುವ ರೀತಿಯೂ ಅಸಾಧಾರಣ
ವಾಗಿದೆ. ನಾಟಕದಲ್ಲಿ ಬರುವ ಒಂದೊಂದು ಘಟನೆಯ ಜೀವನಾಡಿಯೂ
ಚಾಣಕ್ಯನೇ. ಆದರೂ ನಾಟಕದ ಹೆಸರು ಮುದ್ರಾರಾಕ್ಷಸ. ಉದ್ದಿಷ್ಟ ಫಲ
ವಾದ ರಾಕ್ಷಸಸಂಪಾದನೆಯು ಅವನ ಮುದ್ರಿಕೆಯಿಂದಲೇ ಸಾಧಿಸಲ್ಪಟ್ಟಂತೆ ಈ
ನಾಟಕದಲ್ಲಿ ನಿರೂಪಿತವಾಗಿರುವುದೇ ಅದಕ್ಕೆ ಕಾರಣ.

ಕೊನೆಯ ಅಂಕದಲ್ಲಿ ಗೋಳಾಡುತ್ತಾ ಬರುವ ಹೆಂಗಸೊಬ್ಬಳನ್ನು ಬಿಟ್ಟರೆ
ಮುದ್ರಾರಾಕ್ಷಸನಾಟಕದಲ್ಲಿ ಬೇರಾವ ಸ್ತ್ರೀಪಾತ್ರವೂ ಇಲ್ಲವೇ ಇಲ್ಲ. ನಾಟಕವು
ರಾಜನೀತಿಪ್ರಧಾನವಾದುದರಿಂದ ಇತರ ರಸಗಳಿಗೂ ಇದರಲ್ಲಿ ಎಡೆಯಿಲ್ಲ. ಈ
ನಾಟಕದಲ್ಲಿ ಎದ್ದು ಕಾಣುವ ಅಂಶಗಳು ಎರಡು—(೧) ಪಾತ್ರಗಳ ವ್ಯಕ್ತಿತ್ವ
(೨) ಒಂದಕ್ಕೊಂದು ಹೆಣೆದುಕೊಂಡಂತೆ ಪುಂಖಾನುಪುಂಖವಾಗಿ ಬರುವ
ಘಟನೆಗಳ ವೈಶಿಷ್ಟ್ಯ. ಈ ಎರಡೂ ಒಟ್ಟಿಗೇ ಸೇರಿರುವುದು ಸಂಸ್ಕೃತನಾಟಕ

ಗಳಲ್ಲಿ ಬಹಳ ವಿರಳ. ಒಂದು ರೀತಿಯಲ್ಲಿ ಈ ನಾಟಕವೂ ಶೂದ್ರಕನ ಮೃಚ್ಛಕಟಿಕದಂತೆಯೇ ಇಂಗ್ಲೀಷು ನಾಟಕಗಳನ್ನು ಹೋಲುತ್ತದೆಂದು ಹೇಳಬಹುದು.

ವಸ್ತುವಿಗೆ ತಕ್ಕ ಶೈಲಿಯಲ್ಲಿ, ಮಿತವಾದ ವರ್ಣನೆಗಳೊಡನೆ, ಅಲಂಕಾರ ಅತಿಯಾಗದಂತೆ, ನಿಜವಾಗಿಯೇ ನಡೆದವೆಂಬ ಭಾವನೆ ಬರುವಂತೆ ಕಲ್ಪಿತ ಭಾಗಗಳನ್ನು ಅಳವಡಿಸಿಕೊಂಡು ವಿಶಾಖದತ್ತನು ಬರೆದಿರುವ ಈ ನಾಟಕದಲ್ಲಿ ಸ್ವಾಭಾವಿಕತೆಯಿದೆ; ಗ್ರಹಿಸತಕ್ಕ ಅನೇಕ ವಿಷಯಗಳಿವೆ; ನೆನಪಿಡತಕ್ಕ ಅನೇಕ ಸೂಕ್ತಿಗಳಿವೆ.[29] ಈ ಕೆಲವು ಅನುಭವೋಕ್ತಿಗಳನ್ನು ಇಲ್ಲಿ ನಿದರ್ಶನಕ್ಕಾಗಿ ಕೊಡಬಹುದು—

೧) ತಾಡ್ಯಮಾನಃ ಪುರುಷಃ ಕಿಮಿವ ನ ಬ್ರೂಯಾತ್ v 140
೨) ದೈವಮವಿದ್ವಾಂಸಃ ಪ್ರಮಾಣಯಂತಿ iii 138
೩) ನ ಹಿ ಸರ್ವಃ ಸರ್ವಂ ಜಾನಾತಿ i 55
೪) ಪುರಂಧ್ರೀಣಾಂ ಪ್ರಜ್ಞಾ ಪುರುಷಗುಣವಿಜ್ಞಾನವಿಮುಖೀ ii 12
೫) ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈಃ ii 85
೬) ಮುಂಡಿತಮುಂಡೋ ನಕ್ಷತ್ರಾಣಿ ಪೃಚ್ಛತಿ v 11
೭) ಅರ್ಥರುಚೇಃ ಅರ್ಥಸಂಬಂಧಃ ಪ್ರೀತಿಮುತ್ಪಾದಯತಿ i 145

ಚಂದ್ರಗುಪ್ತನ ವೃತ್ತಾಂತವು[30] ವಿಷ್ಣುಪುರಾಣ, ಭಾಗವತ ಮುಂತಾದೆಡೆಗಳಲ್ಲಿ ಸಂಕ್ಷೇಪವಾಗಿ ಉಕ್ತವಾಗಿದೆ. ಬೃಹತ್ಕಥೆಯಲ್ಲೂ ಈ ವೃತ್ತಾಂತವು ಇದ್ದಿರಬೇಕು. ದಶರೂಪಕದ ವ್ಯಾಖ್ಯಾನದ ಮೊದಲನೆಯ ಪರಿಚ್ಛೇದದ ಕೊನೆಯಲ್ಲಿ ಧನಿಕನು ಬೃಹತ್ಕಥೆಯೇ ಈ ನಾಟಕಕ್ಕೆ ಮೂಲವೆಂದು ಹೇಳಿದ್ದಾನೆ. ಈ ಮೂಲಗಳಲ್ಲಿ ಚಂದ್ರಗುಪ್ತ ಮತ್ತು ಚಾಣಕ್ಯರು ಮಾತ್ರ ಬರುತ್ತಾರೆ. ಅಮಾತ್ಯರಾಕ್ಷಸನ ಹೆಸರೂ ಇಲ್ಲ. ಆದ್ದರಿಂದ ರಾಕ್ಷಸನೂ ವಿಶಾಖದತ್ತನ ಕಲ್ಪಿತ ಪಾತ್ರವೆಂದೇ ಹೇಳುವುದುಂಟು.

[29] ಮುದ್ರಾರಾಕ್ಷಸ ನಾಟಕದ (ನಮ್ಮ ಪರಿಷ್ಕರಣ) ಕೊನೆಯಲ್ಲಿ ವಿಷಯಾನುಕ್ರಮವಾಗಿ ಕೊಟ್ಟಿರುವ ಸೂಕ್ತಿಗಳನ್ನು ನೋಡಿ.

[30] ನವ ಚೈತಾನ್ನಂದಾನ್ ಕೌಟಿಲ್ಯೋ ಬ್ರಾಹ್ಮಣಸ್ಸಮುದ್ಧರಿಷ್ಯತಿ। ಕೌಟಿಲ್ಯ ಏವ ಚಂದ್ರಗುಪ್ತಂ ರಾಜ್ಯೇ ಅಭಿಷೇಕ್ಷ್ಯತಿ। ಅತಃ ಪರಂ ಶೂದ್ರಾಃ ಪೃಥಿವೀಂ ಭೋಕ್ಷ್ಯಂತಿ।

# ಅಧ್ಯಾಯ ೧೨

## ಸಂಸ್ಕೃತ ನಾಟಕದ ಮಧ್ಯಕಾಲ

**ಅಜ್ಞಾತಕರ್ತೃಕ ನಾಟಕಗಳು**—ಕ್ರಿಸ್ತಶಕದ ಆದಿಭಾಗಕ್ಕೆ ಸೇರಿದುವೆಂದು ಹೇಳಬಹುದಾದ, ಆದರೆ ಅವುಗಳ ಕಾಲ ನಿರ್ಣೀತವಾಗಿಲ್ಲದ, ಕೆಲವು ಅಜ್ಞಾತಕರ್ತೃಕ ನಾಟಕಗಳಿವೆ. ಇಂತಹವುಗಳಲ್ಲಿ **ಭಗವದಜ್ಜುಕೀಯವೂ** ಒಂದು. ಇದು ಬೋಧಾಯನಕೃತವೆನ್ನಲಾಗುತ್ತಿದೆ. ಈ ಬೋಧಾಯನನು ಯಾರು ಎಂಬುದು ತಿಳಿಯದು. ಇದರ ಶೈಲಿ ಲಲಿತವಾಗಿರುವುದರಿಂದಲೂ ಇದರಲ್ಲಿ ಹೇಳಿರುವ ರೂಪಕ ಭೇದಗಳು ಸಾಮಾನ್ಯವಾಗಿ ಅಂಗೀಕೃತವಾಗಿರುವುವುಗಳಿಗಿಂತ ಭಿನ್ನವಾಗಿರುವುದರಿಂದಲೂ, ಇದರಲ್ಲಿ ಪ್ರಯೋಗಮಾಡಿರುವ ಪ್ರಾಕೃತರೂಪಗಳು ತುಂಬ ಪ್ರಾಚೀನವಾಗಿರುವುದರಿಂದಲೂ ಇದು ಬಹಳ ಹಿಂದಿನಕಾಲದಲ್ಲಿ ರಚಿತವಾದದ್ದಿರಬೇಕೆಂದು ಹೇಳಲಾಗುತ್ತಿದೆ. ಕಂಚಿಯ ರಾಜನಾದ ಮಹೇಂದ್ರವಿಕ್ರಮವರ್ಮನ ಕ್ರಿ.ಶ. ೬೧೦ರ ಶಾಸನದಲ್ಲಿ ಈ ನಾಟಕವು ಉಕ್ತವಾಗಿದೆ. ವಿಚಿತ್ರ ಸನ್ನಿವೇಶಗಳಲ್ಲಿ ತಾಪಸನಾದ ಭಗವಾನ್‌ನ ಮತ್ತು ಅಜ್ಜುಕಾ ಎಂಬ ವೇಶ್ಯೆಯ ಶರೀರವಿನಿಮಯದ ಪ್ರಯುಕ್ತ ಈ ನಾಟಕ ಹಾಸ್ಯಭರಿತವಾಗಿದೆ.

**ವೀಣಾವಾಸವದತ್ತ** (ಅಥವಾ ವತ್ಸರಾಜ–ಚರಿತ)ವೂ ಅಜ್ಞಾತಕರ್ತೃಕ. ಇದು ನಾಲ್ಕನೆಯ ಅಂಕದ ಮಧ್ಯಭಾಗದಿಂದ ಮುಂದಕ್ಕೆ ಲುಪ್ತವಾಗಿ ಅಸಮಗ್ರಸ್ಥಿತಿಯಲ್ಲಿದೆ. ವತ್ಸರಾಜ ಮತ್ತು ವಾಸವದತ್ತೆಯರ ಪ್ರೇಮವೃತ್ತಾಂತವೇ ಈ ನಾಟಕದ ವಸ್ತು. ವತ್ಸರಾಜನ ಘೋಷವತೀ ವೀಣೆಯ ಪಾತ್ರವು ಕಥೆಯ ಬೆಳವಣಿಗೆಗೆ ಪ್ರಧಾನವಾಗಿರುವುದರಿಂದಲೇ ನಾಟಕಕ್ಕೆ ಈ ಹೆಸರು ಬಂದಿದೆ. ಶೈಲಿ ಮತ್ತು ವಸ್ತು ಎರಡರಲ್ಲೂ ಈ ನಾಟಕವು ಭಾಸನ ಪ್ರತಿಜ್ಞಾಯೌಗಂಧರಾಯಣವನ್ನು ತುಂಬ ಹೋಲುತ್ತದೆ.

**ದಾಮುಕಪ್ರಹಸನವು** ಹೆಸರೇ ಸೂಚಿಸುವಂತೆ ಹಾಸ್ಯಭರಿತವಾದೊಂದು ಪ್ರಹಸನ. ತನ್ನ ಕ್ಷತ್ರಿಯತ್ವವನ್ನು ಮರೆಮಾಚಿ ಪರಶುರಾಮನಿಂದ ಅಸ್ತ್ರವಿದ್ಯೆ ಕಲಿತ ಕರ್ಣನ ಸ್ನೇಹಿತನಾದ ದಾಮುಕ ಎಂಬ ವಿದೂಷಕನದೇ ಇದರಲ್ಲಿ ಪ್ರಧಾನವಾದ ಪಾತ್ರ.

**ಕುಂದಮಾಲಾ**— ಕುಂದಮಾಲೆಯು ಆರು ಅಂಕಗಳ ನಾಟಕ. ಇದನ್ನು ಬರೆದವನು ದಿಙ್ನಾಗನೆಂದೂ, ಧೀರನಾಗನೆಂದೂ, ವೀರನಾಗನೆಂದೂ ಹೇಳಲಾಗುತ್ತಿದೆ. ಪ್ರಾಯಃ ದಿಙ್ನಾಗನಿಗೇ ಧೀರನಾಗನೆಂಬ ಹೆಸರೂ ಇದ್ದಿರಬಹುದು. ಈತನು ಅದೇ ಹೆಸರಿನ ಬೌದ್ಧನಿರಲಾರ. ನಾಟಕದ ವಸ್ತು ಉತ್ತರ ರಾಮಾಯಣ. ಆದರೆ ಕಥೆಯ ಬಹಳ ಅಂಶಗಳು ಕವಿಕಲ್ಪಿತ. ರಾಮನಿಂದ ಪರಿತ್ಯಕ್ತಳಾದ ಸೀತೆ ತನಗೆ ಸುಖಪ್ರಸವವಾದರೆ ಗಂಗಾನದಿಯನ್ನು ನಿತ್ಯವೂ ಕುಂದಮಾಲೆಯಿಂದ ಪೂಜಿಸುವುದಾಗಿ ಹರಕೆ ಹೊತ್ತು ಅದೇ ಪ್ರಕಾರ ಮಾಡುತ್ತಿರಲು ರಾಮನು ತಾನು ಯಜ್ಞ ಮಾಡಬೇಕಾಗಿದ್ದ ಸ್ಥಳಕ್ಕೆ ಬರುವಾಗ ಗಂಗಾನದಿಯಲ್ಲಿ ಕುಂದಮಾಲೆಯನ್ನು ಕಂಡು ಅದು ಸೀತೆಯೇ ಕಟ್ಟಿದ್ದೆಂದು ಗುರುತಿಸುವುದರಿಂದಲೂ, ಅದರಿಂದಾಗಿ ಸೀತೆಯೊಡನೆ ಅವನು ಪುನಃ ಸೇರುವ ಆಶೆಗೆ ಅವಕಾಶವಾಗಿರುವುದರಿಂದಲೂ, ನಾಟಕದ ಹೆಸರಿನಲ್ಲಿ ಔಚಿತ್ಯವಿದೆ. ರಾಮಾಯಣಕ್ಕೆ ಸಂಬಂಧಿಸಿದ ಈ ನಾಟಕದಲ್ಲಿ ವಿದೂಷಕನ ಪಾತ್ರ ಸ್ವಲ್ಪ ವಿಚಿತ್ರವೆನ್ನಿಸುತ್ತದೆ. ನಾಟಕದ ಲಲಿತವಾದ ಶೈಲಿಯಿಂದ ಹೇಳುವುದಾದರೆ ಇದನ್ನು ಬರೆದ ದಿಙ್ನಾಗನು ಕಾಳಿದಾಸನಿಗಿಂತ ದೂರದಲ್ಲಿದ್ದವನಲ್ಲ. ಭವಭೂತಿಯು ಈ ನಾಟಕದಿಂದ ಪ್ರಭಾವಿತನಾಗಿದ್ದಾನೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ದಿಙ್ನಾಗನು ಕ್ರಿ.ಶ. ಐದನೆಯ ಶತಮಾನಕ್ಕಿಂತ ಹಿಂದಿನವನೆಂದು ನಂಬಲಾಗಿದೆ.

**ಮತ್ತವಿಲಾಸ ಪ್ರಹಸನ**— ಮತ್ತವಿಲಾಸ ಪ್ರಹಸನವು ಕ್ರಿ.ಶ. ೬೦೦ ರಿಂದ ೬೩೦ರವರೆಗೆ ಕಂಚಿಯಲ್ಲಿ ಆಳಿದ ಪಲ್ಲವರಾಜ ಮಹೇಂದ್ರ ವಿಕ್ರಮವರ್ಮನಿಂದ ರಚಿತವಾದುದು. ಅದರ ಹೆಸರೇ ಸೂಚಿಸುವಂತೆ ಅದು ಒಂದು ಪ್ರಹಸನ. ಶೈವಕಾಪಾಲಿಕರೂ ಪಾಶುಪತರೂ ಬೌದ್ಧಶ್ರಮಣಕರೂ ಧರ್ಮದ ಹೆಸರಿನಲ್ಲಿ ನಡೆಸುವ ವ್ಯವಹಾರಗಳನ್ನು ಈ ಪ್ರಹಸನದಲ್ಲಿ ಪರಿಹಾಸ್ಯ ಮಾಡಲಾಗಿದೆ. ಅಲಂಕಾರ ಗ್ರಂಥಗಳಲ್ಲಿ ಈ ಪ್ರಹಸನ ಉದಾಹರಿಸಲ್ಪಟ್ಟಿದೆ. ಈ ಪ್ರಹಸನದಲ್ಲಿ ಭಾರವಿಯ ಕಿರಾತಾರ್ಜುನೀಯದ ಕಥೆಗೂ ಕರ್ಪಟರಚಿತ ಚೋರಶಾಸ್ತ್ರ ಗ್ರಂಥಕ್ಕೂ ನಿರ್ದೇಶವಿದೆ.

## ಶ್ರೀಹರ್ಷ (ಕ್ರಿ.ಶ. ೭ನೆಯ ಶತಮಾನ)

ಶ್ರೀಹರ್ಷನ ಪೂರ್ತಾ ಹೆಸರು ಶ್ರೀಹರ್ಷವರ್ಧನ ಶಿಲಾದಿತ್ಯ ; (ಶಿಲಾದಿತ್ಯ II). ಈತನು ಹುಟ್ಟಿದ್ದು ಕ್ರಿ.ಶ. ೫೯೦ರಲ್ಲಿ. ಪ್ರಭಾಕರವರ್ಧನ ಮತ್ತು



ಯಶೋಮತಿ ಇವನ ತಂದೆತಾಯಿಗಳು. ಶ್ರೀಹರ್ಷನಿಗೆ ರಾಜ್ಯವರ್ಧನ ಎಂಬ ಅಣ್ಣನೂ, ರಾಜ್ಯಶ್ರೀ ಎಂಬ ತಂಗಿಯೂ ಇದ್ದರು. ಪ್ರಭಾಕರವರ್ಧನನು ಕಾಲವಾದ ಮೇಲೆ ರಾಜ್ಯವರ್ಧನನೇ ಅರಸಾಗಬೇಕಾಗಿತ್ತು. ಆದರೆ ಅಷ್ಟರಲ್ಲಿಯೇ ರಾಜ್ಯಶ್ರೀಯ ಗಂಡ ಮೌಖಾರಿಯ ರಸ ಗೃಹವರ್ಮನು ಮಾಲವರಾಜನಿಂದ ಹತನಾದನೆಂದೂ ರಾಜ್ಯಶ್ರೀಯು ಸೆರೆಸಿಕ್ಕಿದಳೆಂದೂ ಕೇಳಿ ರಾಜ್ಯವರ್ಧನನು ಸೇಡು ತೀರಿಸಿಕೊಳ್ಳಲು ಮಾಲವನ ಮೇಲೆ ದಂಡೆತ್ತಿ ಹೋದನು. ಮಾಲವನನ್ನು ಕೊಂದು ತಂಗಿಯನ್ನು ಕರೆದುಕೊಂಡು ಬರುವಾಗ, ಮಾಲವರಾಜನ ಸಹಾಯಕನಾಗಿದ್ದ ಗೌಡರಾಜನಾದ ಶಶಾಂಕನು ಮೋಸದಿಂದ ಈತನನ್ನು ಕೊಂದುಬಿಟ್ಟನು. ರಾಜ್ಯಶ್ರೀ ವಿಂಧ್ಯಾರಣ್ಯಕ್ಕೆ ಓಡಿ ಹೋದಳು. ಇದರಿಂದ ಹರ್ಷನೇ ಕ್ರಿ.ಶ. ೬೦೬ರಲ್ಲಿ ಪಟ್ಟಕ್ಕೆ ಬರಬೇಕಾಯಿತು. ರಾಜ್ಯಭಾರವನ್ನು ವಹಿಸಿಕೊಂಡ ಕೂಡಲೇ ಅವನು ದಂಡೆತ್ತಿ ಹೋಗಿ ಮಾಲವ ರಾಜ್ಯವನ್ನು ವಶಪಡಿಸಿಕೊಂಡು ರಾಜ್ಯಶ್ರೀಯನ್ನು ಪತ್ತೆಹಚ್ಚಿ ತನ್ನ ರಕ್ಷಣೆಯಲ್ಲೇ ಇಟ್ಟುಕೊಂಡನು. ಆರು ವರ್ಷಗಳ ಕಾಲ, ಒಂದೇ ಸಮನೆ, ದಿಗ್ವಿಜಯಕ್ಕಾಗಿ ಯುದ್ಧಮಾಡಿ ಉತ್ತರಭಾರತದಲ್ಲೆಲ್ಲಾ ಜಯಶೀಲನಾಗಿ 'ಉತ್ತರಾಪಥೇಶ್ವರ'ನಾದನು. ದಕ್ಷಿಣದೇಶವನ್ನೂ ಜಯಿಸಬೇಕೆಂಬ ಹಂಬಲದಿಂದ ಆಕಡೆ ದಂಡೆತ್ತಿ ಹೋಗಿ, ಸುಮಾರು ಕ್ರಿ.ಶ. ೬೨೦ರಲ್ಲಿ ಆಗ ಕರ್ಣಾಟಕ ಚಕ್ರವರ್ತಿಯಾಗಿದ್ದ ಚಾಳುಕ್ಯರ ಇಮ್ಮಡಿ ಪುಲಿಕೇಶಿಯಿಂದ ಪರಾಜಿತನಾಗಿ ನರ್ಮದಾತೀರದಿಂದಲೇ ಹಿಂದಿರುಗಿಬಿಟ್ಟನು. ಇದೇ ಇವನ ಪ್ರಥಮ ಮತ್ತು ಅಂತಿಮ ಪರಾಜಯ. ಈ ಪರಾಜಯದಿಂದ ಶ್ರೀಹರ್ಷನಲ್ಲಿ ತುಂಬ ಪರಿವರ್ತನೆಯುಂಟಾಯಿತು. ಬೌದ್ಧ ತತ್ವಗಳ ಕಡೆ ಅವನ ಮನಸ್ಸು ತಿರುಗಿತು. ಶ್ರೀಹರ್ಷನು ತನ್ನ ತಂಗಿಯೊಡನೆ ಬೌದ್ಧಮತಾವಲಂಬಿಯಾಗಲು ಸಮಯ ನಿರೀಕ್ಷಿಸುತ್ತಿದ್ದುದಾಗಿ ಬಾಣನು ಹರ್ಷಚರಿತೆಯಲ್ಲಿ ಹೇಳಿದ್ದಾನೆ. ಶ್ರೀಹರ್ಷನು[1] ಕೊನೆಕೊನೆಗೆ ಬೌದ್ಧಮತಕ್ಕೆ ಸೇರಿಯೇ ಬಿಟ್ಟುದಾಗಿ ಹ್ಯೂನತ್ಸಾಂಗನು ಬರೆದಿಟ್ಟಿದ್ದಾನೆ. ಶ್ರೀಹರ್ಷನ ಕಾಲದಲ್ಲಿ ಪ್ರಜೆಗಳು ಅನ್ಯಮತಸಹಿಷ್ಣುಗಳಾಗಿದ್ದರಲ್ಲದೆ, ಒಂದು ಮತವನ್ನು ಬಿಟ್ಟು ಬೇರೊಂದು ಮತಕ್ಕೆ ಯಾವ ನಿರ್ಬಂಧವೂ ಇಲ್ಲದೆ ಸೇರಿಕೊಳ್ಳುತ್ತಿದ್ದರು. ಹಿಂದೂಧರ್ಮವೂ ಬೌದ್ಧಧರ್ಮವೂ ಪರಸ್ಪರ ಬೆರೆತು ಹೋಗಿತ್ತು.

---

[1] ಶ್ರೀಹರ್ಷನು ಕಾಲವಾದುದು ಕ್ರಿ.ಶ. ೬೪೮ರಲ್ಲಿ.

ಸ್ವತಃ ಕವಿಯಾಗಿದ್ದುದಲ್ಲದೆ ಶ್ರೀಹರ್ಷನು ಅನೇಕ ಪ್ರಸಿದ್ಧ ಕವಿಗಳಿಗೂ ವಿದ್ವಾಂಸರಿಗೂ ಆಶ್ರಯದಾತನಾಗಿದ್ದನು.[2] ಈತನ ಆಸ್ಥಾನಪಂಡಿತರಲ್ಲಿ ಬಾಣ, ಮಯೂರ, ಮತಂಗದಿವಾಕರ ಮುಂತಾದವರೂ ಚೀಣಾದೇಶದ ಹ್ಯೂನತ್ಸಾಂಗನೂ ಪ್ರಸಿದ್ಧರು. ಈತನ ಕಾಲದಲ್ಲೇ ನಲಂದ ವಿಶ್ವವಿದ್ಯಾಲಯವೂ, ದಿವಾಕರಮಿತ್ರನ ವಿದ್ಯಾಶ್ರಮವೂ, ಭಾರವಿ, ಭರ್ತೃಹರಿ ಮುಂತಾದ ಕವಿವರ್ಯರೂ ಇದ್ದದ್ದು. ಪ್ರತಿವರ್ಷವೂ ೨೧ ದಿವಸಗಳ ಕಾಲ ವಿದ್ವತ್ಸಭೆಯನ್ನು ಶ್ರೀಹರ್ಷನು ಏರ್ಪಡಿಸಿ ಮತವಿಷಯಿಕವಾದ ಚರ್ಚೆ ನಡೆಸುತ್ತಿದ್ದನು.

**ಶ್ರೀಹರ್ಷನ ಕೃತಿಗಳು** — (೧) ನಾಗಾನಂದನಾಟಕಮ್ (೨) ರತ್ನಾವಳೀ ನಾಟಿಕಾ (೩) ಪ್ರಿಯದರ್ಶಿಕಾ ನಾಟಿಕಾ (೪) ಸುಪ್ರಭಾತ ಸ್ತೋತ್ರ[3] (೫) ಅಷ್ಟಮಹಾಶ್ರೀಚೈತ್ಯಸಂಸ್ಕಾರಸ್ತೋತ್ರ[3] (೬) ಒಂದು [4]ನಿಘಂಟು (ವ್ಯಾಕರಣ?). ಇವಲ್ಲದೆ ಎರಡು ತಾಮ್ರಶಾಸನಗಳೂ,[5] ಸುಭಾಷಿತ ಗ್ರಂಥಗಳಲ್ಲಿ ಉದ್ಧೃತವಾಗಿರುವ ಕೆಲವು [6]ಬಿಡಿ ಶ್ಲೋಕಗಳೂ ಶ್ರೀಹರ್ಷರಚಿತವೆಂದು ಪ್ರಸಿದ್ಧವಾಗಿವೆ.

ಮೇಲ್ಕಂಡ ಮೊದಲ ಮೂರು ರೂಪಕಗಳನ್ನೂ ಧಾವಕನೋ ಬಾಣನೋ ಶ್ರೀಹರ್ಷನ ಹೆಸರಿನಲ್ಲಿ ಬರೆದುಕೊಟ್ಟನೆಂಬ ಭಾವನೆಯೂ ಇದೆ. ಕಾಶ್ಮೀರದ ಮಮ್ಮಟನು ಸುಮಾರು ಕ್ರಿ.ಶ. ೧೧೦೦ರಲ್ಲಿ ರಚಿಸಿದ ಕಾವ್ಯಪ್ರಕಾಶದ (i 2) 'ಕಾವ್ಯಂ ಯಶಸೇ ಅರ್ಥಕೃತೇ....' 'ಕಾಲಿದಾಸಾದೀನಾಮಿವ ಯಶಃ, ಶ್ರೀಹರ್ಷಾದೇಃ ಧಾವಕಾದೀನಾಮಿವ ಧನಮ್....' ಎಂಬುದರ ಮೇಲೆ

2 ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು ನಾಮ್ನೈವ ಕೇವಲಮಜಾಯತ ವಸ್ತುತಸ್ತು। ಗೀರ್ಹರ್ಷ ಏಷ ನಿಜಸಂಸದಿ ಯೇನ ರಾಜ್ಞಾ ಸಂಪೂಜಿತಃ ಕನಕ-ಕೋಟಿಶತೇನ ಬಾಣಃ॥ –ಸೊಡ್ಢಲನ ಉದಯಸುಂದರೀಕಥಾ (೧೧ನೆಯ ಶತಮಾನ)

3 ೪, ೫ ಎರಡೂ ಬೌದ್ಧಮತಕ್ಕೆ ಸೇರಿದುವು. ಮೊದಲನೆಯದರಲ್ಲಿ ೨೪ ಶ್ಲೋಕಗಳೂ, ಎರಡನೆಯದರಲ್ಲಿ ೫ ಶ್ಲೋಕಗಳೂ ಇವೆ. 4 ಈ ಗ್ರಂಥ ಉಪಲಬ್ಧವಾಗಿಲ್ಲ.

5 ಎಪಿ. ಇಂ. iv ೨೦೮; i ೬೭. ಬನ್ಸ್ಖರಾ ಮತ್ತು ಮಧುಬನ ತಾಮ್ರಶಾಸನಗಳು.
ಕರ್ಮಣಾ ಮನಸಾ ವಾಚಾ ಕರ್ತವ್ಯಂ ಪ್ರಾಣಿಭಿರ್ಹಿತಂ।
ಹರ್ಷೇಣೈತತ್ಸಮಾಖ್ಯಾತಂ ಧರ್ಮಾರ್ಜನಮನುತ್ತಮಮ್॥—(ಬನ್ಸ್ಖರಾಶಾಸನದಿಂದ)

6 ಅಶಠಮಲೋಲಮಜಿಹ್ಮಂ ತ್ಯಾಗಿನಮನುರಾಗಿಣಂ ವಿಶೇಷಜ್ಞಮ್।
ಯದಿ ನಾಶ್ರಯತಿ ನರಂ ಶ್ರೀಃ ಶ್ರೀರೇವ ಹಿ ವಂಚಿತಾ ತತ್ರ॥–ಸುಭಾಷಿತಾವಲೀ



ವ್ಯಾಖ್ಯಾನಮಾಡುತ್ತಾ ನಾಗೋಜಿ ಎಂಬ ಟೀಕಾಕಾರನು (ಕ್ರಿ.ಶ. ೧೭ನೆಯ ಶತಮಾನದ ಕೊನೆ) ತನ್ನ 'ಕಾವ್ಯಪ್ರದೀಪೋದ್ಯೋತ'ದಲ್ಲಿ ಹೀಗೆ ಹೇಳಿದ್ದಾನೆ. —"ಧಾವಕಃ ಕವಿಃ; ಸ ಹಿ ಶ್ರೀಹರ್ಷನಾಮ್ನಾ ರತ್ನಾವಲೀಂ ಕೃತ್ವಾ ಬಹುಧನಂ ಲಬ್ಧವಾನ್, ಇತಿ ಪ್ರಸಿದ್ಧಮ್". ಇದೇ ಮೂಲವಾಗಿ, ಶ್ರೀಹರ್ಷನಿಂದ ವಿಶೇಷ ಹಣ ಪಡೆದು ಧಾವಕನು ಹರ್ಷನ ಹೆಸರಿನಲ್ಲಿ ರತ್ನಾವಳಿಯನ್ನು ಬರೆದುಕೊಟ್ಟನೆಂಬ ಅಭಿಪ್ರಾಯ ಹರಡಿತು. ಆದರೆ ಮಮ್ಮಟನ ಮೂಲ ವಾಕ್ಯಕ್ಕೆ ಇಷ್ಟು ದೂರ ಅರ್ಥಮಾಡುವುದು ಅಸಂಗತವೆಂದು ತೋರುತ್ತದೆ. ಯಾಕೆಂದರೆ ಶ್ರೀಹರ್ಷ ಕವಿಪೋಷಕನಾಗಿದ್ದನೆಂಬುದು ಪ್ರಸಿದ್ಧ. ಧಾವಕನಿಗೆ ಈತನಿಂದ ಹಣ ದೊರೆತಿರಬಹುದು. ಇಷ್ಟು ಮಾತ್ರಕ್ಕೆ ಧಾವಕನು ರತ್ನಾವಳೀ ನಾಟಿಕೆಯನ್ನು ಬರೆದು ಹೆಸರನ್ನು ಮಾರಿಕೊಂಡನೆನ್ನುವುದು ಹೇಗೆ? ಸಾಲದುದಕ್ಕೆ ಕಾಶ್ಮೀರದ ಮಾತೃಕೆಗಳಲ್ಲಿ 'ಧಾವಕಾದೀನಾಮಿವ' ಎನ್ನುವುದಕ್ಕೆ 'ಬಾಣಾದೀನಾಮಿವ' ಎಂಬ ಪಾಠಾಂತರವೂ ಇದೆ. ಇದರ ಆಧಾರದ ಮೇಲೆ ಬಾಣನೇ ರತ್ನಾವಳಿಯನ್ನು ರಚಿಸಿ ಶ್ರೀಹರ್ಷನ ಹೆಸರಿನಲ್ಲಿ ಹಣದ ಲಾಭಕ್ಕಾಗಿ ಪ್ರಕಾಶಪಡಿಸಿದನೆಂಬ ಒಂದು ಮತವೂ ಉಂಟು. ಆದರೆ ಬಾಣನ ಶೈಲಿ ನಮಗೆ ಚೆನ್ನಾಗಿ ಪರಿಚಿತವಾದುದು. ಆ ಶೈಲಿಗೂ ಈ ನಾಟಕಗಳ ಶೈಲಿಗೂ ಅಜಗಜಾಂತರ. ಆದ್ದರಿಂದಲೇ ಬಾಣನು ಈ ನಾಟಕಗಳನ್ನು ರಚಿಸಿದನೆಂಬ ಮತ ಪ್ರಬಲವಾಗಲಿಲ್ಲ. ಧಾವಕನ ಶೈಲಿ ನಮಗೆ ತಿಳಿಯದು. ಈತನ ಗ್ರಂಥ ಯಾವುದೂ ದೊರೆತಿಲ್ಲ.

ಮೂರು ನಾಟಕಗಳನ್ನೂ ಒಬ್ಬನೇ ಬರೆದನೆಂಬುದರಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ. ಪ್ರಸ್ತಾವನೆಯ ಬಹುಭಾಗ (ಶ್ರೀಹರ್ಷೋ ನಿಪುಣಃ ಕವಿಃ ಎಂಬ ಶ್ಲೋಕವೂ ಸೇರಿ) ಮೂರು ನಾಟಕಗಳಲ್ಲೂ ಒಂದೇ ಆಗಿದೆ. ಕೆಲವು ಶ್ಲೋಕಗಳು, ಮಾತುಗಳು, ಭಾವಗಳು ಮೂರು ನಾಟಕಗಳಲ್ಲೂ ಪುನರುಕ್ತವಾಗಿವೆ. ಒಂದೇ ಶೈಲಿ, ಒಂದೇ ಬಗೆಯ ಪ್ರಾಕೃತಭಾಷೆ, ಒಂದೇ ರೀತಿಯ ಸನ್ನಿವೇಶ, ಸಮಾನವಾದ ವರ್ಣನೆ ಮೂರು ನಾಟಕಗಳಲ್ಲೂ ಕಂಡುಬರುತ್ತವೆ. ಆದ್ದರಿಂದ ಈ ನಾಟಕಗಳು ಏಕಕರ್ತೃಕವಾದುವು. ನಾಟಕಗಳ ಪ್ರಸ್ತಾವನೆಯಲ್ಲಿ ಹೇಳಿರುವಂತೆ ಆ ನಾಟಕಕಾರನು ಶ್ರೀಹರ್ಷಮಹಾರಾಜ. ನಾಗಾನಂದ ನಾಟಕವನ್ನು ಶ್ರೀಹರ್ಷನು ರಚಿಸಿ ಆಡಿಸಿದನೆಂಬ ಇತ್ಸಿಂಗನ ಮಾತು ಈ ಸಿದ್ಧಾಂತಕ್ಕೆ ಪೋಷಕವಾಗಿದೆ.

## ರತ್ನಾವಳೀ ನಾಟಿಕಾ

ರತ್ನಾವಳೀನಾಟಿಕೆಯು ಶ್ರೀಹರ್ಷನ ಕೃತಿಗಳಲ್ಲಿ ಅತ್ಯುತ್ತಮವಾದುದೆಂದು ಸಮಾಲೋಚಕರಿಂದ ನಿರ್ಣೀತವಾಗಿದೆ. ಸಿಂಹಳರಾಜಪುತ್ರಿಯಾದ ರತ್ನಾವಳಿಯನ್ನು ಕೌಶಾಂಬಿಯ ರಾಜ ಉದಯನನು ಮದುವೆಯಾದ ರಮ್ಯ ಪ್ರಸಂಗವೇ ಈ ನಾಟಿಕೆಯ ವಸ್ತು. ಈ ಕಥಾವಸ್ತು ಕಲ್ಪಿತವಲ್ಲ. ವತ್ಸರಾಜ ಉದಯನನ ಕಥೆ ತುಂಬ ಪ್ರಾಚೀನ. ಶ್ರೀಹರ್ಷನಿಗಿಂತ ಹಿಂದಿನ ಅನೇಕ[7] ಪ್ರಸಿದ್ಧಕವಿಗಳು ಉದಯನ-ವಾಸವದತ್ತೆಯರ ಪ್ರಣಯವನ್ನೂ ಉದಯನನ ಅಮಾತ್ಯನಾದ ಯೌಗಂಧರಾಯಣನ ಸ್ವಾಮಿನಿಷ್ಠೆಯನ್ನೂ ಉಲ್ಲೇಖಿಸಿದ್ದಾರೆ. ಆದ್ದರಿಂದ ನಾಟಿಕೆಯ ವಸ್ತು ಕಲ್ಪಿತವಾಗಿರಬೇಕೆಂಬ ಒಂದು ನಿಯಮ ಇಲ್ಲಿ ಪಾಲಿತವಾಗಿಲ್ಲವೆನ್ನಬೇಕು. ನಾಟಿಕೆಯ ಇತರ ಲಕ್ಷಣಗಳೆಲ್ಲಾ ಇದರಲ್ಲಿವೆ. ಇದರ ಅಂಕಗಳು ನಾಲ್ಕು ಮಾತ್ರ; ಸ್ತ್ರೀಪಾತ್ರ ಹೆಚ್ಚು; ನಾಯಕನು ಪ್ರಖ್ಯಾತನಾದ ಧೀರ ಲಲಿತ; ನಾಯಿಕೆ ಅವಿವಾಹಿತ ರಾಜಪುತ್ರಿ.

ರತ್ನಾವಳಿಯು ಕಾಳಿದಾಸನ ಮಾಲವಿಕಾಗ್ನಿಮಿತ್ರದ ಮಾದರಿಯಲ್ಲಿ ರಚಿತವಾಗಿದೆ. ಈ ನಾಟಿಕೆಯ ನಾಯಿಕೆಯು ಕಾರಣಾಂತರಗಳಿಗಾಗಿ ಸಾಗರಿಕೆಯೆಂಬ ಹೆಸರಿನಿಂದ ನಾಯಕನ ಪಟ್ಟಮಹಿಷಿ ವಾಸವದತ್ತೆಯ ದಾಸಿಯಾಗಿದ್ದು, ಕೊನೆಗೆ ತನ್ನ 'ರತ್ನಾವಳಿ'ಯಿಂದಲೇ ಸಿಂಹಳ ರಾಜಪುತ್ರಿಯಾದ ರತ್ನಾವಳಿಯೆಂದು ಗುರುತಿಸಲ್ಪಡುವುದರಿಂದ ನಾಟಕಕ್ಕೆ ರತ್ನಾವಳಿಯೆಂಬ ಹೆಸರು ಸಾರ್ಥಕವೂ ಉಚಿತವೂ ಆಗಿದೆ. ಕೊನೆಯ ಅಂಕದಲ್ಲಿ ಬರುವ ಐಂದ್ರಜಾಲಿಕಪ್ರಕರಣದಿಂದ ಕಥೆ ತುಂಬ ಸ್ವಾರಸ್ಯವಾಗಿರುವುದಲ್ಲದೆ ನಾಟಕಕರ್ತನ ವಸ್ತುರಚನಾನೈಪುಣ್ಯವೂ ಸ್ಪಷ್ಟವಾಗುತ್ತದೆ.

ನಾಟಿಕೆಯಲ್ಲಿ ನಿರೂಪಿತವಾಗಬೇಕಾದುದು ಶೃಂಗಾರವೇ ಆದರೂ ರತ್ನಾವಳಿಯಲ್ಲಿನ ಶೃಂಗಾರ ಉದಾತ್ತವಾದುದಲ್ಲ. ಅದು ಕೇವಲ ಯೌವನದ ಚಾಪಲ್ಯ, ರೂಪದ ಮೋಹ. ಕಾಳಿದಾಸನ ನಾಟಕಗಳಲ್ಲಿನ ಶೃಂಗಾರಕ್ಕೂ ಶ್ರೀಹರ್ಷನಿಂದ ಪ್ರತಿಪಾದಿತವಾದ ಶೃಂಗಾರಕ್ಕೂ ಅಜಗಜಾಂತರ.

---

7 (ಅ) ಪ್ರಾಪ್ಯಾವಂತೀನ್ ಉದಯನಕಥಾಕೋವಿದಗ್ರಾಮವೃದ್ಧಾನ್, ಪ್ರದ್ಯೋತಸ್ಯ ಪ್ರಿಯದುಹಿತರಂ ವತ್ಸರಾಜೋಽತ್ರ ಜಹ್ರೇ। — ಕಾಳಿದಾಸನ ಮೇಘದೂತ.
(ಆ) ಯೌಗಂಧರಾಯಣ ಇವ ಉದಯನಸ್ಯ ರಾಜ್ಞಃ—ಶೂದ್ರಕನ ಮೃಚ್ಛಕಟಿಕ.



## ಪ್ರಿಯದರ್ಶಿಕಾ ನಾಟಿಕಾ

ಪ್ರಿಯದರ್ಶಿಕೆಯು ರತ್ನಾವಳಿಯಂತೆಯೇ ನಾಲ್ಕು ಅಂಕಗಳ ನಾಟಿಕೆ. ಅದರ ವಸ್ತುವೂ ಉದಯನನ ಮತ್ತೊಂದು ಪ್ರೇಮಪ್ರಕರಣ. ಈ ನಾಟಿಕೆಯ ನಾಯಿಕೆಯಾದ ಪ್ರಿಯದರ್ಶಿಕೆಯೂ ಒಬ್ಬ ರಾಜಕುಮಾರಿಯೇ ಆದರೂ ಯುದ್ಧಬಂದಿಯಾಗಿದ್ದು ರಾಣಿ ವಾಸವದತ್ತೆಯ ಚೇಟಿಯಾಗಿರುತ್ತಾಳೆ. ಅವಳು ಸೇನಾಪತಿಗೆ ಅರಣ್ಯದಲ್ಲಿ ಸಿಕ್ಕಿದ್ದರಿಂದ ಆರಣ್ಯಕೆಯೆಂದೇ ಕರೆಯಲ್ಪಡುತ್ತಾಳೆ. ಒಂದು ವಿಶೇಷ ಸಂದರ್ಭದಲ್ಲಿ ಅವಳಿಗೂ ರಾಜನಿಗೂ ಪ್ರೇಮ ಅಂಕುರಿತವಾಗುತ್ತದೆ. ಅರಮನೆಯಲ್ಲಿ ಪ್ರದರ್ಶಿತವಾದ ಒಂದು ನಾಟಕದಲ್ಲಿ ಆರಣ್ಯಕೆಯ ಸಖಿ ಮತ್ತು ರಾಜನ ವಿದೂಷಕ—ಈ ಇಬ್ಬರ ಸಂಚಿನಿಂದ ನಾಯಿಕೆಯ ಪಾತ್ರವಹಿಸಿದ್ದ ಆರಣ್ಯಕೆಯೊಡನೆ ರಾಜನೇ ನಾಯಕನ ಪಾತ್ರ ವಹಿಸಿ ಅವಳೊಡನೆ ಪ್ರೇಮಾಲಾಪಮಾಡುತ್ತಾನೆ. ವಾಸವದತ್ತೆಗೆ ಈ ಸಂಚು ತಿಳಿದು ಆರಣ್ಯಕೆ ಮತ್ತು ವಿದೂಷಕರು ಬಂಧಿತರಾಗುತ್ತಾರೆ. ಆರಣ್ಯಕೆ ದುಃಖದಿಂದ ವಿಷಪಾನ ಮಾಡಲಾಗ ವಿಷವೈದ್ಯನಾಗಿದ್ದ ಉದಯನನೇ ಅವಳನ್ನು ಬದುಕಿಸಬೇಕಾಗುತ್ತದೆ. ಅದಕ್ಕಾಗಿ ಅವಳನ್ನು ಕರೆತಂದಾಗ ರಾಜನ ಬಳಿ ಯಾದೃಚ್ಛಿಕವಾಗಿ ಬಂದಿದ್ದ ಅವಳ ತಂದೆಯ ಮನೆಯ ಕಂಚುಕಿ ಅವಳನ್ನು ಗುರುತಿಸುತ್ತಾನೆ. ಇದರಿಂದ ಆರಣ್ಯಕೆಯು ವಾಸವದತ್ತೆಯ ಚಿಕ್ಕಮ್ಮನ ಮಗಳೆಂಬುದು ಗೊತ್ತಾಗುತ್ತದೆ. ವಾಸವದತ್ತೆಯೇ ಸಂತೋಷದಿಂದ ಆರಣ್ಯಕೆಯಾಗಿದ್ದ ಆ ತನ್ನ ತಂಗಿ ಪ್ರಿಯದರ್ಶಿಕೆಯನ್ನು ತನ್ನ ಗಂಡನಿಗೆ ಮದುವೆಮಾಡಿಕೊಡುತ್ತಾಳೆ. — ಈ ವಸ್ತುವಿನ ರಚನೆಯಲ್ಲೂ ಶ್ರೀಹರ್ಷನ ನೈಪುಣ್ಯವನ್ನು ಮನಗಾಣಬಹುದು.

ಈ ನಾಟಿಕೆಯೊಳಗೇ ಮತ್ತೊಂದು ನಾಟಕದ ಪ್ರದರ್ಶನವಿರುವುದು ಕವಿಯ ಸಂವಿಧಾನಕೌಶಲಕ್ಕೆ ಸ್ಪಷ್ಟವಾದ ನಿದರ್ಶನ. ನಾಟಕದೊಳಗಿನ ಮತ್ತೊಂದು ನಾಟಕಕ್ಕೆ 'ಗರ್ಭಾಂಕ'ವೆನ್ನುತ್ತಾರೆ. ನಾಟಕದಲ್ಲಿ 'ಗರ್ಭಾಂಕ'ವನ್ನು ಅಳವಡಿಸಿಕೊಂಡಿರುವ ಸಂಸ್ಕೃತ ಕವಿಗಳೊಳಗೆ ಶ್ರೀಹರ್ಷನೇ ಮೊದಲನೆಯವನು. ಈ ಗರ್ಭಾಂಕದಿಂದ ನಾಟಕದ ಮೌಲಿಕತೆ ಮತ್ತು ಸ್ವಾರಸ್ಯ ಹೆಚ್ಚಿರುವುದು ಸುಸ್ಪಷ್ಟ.

ಒಬ್ಬನೇ ರಾಜನ ಎರಡು ಮದುವೆಗಳನ್ನು ಬೇರೆ ಬೇರೆಯಾಗಿ ಒಬ್ಬನೇ ಕವಿ ಒಂದೇ ವಿಧವಾಗಿ ಚಿತ್ರಿಸಿರುವ 'ಅವಳಿ' ನಾಟಿಕೆಗಳು ರತ್ನಾವಳೀ,

ಪ್ರಿಯದರ್ಶಿಕೆ,—ಇವೆರಡೂ. ಎರಡರಲ್ಲೂ ಕಲ್ಪಿತ ಕಥಾಭಾಗವೇ ಹೆಚ್ಚು; ಆದರೂ ವಸ್ತುರಚನೆ ಮತ್ತು ಸಂವಿಧಾನಕೌಶಲಗಳು ಏಕರೀತಿಯಾಗಿವೆ.

## ನಾಗಾನಂದನಾಟಕಂ

ನಾಗಾನಂದವು ಐದು ಅಂಕಗಳ ನಾಟಕ. ಇದರ ಎರಡು ನಾಂದೀ ಪದ್ಯಗಳೂ ಬುದ್ಧಪರವಾಗಿವೆ. ಮೊದಲ ಎರಡು ಅಂಕಗಳಲ್ಲಿ ನಾಯಕನಾದ ಜೀಮೂತವಾಹನನೂ ಮಲಯವತಿಯೂ ಪರಸ್ಪರ ಪ್ರಥಮ ಸಂದರ್ಶನದಲ್ಲೇ ಪ್ರೇಮಪರವಶರಾದುದೂ, ಸ್ವಲ್ಪ ವಿರಹದ ಬಳಿಕ ಮದುವೆಯಾದುದೂ ನಿರೂಪಿತವಾಗಿದೆ. ಮೂರನೆಯ ಅಂಕವು ವಿವಾಹಾನಂತರ ನವದಂಪತಿಗಳ ಮತ್ತು ಅವರ ಪರಿವಾರದ ಸಂತೋಷ ಸಂಭ್ರಮಗಳನ್ನು ಚಿತ್ರಿಸುತ್ತದೆ. ವಿವಾಹವಾದ ಒಂದು ವಾರಾವಧಿಯಲ್ಲೇ, ನಾಯಕನು ಗರುಡನಿಗೆ ಆಹಾರವಾಗಬೇಕಾಗಿದ್ದ ನಾಗನೊಬ್ಬನನ್ನು ರಕ್ಷಿಸುವುದಕ್ಕಾಗಿ ತಾನೇ ಗರುಡನಲ್ಲಿಗೆ ಹೋಗುವ ಸಂದರ್ಭ ನಾಲ್ಕನೆಯ ಅಂಕದಲ್ಲಿ ವಿವರಿಸಲ್ಪಟ್ಟಿದೆ. ಐದನೆಯ ಅಂಕದಲ್ಲಿ ಗರುಡನು ನಾಯಕನ ದೇಹವನ್ನು ತನ್ನ ಕೊಕ್ಕು ಮತ್ತು ಉಗುರುಗಳಿಂದ ಬಗೆದು ಅವನ ಮಾಂಸವನ್ನು ತಿನ್ನುತ್ತಿರುವಾಗ ಅವನು ನಾಗನಲ್ಲವೆಂಬುದೂ ವಿದ್ಯಾಧರಕುಮಾರ ಜೀಮೂತವಾಹನನೆಂಬುದೂ ತಿಳಿದು ಪಶ್ಚಾತ್ತಾಪಭರಿತನಾಗುತ್ತಾನೆ. ನಾಯಕನು ಗರುಡನಿಗೆ ಅಹಿಂಸಾಧರ್ಮವನ್ನು ಉಪದೇಶಿಸಿ ಪ್ರಾಣಬಿಡುತ್ತಾನೆ. ಆದರೆ ಗೌರೀದೇವಿಯು ಅವನನ್ನು ಪುನಃ ಬದುಕಿಸಿ ನಾನಾ ಬಗೆಯಾಗಿ ಹರಸುತ್ತಾಳೆ. ಈ ಮಧ್ಯೆ ಗರುಡನೂ ಸ್ವರ್ಗದಿಂದ ಅಮೃತವನ್ನು ತಂದು ವರ್ಷಿಸುತ್ತಾನೆ. ಅದರಿಂದ ಹಿಂದೆ ಮಡಿದು ಅಸ್ಥಿಮಾತ್ರವಾಗಿ ಉಳಿದಿದ್ದ ಎಲ್ಲ ನಾಗಗಳೂ ಅನಿರೀಕ್ಷಿತವಾಗಿ ಬದುಕಿಕೊಂಡು ಆನಂದದಿಂದ ಹರಿದಾಡಲಾರಂಭಿಸುತ್ತವೆ. ಈ ರೀತಿ ಉಪಸಂಹೃತವಾಗುವ ನಾಟಕದ ಹೆಸರಿನ ಔಚಿತ್ಯವನ್ನು, ಸಾರ್ಥಕ್ಯವನ್ನು ಬರೆದು ನಿರೂಪಿಸಬೇಕಾಗಿಲ್ಲ.

ಈ ನಾಟಕವು ಅನೇಕ ದೃಷ್ಟಿಗಳಿಂದ ವೈಶಿಷ್ಟ್ಯಪೂರ್ಣವಾಗಿದೆ. ಮುಖ್ಯವಾಗಿ ಬೌದ್ಧ ಮತ್ತು ಸನಾತನ ಹಿಂದೂ ಸಂಸ್ಕೃತಿಗಳ ಹಿತವಾದ ಮಿಳನ ರಂಗಮಂಚದ ಮೇಲೆ ಪ್ರದರ್ಶಿತವಾಗಿರುವುದನ್ನು ಪ್ರಪ್ರಥಮವಾಗಿ ನಾವು ಕಾಣುವುದು ಈ ನಾಟಕದಲ್ಲೇ. ನಾಂದೀ ಶ್ಲೋಕಗಳೆರಡೂ ಬುದ್ಧಸ್ತುತಿ



ಪರವಾಗಿರುವುದಲ್ಲದೆ ನಾಯಕನು ಸನಾತನ ಧರ್ಮಾವಲಂಬಿಯಾಗಿದ್ದರೂ ಬೌದ್ಧ ಆದರ್ಶಗಳನ್ನೇ ಮೆಚ್ಚಿ ಪಾಲಿಸುವವನು. ಕಥಾವಸ್ತುವೂ ಬೌದ್ಧತತ್ವಪ್ರತಿಪಾದಕವಾದುದು. ಇವುಗಳ ಜತೆಯಲ್ಲೇ ಮತ್ತೊಂದು ಕಡೆ ಸನಾತನಧರ್ಮಾನುಯಾಯಿಯಾಗಿ ಅದೇ ಸಂಪ್ರದಾಯದ ನಿತ್ಯನೈಮಿತ್ತಿಕ ಕರ್ಮಗಳನ್ನು ಚಾಚೂ ತಪ್ಪದೆ ಅನುಷ್ಠಿಸುವ (ನಾಯಕನ) ಮಾತಾಪಿತೃಗಳು; ಗೌರಿಯ ಪರಮಭಕ್ತೆಯಾದ ನಾಯಿಕೆ; ಕೊನೆಯಲ್ಲಿ ನಾಯಕ ಗೌರಿಯಿಂದಲೇ ಜೀವಿತನಾಗಿ ಆ ದೇವಿಯನ್ನೇ ಬಾಯಿತುಂಬ ಸ್ತುತಿಸುವುದು; — ಇವೆಲ್ಲವೂ ಒಟ್ಟಿಗೇ ಚಿತ್ರಿತವಾಗಿರುವ, ಒಂದೇ ಸಂಸಾರದ ಕಥೆಯಾದ, ಈ ನಾಗಾನಂದವು ಆ ಕಾಲದ ಮತಸ್ವರೂಪದ ಸ್ಪಷ್ಟ ಪ್ರತಿಬಿಂಬವಾಗಿದೆ.

ರಸ— ಈ ನಾಟಕದ ಪ್ರಧಾನ ರಸ ದಯಾವೀರ[8]. ಇದು ಮೊದಲನೆಯ ಮತ್ತು ಮೂರನೆಯ ಅಂಕಗಳಲ್ಲಿ ಸೂಚಿತವಾಗಿ, ನಾಲ್ಕು ಐದನೆಯ ಅಂಕಗಳಲ್ಲಿ ವಿಶೇಷವಾಗಿ ಪ್ರಕಾಶಿತವಾಗಿದೆ. ಶೃಂಗಾರವು ೧, ೨, ೩ ನೆಯ ಅಂಕಗಳಲ್ಲಿ ವಿಸ್ತಾರವಾಗಿ ಬರುತ್ತದೆ. ಮೂರನೆಯ ಅಂಕದ ಮೊದಲನೆಯ ಅರ್ಧದಲ್ಲಿ ಹಾಸ್ಯವೂ, ನಾಲ್ಕು ಐದನೆಯ ಅಂಕಗಳಲ್ಲಿ ಬರುವ ಸ್ಮಶಾನವರ್ಣನೆಯಲ್ಲಿ ಬೀಭತ್ಸರಸವೂ, ಗರುಡಾಗಮನದಲ್ಲಿ ರೌದ್ರರಸವೂ, ಶಂಖಚೂಡನ ತಾಯಿ ಮತ್ತು ನಾಯಕನ ತಾಯಿ ತಂದೆ ಪತ್ನಿ ಇವರು ರೋದಿಸುವ ಕಡೆ ಕರುಣರಸವೂ, ಗೌರಿಯು ಪ್ರತ್ಯಕ್ಷವಾಗುವ ಕಡೆ ಅದ್ಭುತರಸವೂ ಚಿತ್ರಿತವಾಗಿವೆ.

ಮೂರನೆಯ ಅಂಕದ ಆದಿಯಲ್ಲಿ ಬರುವ ಹಾಸ್ಯವು ಅಲ್ಲೇ ಮುಂದೆ ಬರುವ ಶೃಂಗಾರಕ್ಕೆ ಪರಿಪೋಷಕವಾದುದು. ಹಾಸ್ಯ, ಶೃಂಗಾರ ಎರಡೂ ಪರಸ್ಪರ ಹೊಂದಿಕೊಂಡಿರತಕ್ಕ ರಸಗಳು. ಆದ್ದರಿಂದಲೇ, ನಾಯಕ ನಾಯಿಕೆಯರು ನೋಡುತ್ತಿರುವಂತೆಯೇ ಚೇಟಿಯು ವಿದೂಷಕನ ಮುಖಕ್ಕೆ ತಮಾಲರಸ ಬಳಿದು ವರ್ಣಿಸಿ, ಲಜ್ಜೆಯಿಂದ ಗಂಭೀರವದನೆಯಾಗಿದ್ದ ನಾಯಿಕೆ ನಗುವಂತೆ ಮಾಡಿದುದು ನಾಯಕನ ಸಂತೋಷಕ್ಕೆ ಕಾರಣವಾಗಿ ಉತ್ತಮವಾದ ಶೃಂಗಾರಮಯ ಸನ್ನಿವೇಶಕ್ಕೆ ಅವಕಾಶಕೊಡುತ್ತದೆ. ಆದರೂ ಶೃಂಗಾರಮಯವಾದ

---

8 ವೀರರಸದಲ್ಲಿ ನಾಲ್ಕು ಬಗೆ—೧. ಯುದ್ಧವೀರ ೨. ಧರ್ಮವೀರ ೩. ದಾನವೀರ ೪. ದಯಾವೀರ. (ಕ್ರಮವಾಗಿ ಶ್ರೀರಾಮ, ಯುಧಿಷ್ಠಿರ, ಕರ್ಣ, ಜೀಮೂತವಾಹನ ಇವರು ಈ ನಾಲ್ಕು ಬಗೆಯ ವೀರರು.) ಧ್ವನ್ಯಾಲೋಕ ಸಂಪ್ರದಾಯದ ಆಲಂಕಾರಿಕರ ಮತದಲ್ಲಿ ಈ ನಾಟಕದ ರಸ 'ಶಾಂತ'.

ಮೊದಲ ಮೂರು ಅಂಕಗಳಿಗೂ ದಯಾವೀರನಾದ ನಾಯಕನು ಪರಹಿತ ಸಂಪಾದನೆಗಾಗಿ ಶರೀರತ್ಯಾಗಮಾಡುವುದನ್ನು ಚಿತ್ರಿಸುವ ನಾಲ್ಕು ಐದನೆಯ ಅಂಕಗಳಿಗೂ ಇರುವ ಸಂಬಂಧ ಅಷ್ಟು ನೈಜವಾಗಿಲ್ಲ.

ತಾನೇ ರಚಿಸಿದ ನಾಗಾನಂದ ನಾಟಕದ ಪ್ರದರ್ಶನವನ್ನು ಕನೋಜಿನಲ್ಲಿ ಪ್ರೇಕ್ಷಿಸಿ ಸಂತೋಷಪರವಶನಾದ ಶ್ರೀಹರ್ಷನೇ ಅದನ್ನು ಸಂಗೀತಕ್ಕೂ ಅಳವಡಿಸಿದುದಾಗಿ ಇತ್ಸಿಂಗನು ಬರೆದಿಟ್ಟಿದ್ದಾನೆ.

ಶ್ರೀಹರ್ಷರಚಿತ ಮೂರು ನಾಟಕಗಳೂ ಅಪೂರ್ವ ವಸ್ತುರಚನಾಲಂಕೃತ ಗಳಾಗಿರುವಂತೆಯೇ ಸರಳವೂ ಲಲಿತವೂ ಮಧುರವೂ ಆದ ಶೈಲಿಯಿಂದ ಕೂಡಿ ಮನೋಹರವಾಗಿವೆ. ವರ್ಣನೆಗಳಲ್ಲಿ ಕೆಲವು ಕವಿಸಮಯಾನುಸಾರಿ ಗಳಾಗಿದ್ದರೂ ಮತ್ತೆ ಕೆಲವು ಸ್ವಾಭಾವಿಕವಾಗಿವೆ. ನೆನಪಿನಲ್ಲಿಟ್ಟುಕೊಳ್ಳ ಬೇಕಾದ ಅನುಭವೋಕ್ತಿಗಳೂ ಹರ್ಷನ ನಾಟಕಗಳಲ್ಲಿ ಹೇರಳವಾಗಿವೆ. ಮುಖ್ಯವಾಗಿ ಈ ನಾಟಕಗಳು ತುಂಬ ಚಿಕ್ಕದಾಗಿಯಾಗಲಿ ತುಂಬ ದೀರ್ಘವಾಗಿ ಯಾಗಲಿ ಇಲ್ಲದೆ ಪ್ರದರ್ಶನಕ್ಕೆ ಯೋಗ್ಯವಾಗಿವೆ.

### **ಭವಭೂತಿ** (ಕ್ರಿ.ಶ. ೭-೮ನೆಯ ಶತಮಾನ)

ಸಂಸ್ಕೃತನಾಟಕಗಳನ್ನು ರಚಿಸಿರುವ ಕವಿಗಳ ಅಗ್ರಪಂಕ್ತಿಯಲ್ಲಿ ಭವ ಭೂತಿಯೂ ಪರಿಗಣಿತನಾದವನು. ಈತನು ಯಜ್ಞಯಾಗಾದಿಗಳನ್ನು ಮಾಡಿ ಪ್ರಸಿದ್ಧವಾಗಿದ್ದ ಕಾಶ್ಯಪ ಗೋತ್ರದ ಬ್ರಾಹ್ಮಣ ವಂಶದಲ್ಲಿ ಜತುಕರ್ಣೆ ಮತ್ತು ನೀಲಕಂಠ ಎಂಬ ಮಾತಾಪಿತೃಗಳಿಗೆ ಮಗನಾಗಿ ಹುಟ್ಟಿ, ಜ್ಞಾನನಿಧಿಯೆಂಬ ಅನ್ವರ್ಥವಾದ ಹೆಸರಿನ ಗುರುವಿನಲ್ಲಿ ವಿದ್ಯಾಭ್ಯಾಸ ಮಾಡಿ, ವೇದ ಷಡ್ದರ್ಶನ ವ್ಯಾಕರಣ ಅಲಂಕಾರಾದಿ ಶಾಸ್ತ್ರಗಳಲ್ಲಿ ಪಂಡಿತನಾಗಿದ್ದುದಾಗಿ ಈತನ ನಾಟಕ ಗಳ ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ಈತನು ದಕ್ಷಿಣಾಪಥದ ಪದ್ಮಪುರ ದವನು. ಕನೋಜಿನಲ್ಲಿ ಕ್ರಿ.ಶ. ಏಳನೆಯ ಶತಮಾನದ ಕೊನೆಯಲ್ಲಿ ಆಳಿದ ಯಶೋವರ್ಮನು ಈತನಿಗೆ ಆಶ್ರಯವಿತ್ತಿದ್ದನು. ಭವಭೂತಿಯ ವಾಸ್ತವಿಕ ವಾದ ಹೆಸರು ಶ್ರೀಕಂಠ. ಭವಭೂತಿಯೆಂಬುದು ಈತನು ಸಂಪಾದಿಸಿದ ಬಿರುದಿರಬೇಕೆಂದು ಕೆಲವರ ಮತ. ಈತನು ಭಿಕ್ಷುರೂಪಿಯಾದ ಭವ (ಈಶ್ವರ)ನಿಗೆ ಭಿಕ್ಷೆನೀಡಿ ಆತನಿಂದ ಭೂತಿ (ವಿಭೂತಿ ಅಥವಾ ಐಶ್ವರ್ಯ) ಪಡೆದು ಭವಭೂತಿಯಾದನೆಂದು ತಿಳಿಸುವ ದಂತಕಥೆಯೊಂದಿದೆ. ಈತನ



'ಸಾಂಬಾ ಪುನಾತು **ಭವಭೂತಿ**ಪವಿತ್ರಮೂರ್ತಿಃ....' ಎಂಬ ಶ್ಲೋಕವನ್ನು ಮೆಚ್ಚಿದ (ಯಶೋವರ್ಮ?) ರಾಜನು ಇವನಿಗೆ 'ಭವಭೂತಿ' ಎಂಬ ಬಿರುದ ನ್ನಿತ್ತು ಸನ್ಮಾನಿಸಿದನೆಂದು ಜಗದ್ಧರ ಎಂಬ ವ್ಯಾಖ್ಯಾನಕಾರನು ಹೇಳಿದ್ದಾನೆ

ಬಾಣನು ತನ್ನ ಹಿಂದಿನ ಕವಿಗಳ ಹೆಸರುಗಳನ್ನು ಉಲ್ಲೇಖಿಸುವಾಗ ಭವಭೂತಿಯ ಹೆಸರನ್ನು ಹೇಳಿಲ್ಲ. ಆದ್ದರಿಂದ ಭವಭೂತಿಯು ಬಾಣನಿಗಿಂತ ಈಚಿನವನಿರಬೇಕು. 'ಗೌಡವಹೋ' ಎಂಬ ಪ್ರಾಕೃತ ಕಾವ್ಯವನ್ನು ರಚಿಸಿರುವ [9]ವಾಕ್ಪತಿರಾಜನು ಭವಭೂತಿಗೆ ತಾನು ತುಂಬ ಋಣಿಯೆಂದು ಹೆಮ್ಮೆಯಿಂದ ಹೇಳಿಕೊಂಡಿರುವುದರಿಂದ ಭವಭೂತಿಯು ೮ನೆಯ ಶತಮಾನದ ವಾಕ್ಪತಿ ರಾಜನಿಗಿಂತ ಹಿಂದಿನವನು ಅಥವಾ ಹಿರಿಯ ಸಮಕಾಲೀನ.

**ಭವಭೂತಿಯ ಕೃತಿಗಳು**—ಮಹಾವೀರಚರಿತ, ಮಾಲತೀಮಾಧವ ಮತ್ತು ಉತ್ತರರಾಮಚರಿತ—ಈ ಮೂರೂ ಭವಭೂತಿರಚಿತ ನಾಟಕಗಳು.[10] ಇವಲ್ಲದೆ ಇನ್ನೂ ಕೆಲವು ಕಾವ್ಯಾದಿಗಳು ಈತನಿಂದ ರಚಿತವಾಗಿದ್ದಿರಬಹು ದಾದರೂ ನಮಗೆ ಈಗ ಅವು ಉಪಲಬ್ಧವಾಗಿಲ್ಲ.

**ಮಹಾವೀರಚರಿತೆ**—ಮಹಾವೀರಚರಿತವು ಏಳು ಅಂಕಗಳ ವೀರರಸ ಪ್ರಧಾನವಾದ ನಾಟಕ. ಇದು ಭವಭೂತಿಯ ಪ್ರಥಮ ಕೃತಿಯೆಂದು ಪರಿಗಣಿತವಾಗಿದೆ. ಸೀತಾಕಲ್ಯಾಣದಿಂದ ಆರಂಭವಾಗಿ ಶ್ರೀರಾಮ ಪಟ್ಟಾಭಿ ಷೇಕದಲ್ಲಿ ಮುಗಿಯುವ ಶ್ರೀರಾಮನ ಕಥೆಯೇ ಈ ನಾಟಕದ ವಸ್ತು. ಆದರೆ ಕಥಾಸರಣಿ ರಾಮಾಯಣದಲ್ಲಿರುವಂತೆ ಇಲ್ಲ. ಕಲ್ಪಿತಾಂಶಗಳಿಂದ ಕೂಡಿ ಕೊಂಡು ನವೀನವಾಗಿದೆ—

ವಿಶ್ವಾಮಿತ್ರನ ಯಜ್ಞ ನೋಡುವುದಕ್ಕಾಗಿ ಕುಶಧ್ವಜನೊಡನೆ ಸೀತೆ ಊರ್ಮಿಳೆಯರು ಯಜ್ಞಭೂಮಿಗೆ ಬಂದಿರುತ್ತಾರೆ. ರಾವಣನಿಗೆ ಸೀತೆಯನ್ನು ಮದುವೆಮಾಡಿಕೊಡ ಬೇಕೆಂದು ಕೇಳಲು ರಾವಣನ ಪುರೋಹಿತನೂ ಅಲ್ಲಿಗೇ ಬಂದು ಸೇರುತ್ತಾನೆ. ಅದೇ ಸಮಯದಲ್ಲಿ ರಾಮನು ತಾಟಕಾವಧ ಮಾಡುತ್ತಾನೆ. ಯಜ್ಞ ಮುಗಿದಮೇಲೆ ರಾಮನಿಂದ ಶಿವಧನುರ್ಭಂಗವೂ ಅಲ್ಲೇ ಆಗಿ ಸೀತೆಯೂ ಎಲ್ಲರೆದುರಿಗೆ ರಾಮನನ್ನೇ ವರಿಸುತ್ತಾಳೆ.

---

9 ಭವಭೂತಿಯೂ ವಾಕ್ಪತಿರಾಜನೂ ಯಶೋವರ್ಮನ ಆಶ್ರಯಪಡೆದಿದ್ದರೆಂದು ಕಲ್ಹಣನು ರಾಜತರಂಗಿಣಿಯಲ್ಲಿ (iv ೧೪೪) ಹೇಳಿದ್ದಾನೆ.

10 ಇವಲ್ಲದೆ ಶಾರ್ಙ್ಗಧರಪದ್ಧತಿಯಲ್ಲಿ ಒಂದು ಶ್ಲೋಕವೂ ಗದಾಧರನ ರಸಿಕಜೀವನ ದಲ್ಲಿ ಎರಡು ಶ್ಲೋಕಗಳೂ ಭವಭೂತಿಯ ಹೆಸರಿನಲ್ಲಿ ಉಲ್ಲೇಖಗೊಂಡಿವೆ.

ರಾವಣನ ಪುರೋಹಿತನು ತನ್ನ ಕಣ್ಣಮುಂದೆಯೇ ನಡೆದ ಈ ಪ್ರಸಂಗಗಳನ್ನು ರಾವಣನಿಗೆ ತಿಳಿಸಲು, ರಾವಣನು ಉರಿಉರಿಯಾಗಿ ರಾಮನಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಾನೆ. ಅವನ ಮಂತ್ರಿ ಮಾಲ್ಯವಂತನು ಅವನನ್ನು ಸಂತೈಸಿ, ಅತ್ಯಂತ ಶೂರನೆಂದು ಪ್ರಸಿದ್ಧನಾದ ಪರಶುರಾಮನನ್ನು ರಾಮನೊಡನೆ ಯುದ್ಧಮಾಡಲು ಪ್ರೋತ್ಸಾಹಿಸಿ ಕಳುಹಿಸುತ್ತಾನೆ. ಆದರೆ ಪರಶುರಾಮನು ಸೋತುಹೋಗುತ್ತಾನೆ. ಬಳಿಕ ಮಾಲ್ಯವಂತನು ಶೂರ್ಪಣಖಿಯನ್ನು ಹುರಿದುಂಬಿಸುತ್ತಾನೆ. ಅವಳು ಮಂಥರೆಯಲ್ಲಿ ಆವೇಶವಾಗಿ 'ಭರತನಿಗೆ ರಾಜ್ಯಾಭಿಷೇಕವೂ ರಾಮನಿಗೆ ವನವಾಸವೂ ಏರ್ಪಡಬೇಕು' ಎಂದು ಕೈಕೇಯಿಯು ದಶರಥನನ್ನು ಕೋರುವಂತೆ ಮಾಡುತ್ತಾಳೆ. ಆದರೆ ಯುಧಾಜಿತ್ ಮತ್ತು ಭರತಾದಿಗಳಿಂದ ರಾಮನಿಗೇ ರಾಜ್ಯಾಭಿಷೇಕವಾಗತಕ್ಕದ್ದೆಂದು ಪ್ರೋತ್ಸಾಹಿಸಲ್ಪಟ್ಟು ದಶರಥನು ಸಂತೋಷಭರದಲ್ಲಿ 'ಯಾರಿಗೆ ಏನು ಬೇಕು' ಎಂದು ಕೇಳಲು, ರಾಮನು ತನ್ನ ಚಿಕ್ಕಮ್ಮನ ಮಾತುಗಳನ್ನು ಈಡೇರಿಸಬೇಕೆಂದು ಬೇಡುತ್ತಾನೆ. ದಶರಥನು ವಿಧಿಯಿಲ್ಲದೆ ಒಪ್ಪಬೇಕಾಗುತ್ತದೆ. ರಾಮ ಸೀತೆ ಲಕ್ಷ್ಮಣರು ಅಯೋಧ್ಯೆಗೆ ಹೋಗದೆ ಮಧ್ಯಮಾರ್ಗದಿಂದಲೇ ಕಾಡಿಗೆ ಹೋಗುತ್ತಾರೆ. ಕಾಡಿನಲ್ಲಿ ರಾಮನು ಅಸಹಾಯನಾಗಿರುವಾಗ ಸೀತಾಪಹರಣ ಮಾಡಬಹುದೆಂಬುದು ಮಾಲ್ಯವಂತನ ನಿರೀಕ್ಷೆ. ಸೀತಾಪಹರಣವಾಗುತ್ತದೆ. ಖರದೂಷಣಾದಿಗಳಿಗೂ ರಾಮನನ್ನು ಜಯಿಸಲಾಗದುದನ್ನು ಕಂಡು ಮಾಲ್ಯವಂತನು ವಾಲಿಯನ್ನು ಪ್ರೋತ್ಸಾಹಿಸಿ ರಾಮನೊಡನೆ ಯುದ್ಧಕ್ಕೆ ಕಳುಹಿಸುತ್ತಾನೆ. ರಾಮ ವಾಲಿ ಇಬ್ಬರಿಗೂ ಎದುರೆದುರಿಗೆ ಯುದ್ಧವಾಗುತ್ತದೆ. ವಾಲಿ ಸಂಹೃತನಾಗುತ್ತಾನೆ. ಸಾಯುವುದಕ್ಕೆ ಮುಂಚೆ ಅವನು ವಿಭೀಷಣನ ಸಖನಾದ ಸುಗ್ರೀವನಿಗೂ ರಾಮನಿಗೂ ಅಗ್ನಿಸಾಕ್ಷಿಕವಾಗಿ ಸಖ್ಯಮಾಡಿಸುತ್ತಾನೆ. ಹೀಗೆ ಮಾಲ್ಯವಂತನ ಪ್ರಯತ್ನವೆಲ್ಲಾ ವಿಫಲವಾಗಲು ರಾವಣನೇ ರಾಮನೊಡನೆ ಯುದ್ಧಮಾಡಬೇಕಾಗಿ ಬಂದು ಹತನಾಗುತ್ತಾನೆ. ಸೀತೆಯೊಡನೆ ರಾಮನು ಅಯೋಧ್ಯೆಗೆ ಹಿಂದಿರುಗಿ ಪಟ್ಟಾಭಿಷಿಕ್ತನಾಗುತ್ತಾನೆ.

—ಈ ರೀತಿ ಭವಭೂತಿಯು ತನ್ನ ಆದರ್ಶನಾಯಕನಾದ ಮಹಾವೀರ ಶ್ರೀರಾಮನ ಚರಿತವನ್ನು ಯಾರಲ್ಲಿಯೂ ಯಾವ ದೋಷವೂ ಬಾರದ ರೀತಿಯಲ್ಲಿ ನಿರೂಪಿಸಿದ್ದಾನೆ ಕಥಾಸರಣಿಯೂ ಮೆಚ್ಚತಕ್ಕದ್ದೇ ಆಗಿದೆ.

ಮಹಾವೀರಚರಿತದ ಐದನೆಯ ಅಂಕದ ೪೬ನೆಯ ಶ್ಲೋಕದಿಂದ ಮುಂದಕ್ಕೆ ಮೂರು ಬೇರೆ ಬೇರೆ ಪಾಠಗಳಿವೆ. ಇದರಿಂದ ಭವಭೂತಿಯು ಈ ನಾಟಕದ ರಚನೆಯನ್ನು (V ೪೬) ಅಷ್ಟಕ್ಕೇ ನಿಲ್ಲಿಸಿಬಿಟ್ಟದ್ದನೆಂದೂ, ಈಚೆಗೆ ಬೇರೆ ಕವಿಗಳು ನಾಟಕವನ್ನು ಮುಂದುವರಿಸಿ ಮುಗಿಸಿದ್ದಾರೆಂದೂ ಹೇಳಲು ಅವಕಾಶವಾಗಿದೆ. ಪ್ರಾಯಃ ಸರ್ವತ್ರ ಪ್ರಚಲಿತವಾಗಿರುವ ಈ ಭಾಗದ ಪಾಠವು 'ಸುಬ್ರಹ್ಮಣ್ಯಕವಿವಿರಚಿತ'ವೆಂದು ವೀರರಾಘವವ್ಯಾಖ್ಯಾನದಲ್ಲಿ ಉಕ್ತವಾಗಿದ್ದರೆ ಕಾಶ್ಮೀರದ ಒಂದು ಪ್ರತಿಯಲ್ಲಿ 'ವಿನಾಯಕಭಟ್ಟ ವಿರಚಿತ'ವೆಂದಿದೆ.



**ಮಾಲತೀಮಾಧವ**—ಮಹಾವೀರಚರಿತದ ವಸ್ತುರಚನೆ ಸಂವಿಧಾನ ಮುಂತಾದುವು ಶ್ಲಾಘ್ಯವಾಗಿಯೇ ಇದ್ದರೂ ಆ ಕಾಲದ ಜನರಿಗೆ ಅದು ರುಚಿಸಿದಂತೆ ಕಾಣುವುದಿಲ್ಲ. ವಿಮರ್ಶಕರು ಆ ನಾಟಕವನ್ನು ಖಂಡಿಸಿರಬೇಕು. ಆ ಕಾಲದ ಜನರಿಗೆ ಬೇಕಾಗಿದ್ದುದು ಸಾಹಸ ಕಾರ್ಯಗಳ ಅದ್ಭುತ ಕೃತ್ಯಗಳ ಭಯಾನಕ ರೌದ್ರಸನ್ನಿವೇಶಗಳ ಪ್ರದರ್ಶನಗಳು. ಭವಭೂತಿಯೂ ಇದನ್ನು ಮನಗಂಡು, ಜನರನ್ನು ಮೆಚ್ಚಿಸುವ ಸಲುವಾಗಿಯೇ 'ಮಾಲತೀಮಾಧವ'ವನ್ನು ರಚಿಸಿ ಅದರ ಪ್ರಸ್ತಾವನೆಯಲ್ಲಿ 'ಕಾಲವು ಅನಂತ, ದೇಶವೂ ವಿಶಾಲ. ಈ ಕಾಲದ ಜನರು ನನ್ನ ನಾಟಕವನ್ನು ಮೆಚ್ಚದಿದ್ದರೂ, ಮುಂದೆ ಇದನ್ನೇ ಕೊಂಡಾಡುವ ಜನ ಹುಟ್ಟಿಯೇ ಹುಟ್ಟುತ್ತಾರೆ' ಎಂದು ತನ್ನ ಖಂಡನಕಾರರನ್ನು ಟೀಕಿಸಿದ್ದಾನೆ.[11]

ಮಾಲತೀಮಾಧವವು ಕುತೂಹಲಕಾರಿ ಘಟನೆಗಳಿಂದ ತುಂಬಿದ ೧೦ ಅಂಕಗಳ ಪ್ರಕರಣ. ಉಜ್ಜಯಿನಿ (ಪದ್ಮಪುರಿ)ಯ ಮಂತ್ರಿ ಭೂರಿವಸುವಿನ ಮಗಳಾದ ಮಾಲತಿ ಮತ್ತು ಉಜ್ಜಯಿನಿಯಲ್ಲೇ ವಿದ್ಯಾಭ್ಯಾಸಮಾಡುತ್ತಿದ್ದ ವಿದರ್ಭದೇಶದ ಮಂತ್ರಿ ದೇವರಾತನ ಮಗನಾದ ಮಾಧವ—ಇವರಿಬ್ಬರ ಪ್ರೇಮವೃತ್ತಾಂತವೇ ಈ ಪ್ರಕರಣದ ಕಲ್ಪಿತವಸ್ತು.

ಭೂರಿವಸು ದೇವರಾತರು ಸಹಾಧ್ಯಾಯಿಗಳಾಗಿದ್ದಾಗಲೇ ನಿಷ್ಕರ್ಷಿಸಿಕೊಂಡಿದ್ದಂತೆ ತಮ್ಮ ಮಕ್ಕಳಾದ ಮಾಲತಿ ಮತ್ತು ಮಾಧವರಿಗೆ ವಿವಾಹ ಮಾಡುವ ಅಪೇಕ್ಷೆಯಿಂದಿದ್ದಾರೆ. ಅವರೊಡನೆಯೇ ವಿದ್ಯಾಭ್ಯಾಸಮಾಡಿ ಈಗ ಬೌದ್ಧಸನ್ಯಾಸಿನಿಯಾಗಿ ಉಜ್ಜಯಿನಿಯ ವಿಹಾರವೊಂದರಲ್ಲಿರುವ ಕಾಮಂದಕಿಗೂ ಇದು ಇಷ್ಟವಾಗಿ ವಿದ್ಯಾಭ್ಯಾಸಕ್ಕಾಗಿ ಉಜ್ಜಯಿನಿಗೇ ಬಂದಿದ್ದ ಮಾಧವನೂ ಮಾಲತಿಯೂ ಪದೇ ಪದೇ ಸಂಧಿಸಿ ಪರಸ್ಪರ ಪ್ರೇಮಿಸುವಂತೆ ಮಾಡುತ್ತಾಳೆ. ಆದರೆ ರಾಜನು ತನ್ನ ಆಪ್ತನಾದ ನಂದನನಿಗೆ ಮಾಲತಿಯನ್ನು ಕೊಡಬೇಕೆಂದು ಭೂರಿವಸುವಿಗೆ ತಿಳಿಸಿದುದರಿಂದ ಅದೇಪ್ರಕಾರ ಮದುವೆಯೂ ನಿಶ್ಚಿತವಾಗಿಬಿಡುತ್ತದೆ. ಮಾಧವನಿಗೆ ಈ ವಿಚಾರ ತಿಳಿಯಲು ಭೂತಗಳನ್ನು ಒಲಿಸಿಕೊಂಡು ಅವುಗಳ ಸಹಾಯದಿಂದಲಾದರೂ ಮಾಲತಿಯನ್ನು ಪಡೆಯಬೇಕೆಂದು ಉದ್ದೇಶಿಸಿ ಸ್ಮಶಾನಕ್ಕೆ ಹೋಗುತ್ತಾನೆ. ಅಲ್ಲಿದ್ದ ದೇಗುಲವೊಂದರಿಂದ ಬಂದ ಆರ್ತಧ್ವನಿಯನ್ನನುಸರಿಸಿ ಸಕಾಲ

---

11 ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷ ಯತ್ನಃ ।
ಉತ್ಪತ್ಸ್ಯತೇ ಮಮ ತು ಕೋಽಪಿ ಸಮಾನಧರ್ಮಾ
ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ॥

ದಲ್ಲಿ ಅಲ್ಲಿಗೇ ಹೋಗಿ ಕಪಾಲಕುಂಡಲೆಯೂ ಅವಳ ಗುರುವಾದ ಅಘೋರಘಂಟನೂ ಸೇರಿ ಬಲಿಕೊಡುವುದರಲ್ಲಿದ್ದ ಮಾಲತಿಯನ್ನು ರಕ್ಷಿಸುತ್ತಾನೆ. ಕಪಾಲಕುಂಡಲೆಯು ಸೇಡು ತೀರಿಸಿಕೊಳ್ಳುವುದಾಗಿ ಪ್ರತಿಜ್ಞೆಮಾಡಿ ಅದೃಶ್ಯಳಾಗುತ್ತಾಳೆ. ಮಾಲತಿಯು ತನ್ನನ್ನು ಹುಡುಕುತ್ತಿದ್ದವರಿಗೆ ಸಿಕ್ಕಿ ಮನೆಗೆ ಹಿಂದಿರುಗುತ್ತಾಳೆ.

ಈ ಕಥೆಯೊಡನೆ ಮಾಧವನ ಮಿತ್ರನಾದ ಮಕರಂದ ಮತ್ತು ನಂದನನ ತಂಗಿ ಮದಯಂತಿಕೆಯರ ಪ್ರೇಮಪ್ರಕರಣವೊಂದು ಒಳಕಥೆಯಾಗಿ ಹೆಣೆದುಕೊಂಡಿದೆ. ಒಂದು ದಿನ ಕಾವಲಿನವರ ಕೈತಪ್ಪಿಸಿಕೊಂಡ ಒಂದು ಹುಲಿಯು ಆವೇಶದಿಂದ ಬೀದಿಯಲ್ಲಿ ಓಡುತ್ತಿರುವಾಗ ಮದಯಂತಿಕೆ ಅದಕ್ಕೆ ಸಿಕ್ಕಿಬೀಳುತ್ತಾಳೆ. ಆಗ ಮಕರಂದನು ಅವಳನ್ನು ಹುಲಿಯಿಂದ ಕಾಪಾಡುತ್ತಾನೆ. ಅದೇ ಮೊದಲಾಗಿ ಅವರಿಗೆ ಪರಸ್ಪರ ಪ್ರೀತಿಯುಂಟಾಗಿ ಇಬ್ಬರೂ ಹೇಗಾದರೂ ಮದುವೆಮಾಡಿಕೊಳ್ಳಲು ನಿಶ್ಚಯಿಸುತ್ತಾರೆ.

ಇತ್ತ ಮಾಲತೀನಂದನರ ಮದುವೆಗೆ ನಿಶ್ಚಿತವಾಗಿದ್ದ ದಿನ ಮದುವೆಗೆ ಮುಂಚೆ ಮಾಲತಿಯು ಒಬ್ಬ ಸಖಿಯೊಡನೆ ದೇವೀದರ್ಶನಕ್ಕಾಗಿ ದೇವಾಲಯಕ್ಕೆ ಹೋಗುತ್ತಾಳೆ. ಕಾಮಂದಕಿಯ ಸೂಚನೆಯಂತೆ ಮಾಧವ ಮಕರಂದರಿಬ್ಬರೂ ಪೂರ್ವಭಾವಿಯಾಗಿ ಒಳಗೇ ಅಕತುಕೊಂಡು ಕಾದಿರುತ್ತಾರೆ. ಅಲ್ಲಿ ಮಕರಂದನು ಮಾಲತಿಯ ವೇಷಾಲಂಕಾರಗಳನ್ನು ಹಾಕಿಕೊಂಡು (—ಮುಖದಮೇಲೆ ಅವಗುಂಠನವಿದ್ದೇ ಇತ್ತು—) ಮದುವಣಗಿತ್ತಿಯಾಗಿ ಸಖಿಯೊಡನೆ ವಾಪಸು ಹೋಗುತ್ತಾನೆ. ಮಾಲತೀಮಾಧವರು ಒಟ್ಟಿಗೆ ಯಾರೂ ಕಾಣದಂತೆ ಬೇರೆ ಕಡೆ ಹೋಗಿ ಗಾಂಧರ್ವವಿವಾಹ ಮಾಡಿಕೊಳ್ಳುತ್ತಾರೆ. ನಂದನನಿಗೆ ಮಾಲತೀವೇಷದ ಮಕರಂದನೊಡನೆ ವಿವಾಹವಾಗುತ್ತದೆ. ರಾತ್ರಿ ನಂದನನು ತನ್ನ ಹೆಂಡತಿಯಿಂದ ತಿರಸ್ಕೃತನಾಗಲು ಅವನ ತಂಗಿ ಮದಯಂತಿಕೆಯು ಅತ್ತಿಗೆಗೆ ಬುದ್ಧಿ ಹೇಳಲು ಹೋಗುತ್ತಾಳೆ. ಅಲ್ಲಿ ಮಕರಂದನನ್ನು ಗುರುತಿಸಿ ಅವನೊಡನೆ ಓಡಿಹೋಗಲು ಯತ್ನಿಸಿದಾಗ ಇಬ್ಬರೂ ಕಾವಲುಗಾರರಿಗೆ ಸಿಕ್ಕಿಬೀಳುತ್ತಾರೆ. ಹೊಡೆದಾಟವಾಗುತ್ತದೆ. ಮಿತ್ರನ ಸಹಾಯಕ್ಕೆಂದು ಮಾಧವನೂ ಬರುತ್ತಾನೆ. ರಾಜನಿಗೂ ಈ ಸಮಾಚಾರ ತಿಳಿದು ಅಲ್ಲಿಗೇ ಬಂದು ಎಲ್ಲವನ್ನೂ ಕಣ್ಣಾರ ಕಂಡು ಅವರ ಶೌರ್ಯಕ್ಕೆ ಮೆಚ್ಚಿ ಅವರನ್ನು ಮನ್ನಿಸುತ್ತಾನೆ. ಈ ಮಧ್ಯೆ ಹೊಂಚುಹಾಕುತ್ತಿದ್ದ ಕಪಾಲಕುಂಡಲೆಯು ಮಾಲತಿಯನ್ನು ಹೊತ್ತುಕೊಂಡುಹೋಗಿಬಿಡುತ್ತಾಳೆ. ಆದರೆ ಮಂತ್ರಸಿದ್ಧಿ ಪಡೆದಿದ್ದ ಸೌದಾಮಿನಿಯೆಂಬ ಕಾಮಂದಕಿಯ ಶಿಷ್ಯೆಯು ಮಾಲತಿಯನ್ನು ರಕ್ಷಿಸಿ ಮಾಧವನಿಗೆ ಒಪ್ಪಿಸುತ್ತಾಳೆ: ರಾಜನ ಅನುಮತಿಯಿಂದ ಪ್ರಣಯಿಗಳೆಲ್ಲಾ ಒಂದುಗೂಡಿ ವಿವಾಹಿತರಾಗುತ್ತಾರೆ.

—ಇದು ಮಾಲತೀಮಾಧವದ ರೋಮಾಂಚಕಾರೀಕಥೆಯ ಶುಷ್ಕ ಸಂಗ್ರಹ. ಇದರಲ್ಲಿ ಹೆಣದ ಮೇಲೆ ಕುಳಿತು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹಾರಾಡುವುದೇ ಮುಂತಾದ ಅದ್ಭುತ ಕಾರ್ಯಗಳೂ ಭಯಾನಕವಾದ ಕಾಪಾಲಿಕ ವ್ಯಾಘ್ರ ಮುಂತಾದ ವೃತ್ತಾಂತಗಳೂ ಮಾಲತಿಯ ವೇಷದ ಮಕರಂದನೊಡನೆ ನಡೆಯುವ ನಂದನನ ವಿವಾಹದಂತಹ ವಿಚಿತ್ರ ಪ್ರಸಂಗಗಳೂ ಶೃಂಗಾರಮಯ



ಸನ್ನಿವೇಶಗಳೂ ತುಂಬಿದ್ದು ನಾಟಕಕಾರನ ಸಾಮರ್ಥ್ಯಕ್ಕೆ ಜನರು ಬೆರಗಾದರು. ಅವನನ್ನು ಉತ್ತಮಶ್ರೇಣಿಯ ಕವಿಯೆಂದು ಹೊಗಳಿದರು. ಅವನ ಪ್ರಥಮ ರಚನೆಯಾಗಿದ್ದ ಮಹಾವೀರಚರಿತಕ್ಕೂ 'ಸೊಗಸಾದ ನಾಟಕ' ಎಂಬ ಪ್ರಶಸ್ತಿ ಆಮೇಲೆ ತಾನಾಗಿ ಲಭಿಸಿರಬೇಕು. ಆದ್ದರಿಂದಲೇ ಕವಿಯೂ ಶ್ರೀರಾಮನ ಪಟ್ಟಾಭಿಷೇಕದಲ್ಲಿ ಹಿಂದೆ ತಾನು ನಿಲ್ಲಿಸಿದ್ದ ಕಥೆಯನ್ನು ದ್ವಿಗುಣಿತ ಉತ್ಸಾಹದಿಂದ ಮುಂದುವರಿಸಿ ಉತ್ತರರಾಮಚರಿತವನ್ನು ರಚಿಸಿರಬೇಕು. ಕಲ್ಲನ್ನೂ ಅಳುವಂತೆ ಮಾಡುವ ಉತ್ತರರಾಮಚರಿತ ರಚಿತವಾದಮೇಲೆ ಅದನ್ನು ಓದಿ, ನೋಡಿ, ಕಣ್ಣೀರಿಟ್ಟು ಅದನ್ನು ಮೆಚ್ಚದವರಿಲ್ಲ, ಕೊಂಡಾಡದವರಿಲ್ಲ. ಇದರಿಂದ ಭವಭೂತಿಯು ವಾಲ್ಮೀಕಿಯ ಅವತಾರವೆಂದೇ ಸರ್ವತ್ರ ಭಾವನೆಯುಂಟಾಯಿತು.[12]

**ಉತ್ತರರಾಮಚರಿತ**—ಭವಭೂತಿಯು ಪ್ರಾಯಃ ಎಲ್ಲಕ್ಕೂ ಕೊನೆಯಲ್ಲಿ ರಚಿಸಿದ ನಾಟಕ ಉತ್ತರರಾಮಚರಿತ. ಇದರ ಕಥೆ ಮಹಾವೀರಚರಿತದಿಂದ ಮುಂದಿನದು. ಇದರಲ್ಲಿ ಏಳು ಅಂಕಗಳಿವೆ. ಸೀತಾಪರಿತ್ಯಾಗದ ಪ್ರಕರಣದಿಂದ ಆರಂಭವಾಗುವ ಈ ನಾಟಕವು ಕೊನೆಯಲ್ಲಿ ಶ್ರೀರಾಮನು ಸೀತೆಯನ್ನು ಪುನಃ ಪರಿಗ್ರಹಿಸಿದಂತೆ ನಿರೂಪಿಸುತ್ತದೆ. ರಾಮಾಯಣದ ಕಥೆಯಲ್ಲಿ ಹಲಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು, ಹೊಸ ಕಲ್ಪಿತ ಭಾಗಗಳನ್ನು ಸೇರಿಸಿಕೊಂಡು ಕವಿಯು ಈ ನಾಟಕವನ್ನು ಆಕರ್ಷಕವಾಗಿಯೂ ಸುಖಾಂತವಾಗಿಯೂ ರಚಿಸಿದ್ದಾನೆ. ಅದರ ಕಥೆ ಹೀಗೆ ಆರಂಭವಾಗುತ್ತದೆ.—

ಶ್ರೀರಾಮನ ಪಟ್ಟಾಭಿಷೇಕವಾದ ಸ್ವಲ್ಪಕಾಲದ ಅನಂತರ ಋಷ್ಯಶೃಂಗರು ಒಂದು ಯಾಗಮಾಡುತ್ತಾರೆ. ಅಲ್ಲಿಗೆ ಕೌಸಲ್ಯಾದಿಗಳೂ ವಸಿಷ್ಠ ಮುಂತಾದ ಎಲ್ಲ ಹಿರಿಯರೂ ಹೋಗುತ್ತಾರೆ. ಪೂರ್ಣಗರ್ಭಿಣಿಯಾದ ಸೀತೆಯ ಜತೆಯಲ್ಲಿ ರಾಮನು ಅಯೋಧ್ಯೆಯಲ್ಲೇ ನಿಲ್ಲುತ್ತಾನೆ. ಲಕ್ಷ್ಮಣನೂ ಇರುತ್ತಾನೆ. ಅವನು ಸೀತೆಯ ವಿನೋದಾರ್ಥವಾಗಿ ಶ್ರೀರಾಮನ ವೃತ್ತಾಂತಗಳೆಲ್ಲವನ್ನೂ ಚಿತ್ರಗಳಲ್ಲಿ ಬರೆಯಿಸಿ, ಅವುಗಳನ್ನು ನೋಡಲು ಬರಬೇಕೆಂದು ಸೀತೆಯನ್ನೂ ರಾಮನನ್ನೂ ಕರೆಯುತ್ತಾನೆ. 'ಎಲ್ಲಿಯವರೆಗಿನ ಕಥೆ ಚಿತ್ರಿತವಾಗಿದೆ ?' ಎಂದು ರಾಮ ಕೇಳಿದ್ದಕ್ಕೆ, 'ಆರ್ಯೆಯು ಅಗ್ನಿಯಿಂದ ಶುದ್ಧಿಹೊಂದುವವರೆಗೆ' ಎಂದು ಲಕ್ಷ್ಮಣ ಉತ್ತರ ಹೇಳುತ್ತಾನೆ. ಅದನ್ನು ಕೇಳಿ ರಾಮನು ಕಿವಿ ಮುಚ್ಚಿಕೊಂಡು 'ಶಾಂತಂ ಪಾಪಂ! ಜನ್ಮತಃ ಪರಿಶುದ್ಧೆ ಈಕೆ. ಇವಳಿಗೆ ಶುದ್ಧಿ ಬೇರೆಯೇ ?

12 ೧೦ನೆಯ ಶತಮಾನದ ರಾಜಶೇಖರನು ತನ್ನ ಬಾಲರಾಮಾಯಣ (i ೧೬)ದಲ್ಲಿ ತನ್ನನ್ನು ಭವಭೂತಿಯಂತೆ ವಾಲ್ಮೀಕಿಯ ಅವತಾರವೆಂದೇ ಹೇಳಿಕೊಂಡಿದ್ದಾನೆ.

ಪುಣ್ಯನದಿಗಳ ನೀರು ಬೆಂಕಿ-ಇವುಗಳಿಗೆ ಬೇರೊಂದರಿಂದ ಶುದ್ಧಿ ಕೂಡದು.' 'ದೇವಿ ಸೀತೆ, ನೀನು ಜೀವಿಸಿರುವವರೆಗೂ ಈ ಪ್ರವಾದವಿದ್ದೀತು. ಇದನ್ನು ಸಹಿಸಿಕೊಳ್ಳಬೇಕು' ಎಂದು ನೊಂದ ಮನಸ್ಸಿನಿಂದ ಹೇಳುತ್ತಾನೆ. ಸೀತೆ ಅದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ಳದೆ ಚಿತ್ರ ನೋಡಲು ಗಂಡನನ್ನು ಕರೆದೊಯ್ಯುತ್ತಾಳೆ. ಸಾಲುಸಾಲಾಗಿ ಎಷ್ಟೋ ಚಿತ್ರಗಳು! ಜನಕನ ಸಭೆ, ಧನುರ್ಭಂಗ, ಸ್ವಯಂವರ, ಸೀತಾಪರಿಣಯ, ಭರತ ಲಕ್ಷ್ಮಣ ಶತ್ರುಘ್ನರ ವಿವಾಹ, ಸೀತೆಯೊಡನೆ ರಾಮನು ಅಯೋಧ್ಯೆಯಲ್ಲಿ ತನ್ನ ಅರಮನೆಯನ್ನು ಪ್ರವೇಶಿಸುವುದು! ಈ ಚಿತ್ರವನ್ನು ನೋಡಿ ರಾಮನು 'ಆಗ ತಂದೆ ಬದುಕಿದ್ದರು. ನಮಗೂ ಮದುವೆಯಾದ ಹೊಸದು. ತಾಯಿಯರು ನಮ್ಮನ್ನು ಆದರಿಸಿ ಎಲ್ಲವನ್ನೂ ನೋಡಿಕೊಳ್ಳುತ್ತಿದ್ದರು. ಆ ಸುಖಮಯ ದಿವಸಗಳೆಲ್ಲಾ ಎಂದೋ ಕಳೆದುಹೋದುವು' ಎಂದು ಮರುಗುತ್ತಾನೆ. ಮುಂದೆ ಮಂಥರಾವೃತ್ತಾಂತ, ರಾಮನ ವನಗಮನ, ಯಮುನಾ ನದಿ, ಚಿತ್ರಕೂಟ, ವಿಂಧ್ಯಾಟವೀ, ವಿರಾಧವೃತ್ತಾಂತ, ಜನಸ್ಥಾನ, ಪಂಚವಟಿ,—ಒಂದೊಂದೂ ಹಳೆಯದನ್ನೆಲ್ಲಾ ನೆನಪಿಗೆ ತರುವಂತಹದು. ಶೂರ್ಪಣಖೆಯ ಚಿತ್ರಬಂದಾಗ ಸೀತೆ 'ಸಾಕು, ಇನ್ನು ಸಾಕು' ಎನ್ನುತ್ತಾಳೆ. ರಾಮನು 'ಇದೆಲ್ಲಾ ಚಿತ್ರ, ಹೆದರಬೇಡ' ಎಂದರೂ ಸೀತೆ 'ಆದರೂ ದುರ್ಜನರು ದುಃಖವುಂಟುಮಾಡುತ್ತಾರೆ' ಎಂದು ಹಿಂದೆಗೆಯುತ್ತಾಳೆ. ಮುಂದಿನ ದೃಶ್ಯ ಸೀತಾಪಹಾರವಾದಮೇಲೆ ಶೂನ್ಯವಾದ ಜನಸ್ಥಾನದಲ್ಲಿ ರಾಮ ಅಲೆಯುತ್ತಿರುವುದು. ಅದನ್ನು ನೋಡಿ ರಾಮನ ಕಣ್ಣುಗಳಲ್ಲಿ ಧಾರಾಕಾರವಾಗಿ ಕಣ್ಣೀರು ಹರಿಯುತ್ತದೆ. ಮುಂದೆ ಜಟಾಯು, ಮತಂಗಾಶ್ರಮ, ಶಬರಿಯ ಆತಿಥ್ಯ, ಪಂಪಾ ಸರೋವರ, ಮಾಲ್ಯವತ್‌ಪರ್ವತದ ತಪ್ಪಲಿನಲ್ಲಿ ರಾಮನ ಪ್ರಲಾಪ. ಇದನ್ನು ನೋಡಿದ ರಾಮನ ದುಃಖ ಪುನಃ ಉಕ್ಕಿಬರುತ್ತದೆ. 'ಸಾಕು ಲಕ್ಷ್ಮಣ, ಸಾಕು. ಇನ್ನೇನನ್ನೂ ನಾನು ನೋಡಲಾರೆ' ಎಂದು ರಾಮ ಬಾಷ್ಪಸ್ತಂಭಿತಕಂಠದಿಂದ ಹೇಳುತ್ತಾನೆ. ಸೀತೆಯೂ ಬಳಲಿದಂತಿದ್ದುದರಿಂದ ಲಕ್ಷ್ಮಣನು ಅವರಿಬ್ಬರನ್ನೂ ವಿಶ್ರಾಂತಿಗಾಗಿ ಬೇರೆ ಕಡೆಗೆ ಕರೆದೊಯ್ಯುತ್ತಾನೆ. ದಾರಿಯಲ್ಲಿ ಸೀತೆಯು ರಾಮನಿಗೆ 'ಈಗೊಂದುಬಾರಿ ವನಗಳಲ್ಲಿ ವಿಹರಿಸಿ, ಭಾಗೀರಥಿಯಲ್ಲಿ ಮಿಂದು ಬರಬೇಕೆಂದು ಬಯಕೆ ಆಗುತ್ತಿದೆ' ಎಂದು ತಿಳಿಸುತ್ತಾಳೆ. ಕೂಡಲೇ ರಾಮನು ಸೀತೆಯ ಪ್ರಯಾಣಕ್ಕೆ ಯೋಗ್ಯವಾದ ರಥವನ್ನು ಸಿದ್ಧ ಮಾಡುವಂತೆ ಲಕ್ಷ್ಮಣನಿಗೆ ಹೇಳುತ್ತಾನೆ. ರಾಮ ಸೀತೆ ಇಬ್ಬರೂ ಒಂದು ಕಿಟಕಿಯ ಪಕ್ಕದಲ್ಲಿ ಸುಖಾಸೀನರಾಗುತ್ತಾರೆ. ಸೀತೆಗೆ ನಿದ್ದೆ ಬರುವಂತಾಗುತ್ತದೆ: ರಾಮನ ಎದೆಗೇ ಒರಗಿಕೊಂಡು ನಿದ್ದೆಹೋಗುತ್ತಾಳೆ.

ರಾಮನು ಸೀತೆಯ ಮುಗ್ಧಸ್ವಭಾವವನ್ನೂ, ಅಸಾಧಾರಣವಾದ ಗುಣಗಳನ್ನೂ ನೆನೆಯುತ್ತಾ 'ಈಕೆಯ ವಿರಹವನ್ನು ಹೇಗೆ ತಾನೆ ನಾನು ಸಹಿಸಿದೆ?' ಎಂದು ಚಿಂತಿಸುತ್ತಾ ಇರುವುದಕ್ಕೆ ಸರಿಯಾಗಿ ಗೂಢಚಾರ ದುರ್ಮುಖ ಬಂದು, ಹಿಂದೆ ಮುಂದೆ ನೋಡಿ ಕೊನೆಗೂ ಸೀತೆಯಮೇಲೆ ಬಂದಿದ್ದ ಜನಾಪವಾದವನ್ನು ರಾಮನಿಗೆ ತಿಳಿಸುತ್ತಾನೆ. ಅದನ್ನು ಕೇಳಿದ ಕೂಡಲೇ ಸಿಡಿಲು ಬಡಿದಂತಾಗಿ ರಾಮ ಮೂರ್ಛೆಹೋಗುತ್ತಾನೆ. ಚೇತರಿಸಿಕೊಂಡಮೇಲೆ, ಅದ್ಭುತವಾದ ಅಗ್ನಿಪ್ರವೇಶದಿಂದ ಸೀತೆಯ ಪರಗೃಹವಾಸ



ದೂಷಣೆಯನ್ನು ತೊಡೆದು ಹಾಕಿದ್ದರೂ, ಪುನಃ ಅದೇ ಚಿಂತೆ? ಇರಲಿ; ನನ್ನ ತಂದೆ ಸತ್ಯಪರಿಪಾಲನೆಗಾಗಿ ನನ್ನನ್ನೂ ತನ್ನ ಪ್ರಾಣಗಳನ್ನೂ ಒಟ್ಟಿಗೇ ತ್ಯಾಗಮಾಡಿಬಿಡಲಿಲ್ಲವೆ? ನಾನೂ ಅದೇ ದಾರಿ ಹಿಡಿಯುತ್ತೇನೆ. ಪ್ರಜಾರಂಜನೆ ನನ್ನ ಮೊದಲ ಕರ್ತವ್ಯ' ಎಂದುಕೊಳ್ಳುತ್ತಾ, ನಿಶ್ಚಿಂತಳಾಗಿ ನಿದ್ದಿಸುತ್ತಿರುವ ಸೀತೆಯನ್ನು ದೃಷ್ಟಿಸಿ ನೋಡಿ, ಮರುಗಿ, "ಸೀತೆ, ಈ ಜಗತ್ತು ಪುಣ್ಯಮಯವಾಗಿರುವುದು ನೀನಿರುವುದರಿಂದ; ಆದರೆ ಜನೋಕ್ತಿ ನಿನ್ನ ವಿಷಯದಲ್ಲಿ ಎಷ್ಟು ಕಟುವಾಗಿದೆ, ನೋಡು. ಲೋಕಗಳು ಸನಾಥವಾಗಿರುವುದು ನಿನ್ನಿಂದ; ಆದರೆ ನೀನು ಮಾತ್ರ ಅನಾಥಳಾಗಿ ಕಷ್ಟಕ್ಕೀಡಾಗಬೇಕಲ್ಲ!" ಎಂದು ಶೋಕಿಸಿ ಕಲ್ಲುಮನಸ್ಸನ್ನು ಮಾಡಿಕೊಂಡು ಮುಂದಿನ ಕರ್ತವ್ಯದ ಬಗ್ಗೆ ಲಕ್ಷ್ಮಣನಿಗೆ ದುರ್ಮುಖನ ಮೂಲಕ ಹೇಳಿಕಳುಹಿಸುತ್ತಾನೆ. ಆಮೇಲೆ ಸೀತೆಯನ್ನು ಮೆಲ್ಲಗೆ ಕೆಳಗೆ ಮಲಗಿಸಿ, ತನ್ನನ್ನು 'ಅಪೂರ್ವ ಕರ್ಮಚಂಡಾಲ'ನೆಂದು ನಿಂದಿಸಿಕೊಳ್ಳುತ್ತಾ "ನನ್ನ ಜೀವಿತದ ಪ್ರಯೋಜನ ಕೊನೆಗಂಡಿತು. ಈಗ ಜಗತ್ತು ಶೂನ್ಯವೂ ಜೀರ್ಣವೂ ಆದ ಅರಣ್ಯಕ್ಕೆ ಸಮ. ಈ ಸಂಸಾರದಲ್ಲಿ ಏನು ಸಾರವಿದೆ? ನಾನೂ ಈಗ ದಿಕ್ಕಿಲ್ಲದವನಾದೆ; ಏನು ಮಾಡಲಿ? ಏನು ಗತಿ ಇನ್ನು?"—ಎಂದು ಪ್ರಲಪಿಸುತ್ತಾ, 'ಏನೊಂದು ಶಂಕೆಯೂ ಇಲ್ಲದೆ, ನನ್ನನ್ನೇ ನಂಬಿ ನಿಶ್ಚಿಂತಳಾಗಿ ನನ್ನ ಎದೆಗೇ ಒರಗಿಕೊಂಡು ನಿದ್ದಿಸುತ್ತಿದ್ದ ಈ ನನ್ನ ಗೃಹಲಕ್ಷ್ಮಿಯನ್ನು, ಪೂರ್ಣಗರ್ಭಿಣಿಯನ್ನು,—ನಾಯಿನರಿಗಳಿಗೆ ಬಲಿ ಎಸೆಯುವಂತೆ,—ತ್ಯಾಗಮಾಡಿಬಿಡುತ್ತಿದ್ದೇನಲ್ಲಾ! ಎಂತಹ ನಿರ್ಘೃಣ, ಪಾಪಿ ನಾನು!" ಎಂದು ದುಃಖಿಸಿ, ಸೀತೆಯ ಪಾದಗಳನ್ನು ತನ್ನ ತಲೆಗೆ ಸೋಕಿಸಿಕೊಂಡು, "ದೇವಿ, ದೇವಿ, ಇಗೋ ರಾಮ ಕೊನೆಯದಾಗಿ ನಿನ್ನ ಪಾದಕಮಲಗಳನ್ನು ಶಿರಸಾ ಧರಿಸಿದ್ದಾನೆ" ಎಂದು ಹೇಳಿ ಅತ್ತುಬಿಡುತ್ತಾನೆ. ಅಷ್ಟರಲ್ಲಿ ರಾಮನನ್ನು ನೋಡಲು ಯಾರೋ ಬರುತ್ತಾರೆ. ಆದ್ದರಿಂದ ರಾಮನು ಸೀತೆಯನ್ನು ಪುನಃ ಕಟ್ಟಕಡೆಯ ಬಾರಿ ಕಣ್ಣುತುಂಬಾ ನೋಡಿ, ಭೂಮಾತೆಯನ್ನು ಕುರಿತು—'ಭಗವತಿ ವಸುಂಧರೇ, ಸುಶ್ಲಾಘ್ಯಚರಿತ್ರೆಯಾದ ಈ ನಿನ್ನ ಮಗಳನ್ನು ನೀನೇ ಕಾಪಾಡಬೇಕು',—ಎಂದು ಪ್ರಾರ್ಥಿಸಿ, ಅಳುತ್ತಾ ಹೊರಟುಹೋಗುತ್ತಾನೆ.

ಈ ರೀತಿ, ಭವಭೂತಿಯ ಕಥೆ ಹೆಜ್ಜೆಹೆಜ್ಜೆಗೂ ಪ್ರೇಕ್ಷಕರನ್ನೂ ಶ್ರೋತೃಗಳನ್ನೂ ಧಾರಾಕಾರವಾಗಿ ಕಣ್ಣೀರು ಸುರಿಸುವಂತೆ[13] ಮಾಡುತ್ತಾ ಸಾಗುತ್ತದೆ. ಭವಭೂತಿಯ ನಾಟಕರಚನಾಶಕ್ತಿ ಅಪೂರ್ವವಾದದ್ದು. ಕರುಣರಸಕ್ಕೆ ಮೀರಿದ ರಸ ಬೇರೊಂದಿಲ್ಲ; "ಏಕೋ ರಸಃ ಕರುಣ ಏವ..." ಎಂಬುದಕ್ಕೆ ಭವಭೂತಿಯ ಉತ್ತರರಾಮಚರಿತವೇ ನಿದರ್ಶನ. ಶೃಂಗಾರರಸಭರಿತವಾದ ಶಾಕುಂತಲದಲ್ಲಿ ಮಹಾಕವಿ ಕಾಳಿದಾಸ ತೋರಿಸಿರುವ ಸಾಮರ್ಥ್ಯಕ್ಕಿಂತ ಹೆಚ್ಚು ಕುಶಲತೆಯನ್ನು ಭವಭೂತಿಯು ಕರುಣರಸ ಉಕ್ಕಿಹರಿಯುತ್ತಿರುವ ಉತ್ತರರಾಮಚರಿತ

13 ಭವಭೂತೇಸ್ಸಂಬಂಧಾತ್ ಭೂಧರಭೂರೇವ ಭಾರತೀ ಭಾತಿ।
ಏತತ್ಕೃತಕಾರುಣ್ಯೇ ಕಿಮನ್ಯಥಾ ರೋದಿತಿ ಗ್ರಾವಾ॥—ಆರ್ಯಾಸಪ್ತಶತೀ I 36.

ದಲ್ಲಿ ತೋರಿಸಿದ್ದಾನೆ. ಆದ್ದರಿಂದಲೇ 'ಉತ್ತರೇ ರಾಮಚರಿತೇ ಭವಭೂತಿಃ ವಿಶಿಷ್ಯತೇ' ಎಂಬ ನುಡಿ ಇಂದಿಗೂ ಪ್ರಸಿದ್ಧವಾಗಿದೆ. ಕಾವ್ಯೇಽಪಿ ನಾಟಕೇ ವಾಪಿ ವಯಂ ವಾ ವಯಮೇವ ವಾ ಎಂದು ತಾನೇ ಹೇಳಿಕೊಂಡಿರುವ ಭವಭೂತಿಯ ಆತ್ಮಾಭಿಮಾನಕ್ಕೆ ಕಾರಣವಿಲ್ಲದೆ ಇಲ್ಲ.

ಪ್ರಿಯದರ್ಶಿಕೆಯಲ್ಲಿರುವಂತೆ ಈ ನಾಟಕದಲ್ಲೂ ಒಂದು ಗರ್ಭಾಂಕವಿದೆ. ಅದರಲ್ಲಿ ನಿರೂಪಿತನಾಗಿರುವುದು ಸೀತೆಯ ಪರಿತ್ಯಾಗಾನಂತರದ ಕರುಣ ಕಥೆ. ಇದರ ಪ್ರದರ್ಶನವನ್ನು ರಾಮನೇ ನೋಡುವಂತೆಯೂ ಆ ಬಳಿಕ ಅವನು ಸೀತೆಯನ್ನು ಪುನಃ ಪರಿಗ್ರಹಿಸುವಂತೆಯೂ ಸಂವಿಧಾನವನ್ನು ಕವಿಯು ಬಹಳ ಕುಶಲತೆಯಿಂದ ಅಳವಡಿಸಿದ್ದಾನೆ.

ಭವಭೂತಿಯ ಮೂರು ನಾಟಕಗಳೂ ಉಜ್ಜಯಿನಿಯ ಕಾಲಪ್ರಿಯನಾಥನ ಉತ್ಸವದ ಕಾಲದಲ್ಲಿ ಪ್ರದರ್ಶಿತವಾಗುತ್ತಿದ್ದಂತೆ ಅಲ್ಲಿನ ಪ್ರಸ್ತಾವನೆಗಳಿಂದ ತಿಳಿದುಬರುತ್ತದೆ. ಈ ಪೈಕಿ ಮಹಾವೀರಚರಿತದಲ್ಲಿ ವೀರರಸವೂ ಮಾಲತೀಮಾಧವದಲ್ಲಿ ಶೃಂಗಾರವೂ ಉತ್ತರರಾಮಚರಿತದಲ್ಲಿ ಕರುಣರಸವೂ[14] ಪ್ರಧಾನವಾಗಿ ಪ್ರತಿಪಾದಿತವಾಗಿದೆ. ನಾಟಕದಲ್ಲಿ ಕರುಣರಸವನ್ನು ಪ್ರಧಾನವಾಗಿ ರೂಪಿಸುವುದು ಕಷ್ಟ. ಆದ್ದರಿಂದಲೇ 'ಕಾರುಣ್ಯಂ ಭವಭೂತಿರೇವ ತನುತೇ' ಎಂಬ ನುಡಿ ಹುಟ್ಟಿಕೊಂಡಿತು. ಕರುಣರಸಪ್ರಧಾನವಾದ ಉತ್ತಮ ಸಂಸ್ಕೃತನಾಟಕ ಉತ್ತರರಾಮಚರಿತವೊಂದೇ ಎಂದೂ ಹೇಳಬಹುದು. ಈ ನಾಟಕ ರಚಿತವಾಗುವವರೆಗೆ ಕರುಣರಸವು ನಾಟಕದಲ್ಲಿ ಅಂಗಿಯಾಗಿರಬಲ್ಲದೆಂಬ ಭಾವನೆ ಆಲಂಕಾರಿಕರಲ್ಲಿರಲಿಲ್ಲವೆಂದು ಕಾಣುತ್ತದೆ.

ಉತ್ತರರಾಮಚರಿತವನ್ನು ನಾಟಕವೆನ್ನುವುದಕ್ಕಿಂತ ನಾಟಕಾತ್ಮಕ ಕಾವ್ಯ (dramatic poem) ಎನ್ನಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಭವಭೂತಿಯ ನಾಟಕಗಳಲ್ಲಿ ಭಾವಗೀತಾತ್ಮಕ ಪದ್ಯಗಳೂ ವರ್ಣನೆಗಳೂ ಹೆಚ್ಚು. ಸಂಭಾಷಣೆ ತುಂಬ ಉದ್ದ. ಆದರೆ ಪಾತ್ರಸೃಷ್ಟಿ ಸಮರ್ಪಕವಾಗಿದೆ. ಮಾನವಮನಸ್ಸಿನೊಳಗಿನ ಸಂಘರ್ಷಗಳು ಸಹಜವಾಗಿ ಚಿತ್ರಿತವಾಗಿವೆ.

14 'ಪುಟಪಾಕಪ್ರತೀಕಾಶಃ ರಾಮಸ್ಯ ಕರುಣೋ ರಸಃ' 'ಕರುಣಸ್ಯ ಮೂರ್ತಿರಥವಾ ಶರೀರಿಣೀ ವಿರಹವ್ಯಥೇವ ವನಮೇತಿ ಜಾನಕೀ' ಎಂಬುವು ಭವಭೂತಿಯೇ ಹೇಳಿರುವ ಮಾತು.



ಭಾಷೆಯಲ್ಲಿ ಲಾಲಿತ್ಯಕ್ಕಿಂತ ಪಾಂಡಿತ್ಯ ಹೆಚ್ಚೆನ್ನುವಂತಿದೆ. ಭವಭೂತಿಗೆ ಸಂಸ್ಕೃತಭಾಷೆ ಸ್ವಾಧೀನವಾಗಿತ್ತು. ಆದ್ದರಿಂದ ಭಾವಕ್ಕೆ ತಕ್ಕ ಭಾಷೆ, ಅದಕ್ಕೆ ತಕ್ಕ ಛಂದಸ್ಸು[15] ಇವುಗಳು ಇವನ ನಾಟಕಗಳಲ್ಲಿ ಸಹಜವಾಗಿ ಮೂಡಿಬಂದಿವೆ. ಭವಭೂತಿಯ ಭಾಷೆಯ ವಿಚಾರವಾಗಿ ಧನಪಾಲನು ತನ್ನ ತಿಲಕಮಂಜರಿಯಲ್ಲಿ ಹೀಗೆ ಹೇಳಿದ್ದಾನೆ— ಸ್ಪಷ್ಟಭಾವರಸಾ ಚಿತ್ರೈಃ ಪದನ್ಯಾಸೈಃ ಪ್ರವರ್ತಿತಾ।
ನಾಟಕೇಷು ನಟಸ್ತ್ರೀವ ಭಾರತೀ ಭವಭೂತಿನಾ॥

ಕಾಳಿದಾಸನು ಸೂಚ್ಯವಾಗಿ ಮಾತ್ರ ತಿಳಿಸಬಲ್ಲ ಭಾವಗಳನ್ನು ಭವಭೂತಿಯು ವಾಚ್ಯವಾಗಿಯೇ[16] ವರ್ಣಿಸತಕ್ಕ ಸಾಮರ್ಥ್ಯವುಳ್ಳವನೆಂಬುದು ಕೆಲವು ವಿಮರ್ಶಕರ ಅಭಿಪ್ರಾಯ. ಒಟ್ಟಿನಲ್ಲಿ ಅವನೊಬ್ಬ ಅಪ್ರತಿಮ ಸಾಮರ್ಥ್ಯವುಳ್ಳ ವಿದ್ವತ್ಕವಿ.

ಭವಭೂತಿಯ ನಾಟಕಗಳಲ್ಲಿನ ಅನುಭವೋಕ್ತಿಗಳು ರತ್ನಪ್ರಾಯವಾಗಿವೆ.—ಉತ್ತರರಾಮಚರಿತದಲ್ಲಿ ಬರುವ ಕೆಲವನ್ನು ಉದಾಹರಣೆಗಾಗಿ ಇಲ್ಲಿ ಕೊಡಲಾಗಿದೆ—

೧. ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ i 10.
೨. ತೀರ್ಥೋದಕಂ ಚ ವಹ್ನಿಶ್ಚ ನಾನ್ಯತಃ ಶುದ್ಧಿಮರ್ಹತಃ i 13.
೩. ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ ।
ಲೋಕೋತ್ತರಾಣಾಂ ಚೇತಾಂಸಿ ಕೋ ಹಿ ವಿಜ್ಞಾತುಮರ್ಹತಿ ॥ ii 7.
೪. ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ iv 11.
೫. ಸತಾಂ ಸದ್ಭಿಃ ಸಂಗಃ ಕಥಮಪಿ ಹಿ ಪುಣ್ಯೇನ ಭವತಿ ii 1.

15 ಭವಭೂತೇಃ ಶಿಖರಿಣೀ ನಿರರ್ಗಲತರಂಗಿಣೀ । ರುಚಿರಾ ಘನಸಂದರ್ಭೇ ಯಾ ಮಯೂರೀವ ನೃತ್ಯತಿ ॥— ಕ್ಷೇಮೇಂದ್ರನ ಸುವೃತ್ತತಿಲಕ ೩೩.

16 (a) ಶಾಕುಂತಲ ii$^{1}$, ii$^{9}$, iv$^{17}$ ಗಳನ್ನು ಕ್ರಮವಾಗಿ ಮಾಲತೀಮಾಧವ iv$^{4}$, i$^{24}$, vi$^{16}$ ಗಳೊಡನೆ ಹೋಲಿಸಿ ನೋಡಿ.

(b) ಒಂದು ಸಲ ಕಾಳಿದಾಸ ಹೆಚ್ಚೋ ಭವಭೂತಿ ಹೆಚ್ಚೋ ಎಂಬ ಚರ್ಚೆ ಬಂದು ಒಂದೇ ವಿಷಯವಾಗಿ ಇಬ್ಬರೂ ಬರೆದಿದ್ದ ಶ್ಲೋಕಗಳನ್ನು ಭುವನೇಶ್ವರಿಯ ಮುಂದೆ ತಕ್ಕಡಿಯಲ್ಲಿ ಹಾಕಿ ತೂಗಿದಾಗ ಭವಭೂತಿಯ ಶ್ಲೋಕವಿದ್ದ ತಟ್ಟೆ ಹಗುರವಾಗಿ ಮೇಲಕ್ಕೇಳುವಂತೆ ಕಾಣಲು ಕೂಡಲೇ ದೇವಿಯು ತನ್ನ ಆಭರಣವೊಂದನ್ನು ಆ ತಟ್ಟೆಯಲ್ಲಿ ಹಾಕಿ ಕಾಳಿದಾಸನ ತಟ್ಟೆ ಹಗುರವಾಗುವಂತೆ ಮಾಡಿ ತನ್ನ ಪಕ್ಷಪಾತ ತೋರಿಸಿದಳೆಂದು ತಿಳಿಸುವ ಕಥೆಯೊಂದು ಭೋಜಪ್ರಬಂಧದಲ್ಲಿದೆ.

## ಭಟ್ಟನಾರಾಯಣ (ಸುಮಾರು ಕ್ರಿ.ಶ. ೭೦೦)

ಭಟ್ಟನಾರಾಯಣನ ವೇಣೀಸಂಹಾರದಿಂದ ೮ನೆಯ ಶತಮಾನದ ವಾಮನನೂ ೯ನೆಯ ಶತಮಾನದ ಆನಂದವರ್ಧನನೂ ಉದಾಹರಿಸಿದ್ದಾರೆ. ಬಾಣನು ತನಗಿಂತ ಹಿಂದಿನ ಗಣ್ಯಕವಿಗಳನ್ನು ಉಲ್ಲೇಖಿಸುವಾಗ ಈತನ ಹೆಸರನ್ನು ಹೇಳಿಲ್ಲ. ಆದ್ದರಿಂದ ಈತನು ಬಾಣನಿಗಿಂತ ಈಚೆಗೆ ವಾಮನನಿಗಿಂತ ಹಿಂದೆ ಇದ್ದವನೆನ್ನಬೇಕು; ಆದರೆ ಸುಮಾರು ಕ್ರಿ.ಶ. ೭೦೦ ರಲ್ಲಿದ್ದವನೆಂದಂತಾಯಿತು.

ಭಟ್ಟನಾರಾಯಣನಿಗೆ 'ಮೃಗರಾಜ'[17] ಎಂಬ ಮತ್ತೊಂದು ಹೆಸರಿದ್ದಂತೆ ಅವನ ನಾಟಕದ ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ಈತನು ಬ್ರಾಹ್ಮಣ. ಬಂಗಾಳದಲ್ಲಿ ಆಗ ಸಂಭವಿಸಿದ್ದ ಕ್ಷಾಮನಿವಾರಣಾರ್ಥವಾಗಿ ಒಂದು ಯಾಗ ಮಾಡಿಸುವ ಉದ್ದೇಶದಿಂದ ಅಲ್ಲಿನ ರಾಜನಾದ ಆರ್ಯಶೂರನು (೭ನೆಯ ಶತಮಾನ) ಈತನನ್ನು ಕನ್ಯಾಕುಬ್ಜದಿಂದ ತನ್ನಲ್ಲಿಗೆ ಕರೆಯಿಸಿಕೊಂಡುದಾಗಿ ಪ್ರತೀತಿಯಿದೆ.

ಈತನದಾಗಿ ನಮಗೆ ಸಿಕ್ಕಿರುವುದು ಒಂದೇ ಒಂದು ನಾಟಕ; ಅದೇ ವೇಣೀಸಂಹಾರ. ಇದರಲ್ಲಿ ಆರು ಅಂಕಗಳಿದ್ದು ವೀರರಸಪ್ರಧಾನವಾಗಿದೆ. ಕೃಷ್ಣಸಂಧಾನದಿಂದ ದುರ್ಯೋಧನನ ಸಂಹಾರದವರೆಗಿನ ಭಾರತದ ಕಥೆಯೇ ಈ ನಾಟಕದ ವಸ್ತು. ಪ್ರಥಮಾಂಕದ ಆದಿಯಲ್ಲಿ ಬಿಚ್ಚಿದ ವೇಣಿಯೊಡನೆ ಕಾಣಿಸಿಕೊಳ್ಳುವ ದ್ರೌಪದಿ ಕೊನೆಯವರೆಗೂ ಹಾಗೆಯೇ ಇರುತ್ತಾಳೆ. ಹೀಗೆ ಬಿಚ್ಚಿದ್ದ ವೇಣಿಯನ್ನು ಭೀಮನು ಗದಾಯುದ್ಧದಲ್ಲಿ ದುರ್ಯೋಧನನ ಸಂಹಾರ ಮಾಡಿದಮೇಲೆ, ತನ್ನ ರಕ್ತರಂಜಿತ ಕೈಗಳಿಂದಲೇ ಕಟ್ಟುವುದಾಗಿ ಇಲ್ಲಿ ನಿರೂಪಿಸಿರುವುದರಿಂದ ಈ ನಾಟಕದ ಹೆಸರಿನಲ್ಲಿ ತುಂಬ ಔಚಿತ್ಯವಿದೆ. ಕವಿಯು ರಸಪರಿಪೋಷಕ್ಕಾಗಿ ಕೆಲವು ಕಲ್ಪಿತ ಸನ್ನಿವೇಶಗಳನ್ನೂ ಕಥೆಯಲ್ಲಿ ಸೇರಿಸಿಕೊಂಡಿದ್ದಾನೆ; ಉದ್ದಕ್ಕೂ ಶ್ಲೇಷಾದಿ ಶಬ್ದಚಮತ್ಕಾರಗಳಿಂದ ಮುಂದೆ ಸಂಭವಿಸುವ ಘಟನೆಗಳನ್ನು ಮುಂಚಿತವಾಗಿಯೇ ಸೂಚಿಸುತ್ತಾ ವಸ್ತುರಚನೆ ಮಾಡಿದ್ದಾನೆ.

---

17 ತದಿದಂ ಕವೇರ್ಮೃಗರಾಜಲಕ್ಷ್ಮಣೋ ಭಟ್ಟನಾರಾಯಣಸ್ಯ ಕೃತಿಃ....ಎಂಬುದು ಪ್ರಸ್ತಾವನೆಯ ವಾಕ್ಯ. 'ಮೃಗರಾಜಲಕ್ಷ್ಮ' ಎಂಬುದು ಕವಿಯ ಬಿರುದು ಎಂದೂ ಹೇಳುವುದುಂಟು.



ಪಾತ್ರಸೃಷ್ಟಿಯಲ್ಲಿ ಭಟ್ಟನಾರಾಯಣನ ಶಕ್ತಿ ಅಸಾಧಾರಣವೆನ್ನಬೇಕು. ಸಂಸ್ಕೃತ ನಾಟಕಗಳಲ್ಲಿ ರಸದ ಕಡೆಯೇ ಗಮನವಿಡುವುದು ಸಹಜವಾಗಿರುವುದರಿಂದ ಪಾತ್ರಚಿತ್ರಣ ಪ್ರಾಯಃ ಸಮರ್ಪಕವಾಗಿರುವುದೇ ಇಲ್ಲ. ವೇಣೀಸಂಹಾರದಲ್ಲಿಯಾದರೋ ಒಂದೊಂದು ಪಾತ್ರದಲ್ಲೂ ಒಂದೊಂದು ವೈಶಿಷ್ಟ್ಯವಿರುವಂತೆ, ಮೊದಲಿನಿಂದ ಕೊನೆಯವರೆಗೆ, ಪಾತ್ರಚಿತ್ರಣದ ಕಡೆಯೂ ಕವಿ ಗಮನವಿಟ್ಟಿರುವುದು ಸ್ತುತ್ಯವಾಗಿದೆ. ಭೀಮನಲ್ಲಿ ಜಂಭ ಹೆಚ್ಚೆನ್ನಬಹುದಾದರೂ ಅವನ ಆತ್ಮವಿಶ್ವಾಸ ಅಚಲವಾದುದು. ದುರ್ಯೋಧನನು ಭೀಮನ ಹಾಗೆಯೇ ಒರಟನಾದರೂ ಅವನಿಗಿಂತ ಹೆಚ್ಚು ತಂತ್ರಿ. ಕರ್ಣ ಶೂರ; ಅರ್ಜುನನ ಪ್ರತಿದ್ವಂದ್ವಿ. ಆದರೆ ಮಹಾಭಾರತದಲ್ಲಿ ನಾವು ಕಾಣುವ ಉದಾತ್ತಗುಣಶಾಲಿಯಾದ ಕರ್ಣನಲ್ಲ ಈತ. ಇವನೊಬ್ಬನೇ ಏಕೆ? ಕೌರವರೆಲ್ಲ ಇಲ್ಲಿ ತುಂಬ ಕೀಳಾಗಿ ಚಿತ್ರಿತರಾಗಿದ್ದಾರೆ. ಕರ್ಣ, ಅಶ್ವತ್ಥಾಮ ಎಲ್ಲರೂ ಇಲ್ಲಿ ಸ್ವಾರ್ಥಿಗಳೇ. ಪಾಂಡವರ ಕಡೆ ಎಲ್ಲರೂ, ದ್ರೌಪದಿಯೂ ಸಹ, ಕೌರವರನ್ನು ಹಿಂಸಿಸುವುದರಲ್ಲೇ ಆಸಕ್ತರಾಗಿರುವಂತಿದೆ. ಯುಧಿಷ್ಠಿರನೊಬ್ಬನೇ ಸತ್ಯವಾದಿಯೂ, ಸಹಿಷ್ಣುವೂ, ತ್ಯಾಗಬುದ್ಧಿಯುಳ್ಳವನೂ ಆದ ಆದರ್ಶ ವೀರಪುರುಷ.

ವೇಣೀಸಂಹಾರವು ಲಕ್ಷಣಬದ್ಧವಾದ ನಾಟಕ. ದಶರೂಪಕದಲ್ಲಿ ವೇಣೀಸಂಹಾರವು ವಿಶೇಷವಾಗಿ ಉದಾಹೃತವಾಗಿದೆ. ಒಟ್ಟಿನಲ್ಲಿ ನಾಟಕ ಚೆನ್ನಾಗಿದೆಯೆನ್ನಬಹುದಾದರೂ ಯುದ್ಧವನ್ನು ವಿವರಿಸುವ ಸಂಭಾಷಣೆ ಬಹಳ ಬೇಸರವುಂಟುಮಾಡುತ್ತದೆ. ಅದ್ಭುತರಸವನ್ನು ನಾಟಕದಲ್ಲಿ ಸೇರಿಸಲು ತಂದಿರುವ ಚಾರ್ವಾಕ ಪ್ರಕರಣ ಅಸ್ವಾಭಾವಿಕವಾಗಿದೆ. ಎರಡನೆಯ ಅಂಕದಲ್ಲಿ ಬರುವ ಶೃಂಗಾರವು ಅನುಚಿತವೆಂದು ಸಾಹಿತ್ಯದರ್ಪಣದಲ್ಲಿ ಖಂಡಿಸಲ್ಪಟ್ಟಿದೆ. ನಾಟಕದ ಶೈಲಿ ಲಲಿತವೆನ್ನಲಾಗುವುದಿಲ್ಲ. ಆದರೆ ವೀರರಸಕ್ಕೆ ತಕ್ಕ ಬಿಗಿಯಾದ ಸತ್ವಶಾಲಿಯಾದ ಭಾಷೆ ಭಟ್ಟನಾರಾಯಣನದು. ಭಾವಕ್ಕೆ ತಕ್ಕ ಭಾಷೆಯನ್ನು ಬಳಸಿರುವುದೇ ಕವಿಯ ಶೈಲಿಯಲ್ಲಿ ಮೇಲೆದ್ದು ಕಾಣುವ ಗುಣ. ವೇಣೀಸಂಹಾರದ ಮಾತು, ರಸ, ಸನ್ನಿವೇಶಗಳನ್ನು ಪ್ರಾಯಃ ಎಲ್ಲ ದೇಶಭಾಷೆಯ ಕವಿಗಳೂ ಉಪಯೋಗಿಸಿಕೊಂಡಿದ್ದಾರೆ.

ಯುಧಿಷ್ಠಿರನಿಂದ ಸಾಂಪ್ರದಾಯಿಕ ರೀತಿಯ ಭರತವಾಕ್ಯವಾದ ಬಳಿಕ ಕೃಷ್ಣನಿಂದ 'ಏವಮಸ್ತು' ಎಂದು ಹೇಳಿಸಿರುವುದು ಈ ನಾಟಕಕರ್ತನ ಕೃಷ್ಣಭಕ್ತಿಯನ್ನು ತೋರಿಸುತ್ತದೆ.

### ಶಕ್ತಿಭದ್ರ (ಕ್ರಿ.ಶ. ೭ನೆಯ ಶತಮಾನ)

ಶಕ್ತಿಭದ್ರನು ಮಲಬಾರಿನವನು. ಈತನು ಶ್ರೀ ಶಂಕರಾಚಾರ್ಯರ (ಕ್ರಿ.ಶ. ೬೩೨-೬೬೪) ಸಾಕ್ಷಾತ್ ಶಿಷ್ಯನೆಂದು ಹೇಳುತ್ತಾರೆ. ಆದ್ದರಿಂದ ಈತನನ್ನು ಏಳನೆಯ ಶತಮಾನದವನೆನ್ನಬಹುದು. ಈತನಿಂದ ರಚಿತವಾದ ಆಶ್ಚರ್ಯ ಚೂಡಾಮಣಿಯಲ್ಲಿ ಏಳು ಅಂಕಗಳಿವೆ. ದಕ್ಷಿಣ ದೇಶದಲ್ಲಿ ರಚಿತವಾದ ನಾಟಕಗಳಲ್ಲಿ ಇದೇ ಮೊಟ್ಟಮೊದಲನೆಯದೆಂದು ಇದರ ಪ್ರಸ್ತಾವನೆಯಲ್ಲಿ ಹೇಳಿದೆ. ಈ ನಾಟಕವು ಭಾಸನ ನಾಟಕಗಳನ್ನು ಅನೇಕ ಅಂಶಗಳಲ್ಲಿ ಹೋಲುತ್ತದೆ.

ಆಶ್ಚರ್ಯಚೂಡಾಮಣಿಯ ವಸ್ತು ಶೂರ್ಪಣಖಾವೃತ್ತಾಂತದಿಂದ ಆರಂಭ ವಾಗಿ ರಾಮನು ಲಂಕೆಯಿಂದ ಹಿಂದಿರುಗುವವರೆಗಿನ ಶ್ರೀರಾಮನ ಚರಿತ್ರೆ. ಆದರೆ ರಾಮಾಯಣದಲ್ಲಿ ಬರುವ ಪ್ರಧಾನಘಟನೆಗಳು ಇಲ್ಲಿ ನಡೆಯುವ ಸಂದರ್ಭ ಸನ್ನಿವೇಶಗಳೇ ಬೇರೆ. ರಾವಣನು ಮಾಯಾರಾಮ, ಮಾಯಾ ಸೀತೆ, ಮಾಯಾಲಕ್ಷ್ಮಣರನ್ನು ಸೃಷ್ಟಿಸಿ ಅವರ ಮೂಲಕ ನಿಜವಾದ ರಾಮ ಸೀತೆ ಲಕ್ಷ್ಮಣರನ್ನು ಮೋಸಗೊಳಿಸುತ್ತಾನೆ. ಆದರೆ ಋಷಿಗಳು ತಮಗೆ ಕೊಟ್ಟಿದ್ದ ಆಶ್ಚರ್ಯಚೂಡಾಮಣಿ ಅದ್ಭುತಾಂಗುಲೀಯಕ ಮತ್ತು ಕವಚಗಳನ್ನು ಧರಿಸಿದ ಸೀತೆ ರಾಮ ಲಕ್ಷ್ಮಣರು ಅವುಗಳ ಸಹಾಯದಿಂದ ಪಾರಾಗುತ್ತಾರೆ. ಈ ಆಶ್ಚರ್ಯಚೂಡಾಮಣಿಯ ಪ್ರಕರಣವು ಕವಿಕಲ್ಪಿತವಾದ್ದರಿಂದ ನಾಟಕಕ್ಕೂ ಅದೇ ಹೆಸರಾಗಿದೆ. ಈ ನಾಟಕದಲ್ಲಿ ಅದ್ಭುತರಸದ ಪ್ರತಿಪಾದನೆ ಶ್ಲಾಘ್ಯ ವಾಗಿದೆ. ಶೈಲಿ ಲಲಿತವಾಗಿದೆ. ವರ್ಣನೆ ಅತಿಯಾಗಿಲ್ಲ. ಏಳು ಅಂಕಗಳಿಂದ ಒಟ್ಟು ಶ್ಲೋಕಗಳ ಸಂಖ್ಯೆ ೧೮೯ ಮಾತ್ರ. ರಾಮನು ವಿಷ್ಣುವಿನ ಅವತಾರವೆಂದೇ ಪರಿಗಣಿತನಾಗಿದ್ದಾನೆ. ಈ ನಾಟಕದ ಪ್ರಸ್ತಾವನೆಯಲ್ಲಿ ಕವಿಯು ತಾನು ರಚಿಸಿರುವುದಾಗಿ ಹೇಳಿಕೊಂಡಿರುವ ಉನ್ಮಾದವಾಸವದತ್ತ ನಾಟಕವು ಇನ್ನೂ ಸಿಕ್ಕಿಲ್ಲ.

### ಅನಂಗಹರ್ಷ ಮಾತ್ರರಾಜ (ಕ್ರಿ.ಶ. ಸುಮಾರು ೭೦೦)

ಅನಂಗಹರ್ಷ ಮಾತ್ರರಾಜನು ರಚಿಸಿದ **ತಾಪಸವತ್ಸರಾಜ** ನಾಟಕ ದಲ್ಲಿ ಆರು ಅಂಕಗಳಿವೆ. ಉದಯನನು ಪದ್ಮಾವತಿಯನ್ನು ಮದುವೆಯಾಗು ವಂತೆ ಮಾಡಲು ಯೌಗಂಧರಾಯಣನು ಹೂಡಿದ ತಂತ್ರದ ಪ್ರಸಂಗವೇ ಈ





ನಾಟಕದ ವಸ್ತು. ಈ ನಾಟಕದ ಪ್ರಕಾರ ಲಾವಾಣಕವಹ್ನಿಯು ಆಕಸ್ಮಿಕದಲ್ಲಿ ವಾಸವವತ್ತೆ ಸತ್ತುಹೋದಳೆಂದು ಕೇಳಿ ಉದಯನನು ತಾಪಸನಾಗುತ್ತಾನೆ. ಆದರೂ ಪತ್ನೀವಿಯೋಗದುಃಖವನ್ನು ತಾಳಲಾರದೆ ಪ್ರಯಾಗದಲ್ಲಿ ನದಿಗೆ ಬಿದ್ದು ಆತ್ಮಹತ್ಯೆಮಾಡಿಕೊಳ್ಳಲು ಹೋಗುತ್ತಾನೆ. ವಾಸವದತ್ತೆಯೂ ಅದೇ ಉದ್ದೇಶದಿಂದ ದೈವಿಕವಾಗಿ ಅದೇ ಜಾಗಕ್ಕೆ ಬರುತ್ತಾಳೆ. ಹೀಗೆ ಇಬ್ಬರೂ ಸಂಧಿಸಿ ಪುನರ್ಮಿಳಿತರಾಗುತ್ತಾರೆ. ಕುಟ್ಟನೀಮತದ ಕರ್ತೃವಾದ ದಾಮೋದರ ಗುಪ್ತನೂ (ಕ್ರಿ.ಶ. ೭೭೦) ಅನರ್ಘರಾಘವದ ಕರ್ತೃವಾದ ಮುರಾರಿಯೂ ಈ ನಾಟಕಕಾರನನ್ನು ಉಲ್ಲೇಖಿಸಿದ್ದಾರೆ. ಅಲ್ಲದೆ ಈ ಕವಿಯು ಶ್ರೀಹರ್ಷನ ರತ್ನಾವಳಿಯನ್ನು ಬಹುವಾಗಿ ಅನುಕರಿಸಿರುವುದು ಸ್ಪಷ್ಟವಾಗಿ ಕಾಣುತ್ತದೆ. ಆದ್ದರಿಂದ ಈತನ ಕಾಲ ಕ್ರಿ.ಶ. ೭೦೦ ರ ಸುತ್ತ ಇರಬಹುದು.

### ಮುರಾರಿ (ಕ್ರಿ.ಶ. ೮ನೆಯ ಶತಮಾನ)

ಮುರಾರಿಯ ತಂದೆ ಭಟ್ಟಶ್ರೀವರ್ಧಮಾನ; ತಾಯಿ ತಂತುಮತೀ. ಈತನು ತಾಪಸವತ್ಸರಾಜ ನಾಟಕದ ಕರ್ತೃವಾದ ಅನಂಗಹರ್ಷ (ಕ್ರಿಶ. ೭೦೦) ನನ್ನು ಉಲ್ಲೇಖಿಸಿದ್ದಾನೆ. ಹರವಿಜಯವನ್ನು ರಚಿಸಿರುವ ಕಾಶ್ಮೀರದ ಕವಿ ರತ್ನಾಕರನು (ಸುಮಾರು ಕ್ರಿ.ಶ. ೮೫೦) ಮುರಾರಿಯನ್ನು ನಿರ್ದೇಶಿಸಿದ್ದಾನೆ. ಆದ್ದರಿಂದ ಮುರಾರಿಯ ಕಾಲ ಕ್ರಿ.ಶ. ಎಂಟನೆಯ ಶತಮಾನದ ಉತ್ತರಾರ್ಧ ವೆನ್ನಲಡ್ಡಿಯಿಲ್ಲ. ಮುರಾರಿಯು ರಚಿಸಿರುವ **ಅನರ್ಘರಾಘವ** ನಾಟಕದಲ್ಲಿ ಏಳು ಅಂಕಗಳಿವೆ. ಈತನು ಭವಭೂತಿಯ ಮಹಾವೀರಚರಿತವನ್ನೇ ಮುಂದಿಟ್ಟುಕೊಂಡು ಈ ನಾಟಕ ರಚಿಸಿದಂತಿದೆ. ಅಷ್ಟೇ ಅಲ್ಲ, ಉತ್ತರರಾಮ ಚರಿತದ ಒಂದು ಶ್ಲೋಕವನ್ನು ಅಲ್ಲಿರುವ ಹಾಗೆಯೇ ಉದ್ಧರಿಸಿ ಸೇರಿಸಿ ಕೊಂಡಿದ್ದಾನೆ. ಭವಭೂತಿಗಿಂತ ತಾನು ಮೇಲೆಂದು ತೋರಿಸಲು ಈ ಕವಿಯು ಈ ನಾಟಕ ರಚಿಸಿದನೆಂಬ ಪ್ರತೀತಿಯೂ ಇದೆ. ಈತನು ತನ್ನನ್ನು 'ಬಾಲ ವಾಲ್ಮೀಕಿ' ಎಂದು ಕರೆದುಕೊಂಡಿದ್ದಾನೆ.

ಮುರಾರಿಯು ಪಂಡಿತಕವಿ. ಇವನ ನಾಟಕದ ಪಾತ್ರಗಳು ಆಡುವ ಭಾಷೆಯೂ ಕೂಡ ಪ್ರೌಢ ಮತ್ತು ಪಾಂಡಿತ್ಯಪೂರ್ಣವಾಗಿದೆ. ಶೈಲಿಯೂ ಜಟಿಲ. ಇವನಿಗೆ ಅಪೂರ್ವವಾದ ಪದಗಳನ್ನು ಬಳಸುವ ಮೋಹ

ಹೆಚ್ಚು. ಅದ್ದರಿಂದಲೇಯೋ ಏನೋ ಈತನು [18]ಪಂಡಿತಪ್ರಿಯನಾಗಿದ್ದಾನೆ. ಇವನದು ಕಾಳಿದಾಸಾದಿಗಳ ಪ್ರಾಚೀನಮಾರ್ಗವೂ ಅಲ್ಲ, ಈಚಿನವರ ಅಂಧಾನುಕರಣಮಾರ್ಗವೂ ಅಲ್ಲ; ಮಧ್ಯಮಾರ್ಗ. ಈ ಕಾರಣದಿಂದಲೇ 'ಮುರಾರೇಃ ತೃತೀಯಃ ಪಂಥಾಃ' ಎಂದು ಹೇಳುವುದು ರೂಢಿಯಾಗಿದೆ. ಮುರಾರಿಯ ಮುಂದೆ ಭವಭೂತಿಯದೇನು ?—ಎಂಬ ಭಾವನೆ ಕೆಲವರಲ್ಲಿದೆ. ಆ ಭಾವನೆಯ ಶ್ಲೋಕವಿದು (ಶ್ಲೇಷಾರ್ಥವನ್ನೂ ಗಮನಿಸಿ)—

ಮುರಾರಿಪದಚಿಂತಾಯಾಂ ಭವಭೂತೇಸ್ತು ಕಾ ಕಥಾ ?
ಭವಭೂತಿಂ ಪರಿತ್ಯಜ್ಯ ಮುರಾರಿಮುರರೀಕುರು ॥

ಮುರಾರಿಯನ್ನು ವಕ್ರೋಕ್ತಿನಿಪುಣನೆಂದು ಮಂಖನು ಹೇಳಿದ್ದಾನೆ. ಸಂಸ್ಕೃತನಾಟಕದ ಮಧ್ಯಕಾಲದ ಕೊನೆಯ ಕವಿ ಮುರಾರಿ. ಅವನಿಂದೀಚೆಗೆ ಸಂಸ್ಕೃತನಾಟಕದ ಅವನತಿಗೆ ಆರಂಭವಾಯಿತೆನ್ನಬಹುದು.

---

[18] ಯೇ ಶಬ್ದಶಾಸ್ತ್ರನಿಪುಣಾಃ ಯೇ ಶೀಲಿತನಿಘಂಟವಃ ।
ತೇಷಾಮೇವಾಧಿಕಾರೋಽಸ್ತ್ಯಸ್ಯ ಗ್ರಂಥಸ್ಯ ಪರಿಶೀಲನೇ ॥
—ಎಂದು ವ್ಯಾಖ್ಯಾತೃವಾದ ಹರದೀಕ್ಷಿತನು ಹೇಳಿದ್ದಾನೆ.

# ಅಧ್ಯಾಯ ೧೩

## ಸಂಸ್ಕೃತನಾಟಕದ ಅವನತಿಕಾಲ

### ರಾಜಶೇಖರ (ಕ್ರಿ.ಶ. ೧೦ನೆಯ ಶತಮಾನ)

ಬಾಲರಾಮಾಯಣ, ಬಾಲಭಾರತ (=ಪ್ರಚಂಡ ಪಾಂಡವೀಯ), ವಿದ್ಧಸಾಲಭಂಜಿಕಾ ಮತ್ತು ಕರ್ಪೂರಮಂಜರೀ—ಈ ನಾಲ್ಕು, ರಾಜಶೇಖರ ರಚಿತ ಆರು ನಾಟಕಗಳ[1] ಪೈಕಿ, ನಮಗೆ ಸಿಕ್ಕಿರುವುವು. ರಾಜಶೇಖರನು ಯಾಯಾವರೀಯ (ಕ್ಷತ್ರಿಯ) ವಂಶದವನು. 'ಮಹಾಮಂತ್ರಿ' ದುರ್ದುಕನೂ, ಶೀಲವತಿಯೂ ಇವನ ತಂದೆ ಮತ್ತು ತಾಯಿ. ಇವನಿಗೆ 'ಕವಿರಾಜ'ನೆಂಬ ಬಿರುದಿದ್ದಂತೆ ತಿಳಿಯುತ್ತದೆ. ಕನೋಜಿನಲ್ಲಿ (ಸುಮಾರು ಕ್ರಿ.ಶ. ೯೦೦ರಲ್ಲಿ) ಆಳಿದ ನಿರ್ಭರರಾಜನಿಗೆ ತಾನು ಗುರುವಾಗಿದ್ದುದಾಗಿ ತನ್ನ ಕರ್ಪೂರಮಂಜರಿಯಲ್ಲೂ, (ನಿರ್ಭರನ ಮಗ) ಮಹಿಪಾಲನ ಆದೇಶದಮೇಲೆ ಬಾಲಭಾರತವನ್ನು ರಚಿಸಿದುದಾಗಿ ಅದೇ ನಾಟಕದಲ್ಲಿ ಕವಿಯೇ ಹೇಳಿಕೊಂಡಿರುವುದರಿಂದ ಅವನ ಕಾಲ ೧೦ನೆಯ ಶತಮಾನದ ಆದಿಯೆಂದು ಹೇಳಬಹುದು.

**ಬಾಲರಾಮಾಯಣ**—ರಾಜಶೇಖರನು ರಚಿಸಿರುವ ೧೦ ಅಂಕಗಳಷ್ಟು ದೀರ್ಘವಾದ ಬಾಲರಾಮಾಯಣಕ್ಕೆ ಮಹಾನಾಟಕವೆಂದೂ ಹೆಸರಿದೆ. ಅದರ ಪ್ರಸ್ತಾವನೆಯೇ ಒಂದು ಅಂಕದಷ್ಟು ಬೆಳೆದಿದೆ. ಒಂದೊಂದು ಅಂಕವೂ ಒಂದೊಂದು ನಾಟಕೆಯಷ್ಟು ಉದ್ದವಾಗಿದೆ. ಈ ನಾಟಕದಲ್ಲಿ ಒಟ್ಟು ೭೪೧ ಶ್ಲೋಕಗಳಿವೆ. ಸಂಪೂರ್ಣ ರಾಮಾಯಣದ ಕಥೆಯೇ ಇದರ ವಸ್ತುವಾದರೂ ಕಥಾಸರಣಿಯಲ್ಲಿ ಹಲಕೆಲವು ಬದಲಾವಣೆಗಳಿವೆ. ರಾವಣನು ಮೊದಲನೆಯ ಅಂಕದಲ್ಲೇ ಕಾಣಿಸಿಕೊಳ್ಳುತ್ತಾನೆ; ಶಿವಧನುಸ್ಸನ್ನು ಬಗ್ಗಿಸಲು ಯತ್ನಿಸುವುದಿಲ್ಲ. ಸೀತೆಯನ್ನು ವರಿಸುವವನಮೇಲೆ ತನ್ನ ದ್ವೇಷವನ್ನು ಘೋಷಿಸಿ ಹೊರಟು ಹೋಗುತ್ತಾನೆ. ಸೀತಾಸ್ವಯಂವರವು 'ಗರ್ಭಾಂಕ'ವಾಗಿ ಲಂಕೆಯಲ್ಲಿ ಅವನ ಮುಂದೆ ಪ್ರದರ್ಶಿತವಾಗುತ್ತದೆ. ನಿರ್ವಿಣ್ಣನಾದ ರಾವಣನಿಗೆ ಅವನ ಮಂತ್ರಿ ಮಾಲ್ಯವಂತನು 'ಯಂತ್ರದ ಸೀತೆ'ಯನ್ನು ಮಾಡಿಸಿ ಕೊಡುತ್ತಾನೆ.

---

[1] ಇವುಗಳಲ್ಲದೆ ಇವನದಾಗಿ ಸಿಕ್ಕಿರುವುದು ಕಾವ್ಯಮೀಮಾಂಸಾ (ಅಧಿಕರಣ ೧); ಹರವಿಜಯ ಮಹಾಕಾವ್ಯವೂ ಭುವನಕೋಶವೂ ಸಿಕ್ಕಿಲ್ಲ.

ನಿಜವಾದ ಸೀತೆಯೆಂದು ಭಾವಿಸಿ ರಾವಣನು ಅದರೊಡನೆ ಸರಸವಾಡಿದಾಗ ಅದು ಯಂತ್ರವೆಂಬುದು ಕಂಡುಬರಲು ರಾವಣನು ನಿರಾಶನಾಗಿ ಉನ್ಮಾದದಿಂದ ವಿಕ್ರಮೋರ್ವಶೀಯದ ಪುರೂರವನಂತೆ ವ್ಯವಹರಿಸುತ್ತಾನೆ. ಈ ರೀತಿ ಕಥೆ ಮುಂದುವರೆದು ಶ್ರೀರಾಮನ ಪಟ್ಟಾಭಿಷೇಕದಲ್ಲಿ ಉಪಸಂಹೃತವಾಗುತ್ತದೆ. ಈ ನಾಟಕದಲ್ಲಿ ಮಹಾವೀರಚರಿತದ ದೋಷಗಳೆಲ್ಲಾ ಇವೆ.

**ಬಾಲಭಾರತದ** ಮೊದಲ ಎರಡು ಅಂಕಗಳು ಮಾತ್ರ ಸಿಕ್ಕಿವೆ. ಮಿಕ್ಕ ಭಾಗ ಲುಪ್ತವಾಗಿರಬೇಕು ಸಿಕ್ಕಿರುವ ಭಾಗದಲ್ಲಿ ದ್ರೌಪದೀಸ್ವಯಂವರವೂ ದ್ಯೂತಪ್ರಕರಣವೂ ರೂಪಿತವಾಗಿವೆ. ವಸ್ತುರಚನೆಯಲ್ಲಾಗಲೀ ಸಂವಿಧಾನದಲ್ಲಾಗಲಿ ಮೌಲಿಕತೆಯೇನೂ ಕಂಡುಬರುವುದಿಲ್ಲ. ಮಧ್ಯೆ ಮಧ್ಯೆ ದೇಶಭಾಷಾಶಬ್ದಗಳ ಪ್ರಯೋಗವಿದೆಯಾದರೂ ಶೈಲಿಯಲ್ಲಿ ಜಟಿಲತೆಯಿಲ್ಲ. ವ್ಯಾಸರ ಭಾರತದಲ್ಲಿನ ಕೆಲವು ಶ್ಲೋಕಗಳನ್ನೂ ಇದರಲ್ಲಿ ಮಧ್ಯೆ ಮಧ್ಯೆ ಹಾಗೆಯೇ ಉಪಯೋಗಿಸಿಕೊಳ್ಳಲಾಗಿದೆ.

**ವಿದ್ಧಸಾಲಭಂಜಿಕಾ**— ವಿದ್ಧಸಾಲಭಂಜಿಕೆಯು ನಾಲ್ಕು ಅಂಕಗಳ ನಾಟಿಕೆ. ವಿಧ್ಯಾಧರಮಲ್ಲ ಮೃಗಾಂಕಾವಳಿಯರ ಪ್ರೇಮವೃತ್ತಾಂತ ಇದರ ವಸ್ತು.

ತ್ರಿಲಿಂಗರಾಜ ವಿದ್ಯಾಧರಮಲ್ಲನ ಹೆಂಡತಿ ಮದನವತಿ. ಅವಳ ಸೋದರಮಾವನ ಮಗಳು ಮೃಗಾಂಕಾವಳಿ. ಹುಟ್ಟಿದಾಗಿನಿಂದ ಇವಳಿಗೆ ಗಂಡುವೇಷ ಹಾಕಿ ಬೆಳೆಸಿ ಮದನವತಿಯ ಹತ್ತಿರ ಬಿಡಲಾಗಿತ್ತು. ಈ ಗಂಡುವೇಷದ ರಾಜಕುಮಾರನಿಗೆ ಮದುವೆ ಮಾಡಿಕೊಡುವ ಉದ್ದೇಶದಿಂದ ಕುಂತಲರಾಜನು ತನ್ನ ಮಗಳಾದ ಕುವಲಯಮಾಲೆಯನ್ನು ಮದನವತಿಯ ಬಳಿಯಲ್ಲೇ ಬಿಟ್ಟಿದ್ದನು. ಮೃಗಾಂಕಾವಳಿಯ ವಿದ್ಯಮಾನವನ್ನೂ ಅವಳನ್ನು ಮದುವೆಯಾದವನು ಚಕ್ರವರ್ತಿಯಾಗುವನೆಂಬ ಸಿದ್ಧಾದೇಶವನ್ನೂ ತಿಳಿದಿದ್ದ ವಿದ್ಯಾಧರಮಲ್ಲನ ಮಂತ್ರಿಯು ಮೃಗಾಂಕಾವಳಿಯನುನ್ನು ಪುಸಲಾಯಿಸಿ ರಾಜನ ಶಯ್ಯಾಗೃಹಕ್ಕೆ ಕಳುಹಿಸಿ ಅವನ ಕೊರಳಿಗೆ ಮುಕ್ತಾಹಾರವನ್ನು ಹಾಕುವಂತೆ ಏರ್ಪಡಿಸುತ್ತಾನೆ. ರಾಜನು, ಕೊರಳಿನಲ್ಲಿ ಹಾರವಿದ್ದರೂ, ಇದನ್ನು ಸ್ವಪ್ನವೆಂದೇ ಭಾವಿಸುತ್ತಾನೆ. ಮುಂದೆ ಸ್ಫಟಿಕಶಿಲಾಮಂದಿರದಲ್ಲಿ ಶಾಲಭಂಜಿಕೆಯ ರೂಪದಲ್ಲಿ ಅವಳನ್ನು ಕಂಡು ತಾನು ಸ್ವಪ್ನದಲ್ಲಿ ಕಂಡವಳೇ ಅವಳೆಂದು ಗುರ್ತಿಸುತ್ತಾನೆ. ಈ ಶಾಲಭಂಜಿಕಾಪ್ರಕರಣವು ಕವಿಯ ಸ್ವಂತ ಕಲ್ಪನೆಯಾದ್ದರಿಂದ ನಾಟಿಕೆಗೂ ಅದೇ ಹೆಸರಾಯಿತು. ಮುಂದೆ ರಾಜನೂ ಮೃಗಾಂಕಾವಳಿಯೂ ಸಾಕ್ಷಾತ್ತಾಗಿ ಸಂಧಿಸುತ್ತಾರೆ. ಆದರೆ ಮಹಾರಾಣಿಯ ಬರುವಿಕೆಯಿಂದ ಗಾಬರಿಗೊಂಡು ಅಗಲುತ್ತಾರೆ. ಮೃಗಾಂಕಾವಳಿ ಗಂಡುವೇಷದ ಹೆಣ್ಣು ಎಂಬುದು ರಾಣಿಗೆ ತಿಳಿಯುದು. ಆದ್ದರಿಂದ ಅವಳಿಗೆ ಹೆಣ್ಣುವೇಷ ಹಾಕಿ ತನ್ನ ಗಂಡನಿಗೆ ಮದುವೆ



ಮಾಡಿಕೊಟ್ಟು ಅವನನ್ನು ಮೋಸಗೊಳಿಸಿ ತಮಾಷೆಮಾಡಬೇಕೆಂದು ಏರ್ಪಡಿಸಿ, ತಾನೇ ಮೋಸಹೋಗುತ್ತಾಳೆ. ಕೊನೆಗೆ ಕುವಲಯಮಾಲೆಯನ್ನೂ ತನ್ನ ಗಂಡನಿಗೇ ಮದುವೆ ಮಾಡಿಕೊಡಬೇಕಾಗುತ್ತದೆ.

**ಕರ್ಪೂರಮಂಜರಿಯು** ಬರೀ ಪ್ರಾಕೃತಭಾಷೆಯಲ್ಲೇ ರಚಿತವಾದ (ಜವನಿಕಾಂತರಗಳೆಂಬ) ನಾಲ್ಕು ಅಂಕಗಳ ಸಟ್ಟಕ. ಇದನ್ನು ರಾಜಶೇಖರನು ತನ್ನ ಹೆಂಡತಿಯಾದ ಅವಂತಿಸುಂದರಿಯ ಇಷ್ಟದಂತೆ ರಚಿಸಿದನಂತೆ.

ಈ ಸಟ್ಟಕದ ನಾಯಿಕೆ ಕರ್ಪೂರಮಂಜರಿಯು ನಾಯಕನಾದ ಚಂಡಪಾಲರಾಜನ ಪಟ್ಟಮಹಿಷಿಯ ಚಿಕ್ಕಮ್ಮನ ಮಗಳು. ಒಂದುದಿನ ರಾಜನೂ ರಾಣಿಯೂ ವಿನೋದದಿಂದಿರುವಾಗ ಭೈರವಾನಂದನೆಂಬ ಸಿದ್ಧನು ವಿದರ್ಭನಗರದ ರಾಜಕುಮಾರಿ ಕರ್ಪೂರಮಂಜರಿಯನ್ನು ತನ್ನ ಯೋಗಶಕ್ತಿಯಿಂದ ಅವರೆದುರಿಗೆ ಬರಮಾಡುತ್ತಾನೆ. ರಾಜಕುಮಾರಿಯು ಅಲ್ಲಿಂದ ಮುಂದಕ್ಕೆ ರಾಣಿಯ ಬಳಿಯೇ ಇರುತ್ತಾಳೆ. ರಾಜನಿಗೂ ಈ ರಾಜಕುಮಾರಿಗೂ ಪ್ರೀತಿಯುಂಟಾಗುತ್ತದೆ. ವಿದೂಷಕನೂ ವಿಚಕ್ಷಣೆಯೆಂಬ ಚೇಟಿಯೂ ಈ ಪ್ರೇಮಿಗಳಿಗೆ ಸಹಾಯಕರಾಗಿರುತ್ತಾರೆ. ರಾಣಿಗೆ ಇದು ತಿಳಿದು ಕರ್ಪೂರಮಂಜರಿಯನ್ನು ರಕ್ಷಾಗೃಹದಲ್ಲಿ ಬಂಧಿಸಿ ಸುತ್ತಲೂ ಕಾವಲು ಹಾಕಿಸುತ್ತಾಳೆ. ಆಲ್ಲಿಂದ ಉದ್ಯಾನವನಕ್ಕಿದ್ದ ಸುರಂಗಮಾರ್ಗವನ್ನೂ ಮುಚ್ಚಿಸಿಬಿಡುತ್ತಾಳೆ.

ಈ ಮಧ್ಯೆ ಲಾಟ ದೇಶದ ರಾಜಕುಮಾರಿ 'ಘನಸಾರಮಂಜರಿ'ಯನ್ನು ಮದುವೆಯಾಗುವವನು ಚಕ್ರವರ್ತಿಯಾಗುವನೆಂದೂ ರಾಣಿಯು ಒಪ್ಪಿದರೆ ಅವಳನ್ನು ತನ್ನ ಯೋಗಶಕ್ತಿಯಿಂದಲೇ ಬರಮಾಡಿ ರಾಜನಿಗೆ ಮದುವೆಮಾಡಿಸುವುದಾಗಿಯೂ ಭೈರವಾನಂದನು ತಿಳಿಸುತ್ತಾನೆ. ರಾಣಿಯು ಒಪ್ಪಿ ಚಾಮುಂಡಿ ದೇವಾಲಯದಲ್ಲಿ ಮದುವೆಗೂ ಸಿದ್ಧಮಾಡುತ್ತಾಳೆ. ಮದುವೆಯ ವೇಳೆಗೆ ಸರಿಯಾಗಿ ಮದುವಣಗಿತ್ತಿಯಾಗಿ ಅಲ್ಲಿ ಕಾಣಿಸಿಕೊಂಡ ಕರ್ಪೂರಮಂಜರಿಯನ್ನು ಕಂಡು ರಾಣಿಗೆ ಸಂದೇಹವಾಗುತ್ತದೆ. ಅವಳು ಎರಡು ಮೂರು ಸಾರಿ ಅಂತಃಪುರಕ್ಕೆ ಹೋಗಿಬರುತ್ತಾಳೆ. ಒಂದೊಂದು ಸಲವೂ ದೇವಿಯ ವಿಗ್ರಹದ ಹಿಂಭಾಗದಿಂದ ಇದ್ದ ಸುರಂಗಮಾರ್ಗದಿಂದ ಕರ್ಪೂರಮಂಜರಿ ಅರಮನೆಗೆ ಮುಂಚಿತವಾಗಿಯೇ ಹೋಗಿ ಹಾಜರಿರುತ್ತಾಳೆ. ಕೊನೆಗೂ ರಾಣಿಯ ಸಮ್ಮುಖದಲ್ಲೇ ರಾಜನಿಗೂ ಕರ್ಪೂರಮಂಜರಿಗೂ ಮದುವೆಯಾಗಿಬಿಡುತ್ತದೆ.

ರಾಜಶೇಖರನಲ್ಲಿ ಮೌಲಿಕತೆಯಿಲ್ಲ. ಅವನು ಬರೆದಿರುವುದೆಲ್ಲ ಹಿಂದಿನ ಕವಿಗಳ ರಚನೆಯ ಅಂಧಾನುಕರಣ ಮಾತ್ರ. ಕರ್ಪೂರಮಂಜರಿಯ ಕಥೆ ಬಹುಮಟ್ಟಿಗೆ 'ರತ್ನಾವಳಿ'ಯಂತಿದೆ. ರಾಜಶೇಖರನ ರೂಪಕಗಳೆಲ್ಲ ಅನಾವಶ್ಯಕವಾಗಿ ದೊಡ್ಡದಾಗಿ ಬೆಳೆದುಬಿಟ್ಟಿವೆ. ಅವುಗಳ ಸಂವಿಧಾನವಾಗಲಿ ರಸಪರಿಪೋಷವಾಗಲಿ ವಸ್ತುರಚನೆಯಾಗಲಿ ಆಕರ್ಷಕವಾಗಿಲ್ಲ. ಆದರೆ ರಾಜ

ಶೇಖರನು ಒಳ್ಳೆಯ ಪಂಡಿತನಾದ್ದರಿಂದ ಅವನಲ್ಲಿ ಭಾಷಾಸಂಪತ್ತಿಯಿದೆ; ಬರೆಯಬೇಕಾದ್ದನ್ನು ಸಂಸ್ಕೃತದಲ್ಲಾಗಲೀ ಪ್ರಾಕೃತದಲ್ಲಾಗಲಿ ಚೊಕ್ಕವಾಗಿ ಬರೆಯುವ ಸಾಮರ್ಥ್ಯವಿದೆ. ಅವನ ಕರ್ಪೂರಮಂಜರಿಯಲ್ಲಿ ಬರುವ ಈ ಮಾತು ಗಮನಾರ್ಹ—

ಉಕ್ತಿವಿಶೇಷಃ ಕಾವ್ಯಂ; ಭಾಷಾ ಯಾ ಭವತಿ ಸಾ ಭವತು ॥
ಪುರುಷಾಃ ಸಂಸ್ಕೃತಗುಂಫಾಃ ಪ್ರಾಕೃತಗುಂಫೋಽಪಿ ಭವತಿ ಸುಕುಮಾರಃ ।
ಪುರುಷಮಹಿಲಾನಾಂ ಯಾವದಿಹಾಂತರಂ ತೇಷು ತಾವತ್ ॥

## ಕ್ಷೇಮೀಶ್ವರ (ಕ್ರಿ.ಶ. ೧೦ನೆಯ ಶತಮಾನ)

ಕ್ಷೇಮೀಶ್ವರನನ್ನು ಕ್ಷೇಮೇಂದ್ರನೆಂದೂ ಕರೆಯುವುದುಂಟು. ಚಂಡಕೌಶಿಕ ಮತ್ತು ನೈಷಧಾನಂದ ಎಂಬ ಎರಡು ನಾಟಕಗಳನ್ನು ಈ ಕವಿ ರಚಿಸಿದ್ದಾನೆ. ಚಂಡಕೌಶಿಕದ ಪ್ರಸ್ತಾವನೆಯಿಂದ ಈತನ ವಿಚಾರ ಹೀಗೆ ತಿಳಿದುಬರುತ್ತದೆ. ಕ್ಷೇಮೀಶ್ವರನು ವಿಜಯಪ್ರಕೋಷ್ಠನ ಮರಿಮಗ. ಮಹಿಪಾಲದೇವನ ಆಜ್ಞಾನುಸಾರ ಈ ನಾಟಕ ರಚಿತವಾಯಿತು. ಹಿಂದೆ ಚಂದ್ರಗುಪ್ತನಿಂದ ಧ್ವಂಸಗೊಂಡಿದ್ದ ನಂದರು ಪುನಃ ಕರ್ಣಾಟಕದಲ್ಲಿ ರಾಜರಾಗಿದ್ದುದರಿಂದ ಅವರನ್ನು ಮತ್ತೆ ನಾಶಗೊಳಿಸುವುದಕ್ಕಾಗಿ ಚಂದ್ರಗುಪ್ತನೇ ಮಹಿಪಾಲನಾಗಿ ಹುಟ್ಟಿದ್ದನಂತೆ. ಈ ಮಹಿಪಾಲನು ಕ್ರಿ.ಶ. ೯೧೦ ರಿಂದ ೯೪೦ ರವರೆಗೆ ಕನೋಜಿನಲ್ಲಿ ಆಳಿದವನು. ಈತನೇ ರಾಜಶೇಖರನಿಗೂ ಪೋಷಕನಾಗಿದ್ದ ದೊರೆ. ಈ ಮಹಿಪಾಲನಿಗೂ ಕರ್ಣಾಟಕದ ರಾಷ್ಟ್ರಕೂಟ ರಾಜನಾದ ಇಂದ್ರನಿಗೂ ಕ್ರಿ.ಶ. ೯೧೬ ರಲ್ಲಿ ಯುದ್ಧವಾಯಿತೆಂದು ತಿಳಿದು ಬರುತ್ತದೆ. ಆದ್ದರಿಂದ ಕ್ಷೇಮೀಶ್ವರನು ಹತ್ತನೆಯ ಶತಮಾನದ ಆದಿಯಲ್ಲಿದ್ದವನೆಂದಂತಾಯಿತು.

**ಚಂಡಕೌಶಿಕವು** ಐದು ಅಂಕಗಳ ನಾಟಕ. ಇದರ ವಸ್ತುವು ಪ್ರಸಿದ್ಧವಾದ ಹರಿಶ್ಚಂದ್ರನ ಕಥೆಯೇ ಆದರೂ ಕೌಶಿಕನ ಕೋಪ ಮತ್ತು ಅದರ ಪರಿಣಾಮವಾಗಿ ಹರಿಶ್ಚಂದ್ರನು ಪಾಡುಪಟ್ಟಂತೆ ನಿರೂಪಿತವಾಗಿರುವುದರಿಂದ ನಾಟಕಕ್ಕೆ ಈ ಹೆಸರು ಬಂದಿದೆ.

ವಿದ್ಯಾತ್ರಯಗಳನ್ನು ಪಡೆಯಲು ವಿಶ್ವಾಮಿತ್ರನು ತಪಸ್ಸುಮಾಡುತ್ತಿರುವಾಗ ಆ ವಿದ್ಯೆಗಳ ಆರ್ತನಾದ ಕೇಳಿದ ರಾಜಾ ಹರಿಶ್ಚಂದ್ರನು ಅವನನ್ನು ಪಾಷಂಡನೆಂದು ಭಾವಿಸಿ



ದೂಷಿಸುತ್ತಾನೆ. ಇದರಿಂದ ತಪೋಭಂಗವಾಗಿ ವಿದ್ಯೆಗಳು ಕೈಬಿಟ್ಟುಹೋಗುತ್ತವೆ; ವಿಶ್ವಾಮಿತ್ರನು ಕುಪಿತನಾಗುತ್ತಾನೆ. ದಾನ ರಕ್ಷಣ ಶಿಕ್ಷಣಗಳು ತನ್ನ ಧರ್ಮವಾದ್ದರಿಂದ ತಾನು ಹಾಗೆ ಮಾಡಿದುದಾಗಿ ರಾಜನು ಹೇಳಲು 'ನನಗೇನು ದಾನಮಾಡುತ್ತೀ?' ಎಂದು ವಿಶ್ವಾಮಿತ್ರ ಕೇಳುತ್ತಾನೆ. 'ಈ ಭೂಮಿಯೆಲ್ಲಾ ನಿಮಗೆ' ಎಂದು ಹೇಳಿ ಅದಕ್ಕೆ ದಕ್ಷಿಣೆಯಾಗಿ ಒಂದು ಲಕ್ಷ ಹೊನ್ನನ್ನೂ ಈ ಭೂಮಿಗೆ ಸೇರದ ಕಾಶಿಯಲ್ಲಿ ಸಂಪಾದಿಸಿ ಒಂದು ತಿಂಗಳ ಅವಧಿಯಲ್ಲಿ ಕೊಡುವುದಾಗಿ ತಿಳಿಸುತ್ತಾನೆ. ಇದರಿಂದ ಮತ್ತೂ ಹೆಚ್ಚಿದ ಕೋಪದಿಂದ ವಿಶ್ವಾಮಿತ್ರನು ಈ ರೀತಿ ರಾಜ್ಯವಿಚ್ಯುತನಾದ ಹರಿಶ್ಚಂದ್ರನನ್ನು ಸತ್ಯವಿಚ್ಯುತನನ್ನಾಗಿಯೂ ಮಾಡುವುದಾಗಿ ಪ್ರತಿಜ್ಞೆಮಾಡುತ್ತಾನೆ. ಕಾಶಿಯಲ್ಲಿ ಹರಿಶ್ಚಂದ್ರನು ದಕ್ಷಿಣೆಯ ಹಣಕ್ಕಾಗಿ ತನ್ನ ಹೆಂಡತಿಯನ್ನು ಒಬ್ಬ ಬ್ರಾಹ್ಮಣನಿಗೂ ತನ್ನನ್ನು ಶ್ಮಶಾನ ಕಾಯುವ ಒಬ್ಬ ಚಂಡಾಲನಿಗೂ ಮಾರಿಕೊಳ್ಳುತ್ತಾನೆ. ಶ್ಮಶಾನದ ಕಾವಲಿನಲ್ಲಿದ್ದಾಗ ವಿದ್ಯೆಗಳು ಅವನಲ್ಲಿ ಪ್ರಸನ್ನವಾಗಿ ಬರಲು ಅವರನ್ನು ಅವನು ವಿಶ್ವಾಮಿತ್ರನಲ್ಲಿಗೇ ಕಳುಹಿಸುತ್ತಾನೆ. ಕಾಪಾಲಿಕನೊಬ್ಬನು ಹರಿಶ್ಚಂದ್ರನ ಸಹಾಯದಿಂದ ಸಿದ್ಧಿಪಡೆದು ನಿಧಿಗಳನ್ನು ಹೊತ್ತು ತಂದುಕೊಡಲು ಅವುಗಳನ್ನು ತನ್ನ ಒಡೆಯನಾದ ಚಂಡಾಲನಿಗೇ ಕಳುಹಿಸಿಕೊಡುತ್ತಾನೆ. ಒಂದು ದಿನ ಹರಿಶ್ಚಂದ್ರನ ಮಗನು ಹಾವು ಕಚ್ಚಿ ಸಾಯಲು ಅವನನ್ನು ಶ್ಮಶಾನಕ್ಕೆ ತನ್ನ ಹೆಂಡತಿಯೇ ಹೊತ್ತುತಂದಾಗಲೂ ಅವಳಿಂದ ವಸೂಲಾಗಬೇಕಾದ ಮೃತಕಂಬಳವನ್ನು ತೆಗೆದುಕೊಳ್ಳುತ್ತಾನೆ. ಪತಿಪತ್ನಿಯರಿಬ್ಬರೂ ದಾಸ್ಯದಲ್ಲಿದ್ದು ಸಾಯುವುದಕ್ಕೂ ಸ್ವಾತಂತ್ರ್ಯವಿಲ್ಲದೆ ಧರ್ಮವು ಕಾಪಾಡಲಾರದಲ್ಲಾ ಎಂದು ಶೋಕಿಸುವಾಗ ಧರ್ಮದೇವತೆಯೇ ಬಂದು ಮೃತನಾಗಿದ್ದ ಮಗ (ರೋಹಿತಾಶ್ವ)ನನ್ನು ಬದುಕಿಸುತ್ತಾನೆ. ವಿದ್ಯಾಪ್ರಾಪ್ತಿಯಿಂದ ವಿಶ್ವಾಮಿತ್ರನೂ ಪ್ರೀತನಾಗಿ ರಾಜ್ಯವನ್ನು ಹಿಂದಿರುಗಿಸುತ್ತಾನೆ. ಹರಿಶ್ಚಂದ್ರನ ಸತ್ಯಪರೀಕ್ಷೆಗಾಗಿ ಇಷ್ಟೆಲ್ಲಾ ನಡೆಯಿತೆಂದೂ ಧರ್ಮನೇ ಚಂಡಾಲನಾಗಿ ನಟಿಸಿದ್ದನೆಂದೂ ತಿಳಿಯುತ್ತದೆ. ಹರಿಶ್ಚಂದ್ರನು ತನ್ನ ಪುಣ್ಯಬಲದಿಂದ ಪ್ರಜೆಗಳೆಲ್ಲರೊಡನೆ ಪುಣ್ಯಲೋಕವನ್ನು ಪಡೆಯುತ್ತಾನೆ.

ಈ ನಾಟಕವು ಜನಪ್ರಿಯವಾಗಿದೆ. ಇದರ ಶೈಲಿ ಲಲಿತವಾಗಿದ್ದು ಕರುಣರಸವನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಪ್ರತಿಪಾದಿಸುತ್ತದೆ.

ಕ್ಷೇಮೀಶ್ವರನ **ನೈಷಧಾನಂದವು** ನಳಚರಿತ್ರೆಯನ್ನು ಏಳು ಅಂಕಗಳಲ್ಲಿ ನಿರೂಪಿಸುವ ನಾಟಕ. ಇದು ಇನ್ನೂ ಅಚ್ಚಾಗಿಲ್ಲ. ಈತನು ಇನ್ನೂ ಕೆಲವು ನಾಟಕಗಳನ್ನು ಬರೆದಿರುವಂತೆಯೂ ಅವುಗಳಲ್ಲಿ 'ಚಿತ್ರಭಾರತ' ಮತ್ತು 'ಕನಕಜಾನಕೀ' ಮುಖ್ಯವಾದುವೆಂದೂ ತಿಳಿದುಬರುತ್ತದೆ. ಆದರೆ ಇವೊಂದೂ ಇನ್ನೂ ಸಿಕ್ಕಿಲ್ಲ.

## ಬಿಲ್ಹಣ (೧೧ನೆಯ ಶತಮಾನ)

ವಿಕ್ರಮಾಂಕದೇವಚರಿತವನ್ನೂ (ಪುಟ ೮೫-೮೭) ಚೌರಪಂಚಾಶಿಕೆಯನ್ನೂ (ಪುಟ ೧೩೦) ರಚಿಸಿದ ಬಿಲ್ಹಣನೇ **ಕರ್ಣಸುಂದರೀ** ಎಂಬ ನಾಲ್ಕು

ಅಂಕಗಳ ನಾಟಿಕೆಯನ್ನೂ ಬರೆದಿದ್ದಾನೆ. ಚಾಳುಕ್ಯರಾಜನಾದ ಕಾಮದೇವನು ವಿದ್ಯಾಧರರಾಜಕುಮಾರಿಯಾದ ಕರ್ಣಸುಂದರಿಯನ್ನು ಮೊದಲು ಸ್ವಪ್ನದಲ್ಲೂ ಬಳಿಕ ಚಿತ್ರದಲ್ಲೂ ಕಂಡು ಅವಳನ್ನು ಮೋಹಿಸಿ ಕೊನೆಗೆ ಮದುವೆಯಾದ ಪ್ರಸಂಗವೇ ಈ ನಾಟಿಕೆಯ ವಸ್ತು.

ಕರ್ಣಸುಂದರಿಯು ಕಾಮದೇವನ ರಾಣಿಯ ಪರಿವಾರಕ್ಕೆ ಸೇರಿದವಳು. ಅವಳಲ್ಲಿ ರಾಜನು ಅನುರಕ್ತನಾಗಿರುವುದು ರಾಣಿಗೆ ತಿಳಿಯಲು ಅಸೂಯೆಯಿಂದ ರಾಜನಿಗೆ ಬುದ್ಧಿ ಕಲಿಸಬೇಕೆಂದು ಉದ್ದೇಶಿಸಿ ಒಬ್ಬ ಹುಡಗನಿಗೆ ಹೆಣ್ಣುವೇಷ ಹಾಕಿ ಅವನಿಗೂ ರಾಜನಿಗೂ ಮದುವೆಯಾಗುವಂತೆ ಏರ್ಪಡಿಸುತ್ತಾಳೆ. ಮಂತ್ರಿಗೆ ಈ ವಿಚಾರ ತಿಳಿದುಬಂದು ಉಪಾಯದಿಂದ ಸಕಾಲದಲ್ಲಿ ಮದುವಣಗಿತ್ತಿಯಾದ ಆ ಹೆಣ್ಣುವೇಷದ ಗಂಡಿನ ಬದಲು ಕರ್ಣಸುಂದರಿಯನ್ನೇ ತಂದು ಅವಳೊಡನೆ ರಾಜನ ವಿವಾಹವು ಸಂಭ್ರಮದಿಂದ ರಾಣಿಯ ಸಮ್ಮುಖದಲ್ಲೇ ನಡೆಯುವಂತೆ ಮಾಡುತ್ತಾನೆ.

ಬಿಲ್ಹಣನ ಈ ನಾಟಕವು ಮಾಲವಿಕಾಗ್ನಿಮಿತ್ರ, ರತ್ನಾವಳೀ ಮತ್ತು ವಿದ್ಧಸಾಲಭಂಜಿಕೆಗಳ ಮಾದರಿಯಲ್ಲಿ ರೂಪಿತವಾದುದೆಂದು ಧಾರಾಳವಾಗಿ ಹೇಳಬಹುದು.

**ಮಹಾನಾಟಕ** (ಹನುಮನ್ನಾಟಕ)

ಹದಿನಾಲ್ಕು ಅಂಕಗಳಷ್ಟು ದೀರ್ಘವಾದ ಹನುಮನ್ನಾಟಕವನ್ನು ಮಹಾನಾಟಕವೆಂದೇ ಸಾಮಾನ್ಯವಾಗಿ ಕರೆಯಲಾಗುತ್ತಿದೆ. ಶ್ರೀರಾಮನ ಚರಿತ್ರೆಯೇ ಇದರ ವಸ್ತು. ಇದರಲ್ಲಿ ವರ್ಣನಾಭಾಗಗಳು ತುಂಬ ಹೆಚ್ಚು. ಹನುಮಂತನೇ ಈ ನಾಟಕವನ್ನು ರಚಿಸಿ ಪಶ್ಚಿಮಘಟ್ಟದ ಶಿಲೆಗಳ ಮೇಲೆ ಬರೆದಿಟ್ಟನೆಂದೂ ಇದರಿಂದ ತಮ್ಮ ರಾಮಾಯಣವು ಕಳೆಗುಂದುವುದೆಂದು ಹೆದರಿದ ವಾಲ್ಮೀಕಿಮಹರ್ಷಿಗಳು ಈ ಶಿಲೆಗಳನ್ನು ಸಮುದ್ರಕ್ಕೆ ಎಸೆದುಬಿಟ್ಟರೆಂದೂ, ನಾವಿಕನೊಬ್ಬನು ಆ ಪೈಕಿ ಕೆಲವು ಭಾಗಗಳನ್ನು ತಂದು ಭೋಜನಿಗೆ ಕೊಡಲಾಗಿ ಅವನು **ದಾಮೋದರಗುಪ್ತ**ನಿಂದ ಅವುಗಳನ್ನು ಒಟ್ಟುಗೂಡಿಸಿ ಈಗಿರುವ ನಾಟಕರೂಪಕ್ಕೆ ತಂದನೆಂದೂ ಪ್ರಾಚೀನ ಸಂಪ್ರದಾಯದ ಪಂಡಿತರು ಹೇಳುವುದುಂಟು. ಪ್ರಾಯಃ ಬೇರೆ ಬೇರೆ ಕಾಲದ ಅನೇಕ ಕವಿಗಳ ಕೈವಾಡ ಈ ನಾಟಕದಲ್ಲಿದ್ದಿರಬೇಕು. ಈಗಿರುವುದು ಹಿಂದೆ



ಅತಿ ದೀರ್ಘವಾಗಿ ರಚಿತವಾಗಿದ್ದ ನಾಟಕದ ಸಂಗ್ರಹರೂಪವೆನ್ನುವುದಾದರೂ, ಇದರ ರಚನೆಯಲ್ಲಿ ಲಾಘವವಿಲ್ಲ. ಆದರೆ ಕಾವ್ಯಗುಣರಹಿತವಾಗಿದ್ದರೂ ಇದು ಪ್ರಾಚೀನಾನ್ವೇಷಣೆಗೆ ಸಹಕಾರಿಯಾಗಿದೆ. ಈ ಕೃತಿಯ ಕಾಲ ಖಚಿತವಾಗಿ ತಿಳಿದಿಲ್ಲ. ಇದರ ಅಂತಿಮರೂಪ ಭೋಜರಾಜನ ಕಾಲದಲ್ಲಿ ಸಿದ್ಧವಾಯಿತೆಂಬುದರ ಆಧಾರದಮೇಲೆ ಇದು ೧೧ನೆಯ ಶತಮಾನದ್ದೆಂದು ಹೇಳಬಹುದು. ಮಧುಸೂದನನ ಪಾಠದ ಈ ನಾಟಕದಲ್ಲಿ ೧೦ ಅಂಕಗಳು ಮಾತ್ರ ಇವೆ. ಒಟ್ಟಿನಲ್ಲಿ ಈ ಕೃತಿಯು ಹೆಸರಿಗೆ ಮಾತ್ರ ನಾಟಕ. ಇದು ಛಾಯಾನಾಟಕವಾಗಿ ಪ್ರದರ್ಶಿತವಾಗಬೇಕೆಂಬ ಉದ್ದೇಶದಿಂದ ರಚಿತವಾಯಿತೆಂಬುದು ಕೆಲವರ ಅಭಿಪ್ರಾಯ.

**ಜಯದೇವನಿಗಿಂತ ಹಿಂದಿನ ನಾಟಕಕಾರರು** (೧೧-೧೨ನೆಯ ಶತಮಾನ)

ಜೈನಕವಿ ಹೇಮಚಂದ್ರನ (ಕ್ರಿ.ಶ. ೧೦೮೮-೧೧೭೨) ಶಿಷ್ಯನಾದ (ಒಂದು ಕಣ್ಣಿನ) ರಾಮಚಂದ್ರಸೂರಿಯು ಒಂದುನೂರು ಗ್ರಂಥಗಳನ್ನು ರಚಿಸಿದನೆಂದು ಹೇಳುತ್ತಾರೆ. ಅವುಗಳಲ್ಲಿ ಬಹುಪಾಲು ಈಗ ಉಪಲಬ್ಧವಾಗಿಲ್ಲ. ಈತನು ರಚಿಸಿರುವ **ಕೌಮುದೀಮಿತ್ರಾನಂದವು** ಹತ್ತು ಅಂಕಗಳ ಪ್ರಕರಣ. ಮಿತ್ರಾನಂದನೆಂಬ ಒಬ್ಬ ವಣಿಕ್ಪುತ್ರನು ಇದರ ನಾಯಕ. ಕೌಮುದಿ ಎಂಬುವಳು ನಾಯಿಕೆ. ಇವರ ಅನುರಾಗವನ್ನು ನಿರೂಪಿಸಿರುವ ಈ ಪ್ರಕರಣದಲ್ಲಿ ಮಾಯಾಮಂತ್ರಪ್ರಸಂಗಗಳು ಹೇರಳವಾಗಿವೆ. ಇದೇ ಕವಿಯ ಏಳು ಅಂಕಗಳ **ನಳವಿಲಾಸ**ದಲ್ಲಿ ನಳದಮಂತಿಯರ ಕಥೆಯೇ ಪ್ರಸಕ್ತವಾಗಿದ್ದರೂ ಸ್ವಯಂವರಕ್ಕೂ ಮುಂಚೆಯೇ ಪ್ರೇಮಿಗಳಿಬ್ಬರೂ ಗಾಂಧರ್ವ ವಿವಾಹ ಮಾಡಿಕೊಂಡಿದ್ದಂತೆ ಹೇಳಿದೆ. ಈತನ ಆರು ಅಂಕಗಳ **ಸತ್ಯಹರಿಶ್ಚಂದ್ರ** ನಾಟಕವೂ **ನಿರ್ಭಯಭೀಮ**ವೆಂಬ ವ್ಯಾಯೋಗವೂ ಶ್ಲಾಘ್ಯವಾದ ರಚನೆಗಳು.

ಕುಲಶೇಖರವರ್ಮನೆಂಬ (೧೧ನೆಯ ಶತಮಾನ) ಕೇರಳರಾಜನ **ಸುಭದ್ರಾಧನಂಜಯ** ಮತ್ತು ತಪತೀಸ್ವಯಂವರ ನಾಟಕಗಳಲ್ಲಿ ವಸ್ತುರಚನೆಯೂ ಸಂವಿಧಾನ ಕೌಶಲವೂ ಪ್ರಶಂಸಾರ್ಹವಾಗಿವೆ.

ಹನ್ನೆರಡನೆಯ ಶತಮಾನದ ಶಂಖಧರಕವಿರಾಜನ **ಲಟಕಮೇಲಕ ಪ್ರಹಸನವೂ** ಕನೋಜಿನ ಜಯದೇವನ ಮನ್ನಣೆ ಪಡೆದಿದ್ದ ಕಾಂಚನ

ಪಂಡಿತನು ವಿರಾಟಗೋಗ್ರಹಣವಸ್ತುವಿನಮೇಲೆ ರಚಿಸಿದ **ಧನಂಜಯ ವಿಜಯವ್ಯಾಯೋಗವೂ** ಇಲ್ಲಿ ಉಲ್ಲೇಖನೀಯವಾದುವು. ಅಜಮೀರಿನಲ್ಲಿ ಶಿಲೆಗಳ ಮೇಲೆ ಬರೆಯಲ್ಪಟ್ಟಿರುವ ಇದೇ ಶತಮಾನದ ಎರಡು ರೂಪಕಗಳು ಸಿಕ್ಕಿವೆ. ಅವುಗಳಲ್ಲಿ ಒಂದು ಚಹಮಾನವಂಶದ ವಿಗ್ರಹರಾಜದೇವ ವಿಶಾಲ ದೇವನಿಂದ ರಚಿತವಾದ **ಹರಕೇಳೀನಾಟಕ**; ಶಿವನಿಗೂ ಅರ್ಜುನನಿಗೂ ನಡೆದ ಯುದ್ಧ ಇದರ ವಸ್ತು. ಇನ್ನೊಂದು ಸೋಮದೇವರಚಿತವಾದ **ಲಲಿತ ವಿಗ್ರಹನಾಟಕ**; ಕವಿಯ ಪೋಷಕನಾದ ವಿಗ್ರಹರಾಜದೇವ ಮತ್ತು ದೇಶಲಾ ದೇವಿ—ಈ ಇಬ್ಬರ ಅನುರಾಗವೇ ಇದರ ವಸ್ತು.

ಕಾಲಂಜರದ ಪರಮರ್ದಿದೇವನ (ಕ್ರಿ.ಶ. ೧೧೬೮-೧೨೦೩) ಮಂತ್ರಿ **ವತ್ಸರಾಜನಿಂದ** ಈ ಆರು ರೂಪಕಗಳು ರಚಿತವಾಗಿವೆ—(೧) ಕಿರಾತಾರ್ಜುನೀಯ **ವ್ಯಾಯೋಗ** (೨) ಹಾಸ್ಯಚೂಡಾಮಣಿ **ಪ್ರಹಸನ** (೩) ತ್ರಿಪುರದಾಹ **ಡಿಮ** (೪) ಸಮುದ್ರಮಥನ **ಸಮವಕಾರ** (೫) ಕರ್ಪೂರಚರಿತ **ಭಾಣ** (೬) ರುಕ್ಮಿಣೀಹರಣ **ಈಹಾಮೃಗ**.

## **ಜಯದೇವ** (ಕ್ರಿ.ಶ. ೧೩ನೆಯ ಶತಮಾನ)

ಜಯದೇವನು ವಿದರ್ಭದೇಶದವನೆಂದೂ ವಂಗದೇಶದವನೆಂದೂ ಭಿನ್ನಾಭಿಪ್ರಾಯವಿದೆ. ಇವನ ತಂದೆ ಮಹಾದೇವ; ತಾಯಿ ಸುಮಿತ್ರೆ. ಈತನು ಕೌಂಡಿನ್ಯಗೋತ್ರದ ಬ್ರಾಹ್ಮಣ; ವಿದರ್ಭದೇಶದಲ್ಲಿ ಹರಮಿಶ್ರನ ಶಿಷ್ಯನಾಗಿದ್ದವನು. ಇವನಿಗೆ 'ಪೀಯೂಷವರ್ಷ'ನೆಂಬ ಬಿರುದಿದ್ದುದಾಗಿ ತಿಳಿದು ಬರುತ್ತದೆ.

ಜಯದೇವನು ರಚಿಸಿರುವ ಪ್ರಸನ್ನರಾಘವವು ಏಳು ಅಂಕಗಳ ನಾಟಕ. ಇದರ ವಸ್ತುವೂ ರಾಮಾಯಣದ ಕಥೆ. ಇದು ಮುರಾರಿಯ ಅನರ್ಘರಾಘವದ ಅನುಕರಣವೆಂದು ಧಾರಾಳವಾಗಿ ಹೇಳಬಹುದು. ಇದೇ ಕಾರಣದಿಂದ ಈತನಿಗೆ ಆಂಧ್ರದೇಶದಲ್ಲಿ 'ಬಿಲ್ಲಮುರಾರಿ' ಎಂಬ ಅಡ್ಡ ಹೆಸರಿದೆ. ಈ ನಾಟಕದ ಪ್ರಕಾರ ಬಾಣಾಸುರ ರಾವಣ ಈ ಇಬ್ಬರೂ ಸೀತೆಯನ್ನು ವರಿಸಲು ಯತ್ನಿಸುತ್ತಾರೆ. ಗಂಗೆ ಯಮುನೆ ಸರಯೂ ಗೋದಾವರೀ ನದೀದೇವತೆಗಳು ಸಂಭಾಷಿಸುವ ದೃಶ್ಯ ಹೃದಯಂಗಮವಾಗಿದೆ. ನಾಟಕದಲ್ಲಿ ತುಂಬ ದೀರ್ಘ



ವಾದ ಸಮಾಸಗಳೂ ವರ್ಣನೆಗಳೂ ಹೇರಳವಾಗಿವೆ. ಭಾವಗೀತಾತ್ಮಕ ಶ್ಲೋಕಗಳು ತುಂಬ ಚೆನ್ನಾಗಿವೆ.

ಈ ಕವಿಯು ೧೩ನೆಯ ಶತಮಾನದ ಆದಿಯಲ್ಲಿದ್ದವನು. ಈತನೂ ವಿದ್ವತ್ಕವಿಗಳ ಗುಂಪಿಗೇ ಸೇರಿದವನು; ನ್ಯಾಯಶಾಸ್ತ್ರದಲ್ಲೂ ಅಲಂಕಾರ ಶಾಸ್ತ್ರದಲ್ಲೂ ನಿಷ್ಣಾತನಾಗಿದ್ದವನು. ಈತನ (ಅಲಂಕಾರಶಾಸ್ತ್ರಕ್ಕೆ ಸೇರಿದ) **ಚಂದ್ರಾಲೋಕವು** ಸರಳವಾದ ಲಕ್ಷಣ ಗ್ರಂಥ.

## ೧೩ನೆಯ ಶತಮಾನದ ಇತರ ನಾಟಕಕಾರರು

ಕೀರ್ತಿಕೌಮುದಿಯಲ್ಲಿ ಪ್ರಶಂಸಿಸಲ್ಪಟ್ಟ ಸದುಕ್ತಿಕರ್ಣಾಮೃತದಲ್ಲಿ ಉದಾಹೃತನಾಗಿರುವ ಪ್ರಹ್ಲಾದನನು ಅರ್ಜುನನ ಗೋಗ್ರಹಣವಿಜಯವನ್ನು ವಸ್ತುವಾಗಿ ಉಳ್ಳ ಒಂದು ಅಂಕದ **ಪಾರ್ಥಪರಾಕ್ರಮವೆಂಬ** ವ್ಯಾಯೋಗವನ್ನು ರಚಿಸಿದ್ದಾನೆ. ಬಾಲಸರಸ್ವತಿ ಎಂಬ ಬಿರುದುಳ್ಳವನೂ ಪರಮಾರರಾಜ ಅರ್ಜುನವರ್ಮನ ಗುರುವೂ ಆಗಿದ್ದ ಮದನನು **ಪಾರಿಜಾತ ಮಂಜರೀ** ಅಥವಾ **ವಿಜಯಶ್ರೀ** ಎಂಬ ನಾಟಿಕೆಯನ್ನು ರಚಿಸಿದ್ದಾನೆ. ಇದರಲ್ಲಿ ಅರ್ಜುನವರ್ಮ ಮತ್ತು ಪಾರಿಜಾತಮಂಜರಿಯರ ಪ್ರೇಮದ ಕಥೆಯು ನಿರೂಪಿತವಾಗಿದೆ. ಕ್ರಿ.ಶ. ೧೨೧೮ರಲ್ಲಿ ಶಿಲೆಯ ಮೇಲೆ ಬರೆದಿರುವ ಈ ನಾಟಿಕೆಯ ಎರಡು ಅಂಕಗಳು ಧಾರಾನಗರದಲ್ಲಿ ಸಿಕ್ಕಿವೆ. ಐದು ಅಂಕಗಳ **ಹಮ್ಮೀರಮದಮರ್ದನವು** ಶ್ವೇತಾಂಬರ ಜೈನನಾದ ಜಯಸಿಂಹಸೂರಿಯಿಂದ ಬರೆಯಲ್ಪಟ್ಟಿತು. ಗುಜರಾತಿನಮೇಲೆ ಧಾಳಿಮಾಡಿದ ಮಹಮ್ಮದೀಯ ಅರಸನಾದ ಹಮ್ಮೀರನನ್ನು ವೀರಧವಳನು ಸೋಲಿಸಿದ ವೃತ್ತಾಂತವೇ ಇದರ ವಸ್ತು. ಈ ನಾಟಕದ ಕಾಲ ಕ್ರಿ.ಶ. ೧೨೩೦. ಮೋಕ್ಷಾದಿತ್ಯನ **ಭೀಮ ಪರಾಕ್ರಮವು** ಪಾರ್ಥಪರಾಕ್ರಮದ ಮಾದರಿಯಲ್ಲಿ ರಚಿತವಾದ ವ್ಯಾಯೋಗ. ಸುಭಟನ ಒಂದೇ ಒಂದು ಅಂಕದ **ದೂತಾಂಗದವು** ಅಂಗದನು ರಾಮನ ದೂತನಾಗಿ ರಾವಣನಲ್ಲಿಗೆ ಹೋಗಿದ್ದುದನ್ನು ನಿರೂಪಿಸುತ್ತದೆ. ಇದನ್ನು ಛಾಯಾನಾಟಕವೆನ್ನುತ್ತಾರೆ. ಪ್ರದ್ಯುಮ್ನನಿಗೂ ಪ್ರಭಾವತಿಗೂ ನಡೆದ ವಿವಾಹದ ಪ್ರಸಂಗವು ಕೇರಳದ ರವಿವರ್ಮರಾಜನು ರಚಿಸಿದ **ಪ್ರದ್ಯುಮ್ನಾಭ್ಯುದಯನಾಟಕದ** ವಸ್ತು.

## ೧೪ನೆಯ ಶತಮಾನದ ನಾಟಕಕಾರರು

ವಾರಂಗಲ್ಲಿನ ಪ್ರತಾಪರುದ್ರದೇವ ರಾಜನ (ಕ್ರಿ.ಶ. ೧೨೬೮-೧೩೨೮) ಆಸ್ಥಾನಕವಿಯಾಗಿದ್ದ ವಿದ್ಯಾನಾಥನೆಂದು ಕರೆಯಲ್ಪಡುತ್ತಿದ್ದ ಅಗಸ್ತ್ಯನು **ಪ್ರತಾಪರುದ್ರಕಲ್ಯಾಣ**ವೆಂಬ ಐದು ಅಂಕಗಳ ನಾಟಕವನ್ನು ಲಕ್ಷಣಬದ್ಧವಾಗಿ ರಚಿಸಿ ತನ್ನ ಅಲಂಕಾರಗ್ರಂಥವಾದ ಪ್ರತಾಪರುದ್ರಯಶೋಭೂಷಣದಲ್ಲಿ ಸೇರಿಸಿದ್ದಾನೆ. ರಾಜಾ ಪ್ರತಾಪರುದ್ರನು ಸಿಂಹಾಸನಾಧಿಕಾರಿಯಾದ ಪ್ರಸಂಗವೇ ಈ ನಾಟಕದ ವಸ್ತು. ವಿದ್ಯಾನಾಥನ ಅನುಬಂಧಿಯಾದ ನರಸಿಂಹಕವಿಯು ಕಾದಂಬರಿಯ ಕಥೆಯನ್ನು ಅಧಿಕರಿಸಿ ಎಂಟು ಅಂಕಗಳ **ಕಾದಂಬರೀಕಲ್ಯಾಣ** ಎಂಬ ನಾಟಕವನ್ನು ರಚಿಸಿದ್ದಾನೆ. ಅವನ ಸೋದರನೂ ಕವಯಿತ್ರಿಯಾದ ಗಂಗಾದೇವಿಯ ಗುರುವೂ ಆದ ವಿಶ್ವನಾಥನು **ಸೌಗಂಧಿಕಾಹರಣ**ವೆಂಬ ವ್ಯಾಯೋಗವನ್ನು ರಚಿಸಿದ್ದಾನೆ. ನಂದನವನದಿಂದ ಸೌಗಂಧಿಕಾ ಪುಷ್ಪವನ್ನು ಭೀಮನು ತಂದುದು ಇದರ ವಸ್ತು. ಕವಿಶೇಖರನೆಂಬ ಬಿರುದಿನಿಂದ ಪ್ರಸಿದ್ಧನಾಗಿದ್ದ ಜ್ಯೋತೀಶ್ವರನು **ಕಂದರ್ಪಸಂಭವ**ವೆಂಬ ನಾಟಕವನ್ನೂ **ವೀರಭದ್ರವಿಜೃಂಭಣ**ವೆಂಬ ಡಿಮವನ್ನೂ ರಚಿಸಿದ್ದಾನೆ. ಭಾಸ್ಕರನ ಒಂದೇ ಅಂಕದ **ಉನ್ಮತ್ತರಾಘವ** ಎಂಬ 'ಅಂಕ'ವೂ ವಿಜಯನಗರದ ಎರಡನೇ ಹರಿಹರನ ಮಗನಾದ ವಿರೂಪಾಕ್ಷನಿಂದ ರಚಿತವಾದ 'ಪ್ರೇಕ್ಷಣಕ'ವೂ ಇದೇ ಶತಮಾನಕ್ಕೆ ಸೇರಿದುವು.

## ೧೫ನೆಯ ಶತಮಾನದ ನಾಟಕಕಾರರು

೧೫ನೆಯ ಶತಮಾನದ ಆದಿಯಲ್ಲಿ '**ಪಾರ್ವತೀಪರಿಣಯ**'ವೆಂಬ ನಾಟಕವನ್ನು ವಾಮನಭಟ್ಟಬಾಣನು ರಚಿಸಿದನು. ಈ ನಾಟಕವನ್ನು ಕಾದಂಬರೀಕರ್ತೃವಾದ ಬಾಣನೇ ರಚಿಸಿದ್ದನೆಂಬ ಭಾವನೆ ಇತ್ತೀಚಿನವರೆಗೂ ಇತ್ತು. ಈ ನಾಟಕದಲ್ಲಿ ಶಿವಪಾರ್ವತಿಯರ ವಿವಾಹವು ಹೃದಯಂಗಮವಾಗಿ ನಿರೂಪಿತವಾಗಿದೆ. ಕಾಳಿದಾಸನ ಕುಮಾರಸಂಭವದಿಂದ ಸ್ಫೂರ್ತಿ ಪಡೆದು ಕವಿಯು ಈ ನಾಟಕವನ್ನು ರಚಿಸಿದ್ದಾನೆಂಬುದು ಸ್ಪಷ್ಟವಾಗಿದೆ. **ಕನಕಲೇಖಾಕಲ್ಯಾಣ** ಎಂಬ ನಾಟಿಕೆಯೂ ಶೃಂಗಾರಭೂಷಣವೂ ಇದೇ ಕವಿಯ ಕೃತಿಗಳು. ಕಾಶೀಪತಿ ಕವಿರಾಜನ **ಮುಕುಂದಾನಂದ**ವೆಂಬ ಭಾಣವೂ ಇದೇ ಕಾಲದಲ್ಲಿ ರಚಿತವಾದದ್ದು. **ಭರ್ತೃಹರಿನಿರ್ವೇದ**ವೆಂಬ ಐದು ಅಂಕಗಳ



ನಾಟಕವು ಹರಿಹರವಿರಚಿತವಾದುದು. ಭರ್ತೃಹರಿಯು ತನ್ನ ಹೆಂಡತಿಯ ಪತಿಪ್ರೇಮವನ್ನು ಪರೀಕ್ಷಿಸುವುದಕ್ಕಾಗಿ ತಾನು ಸತ್ತುಹೋದಂತೆ ಸುಳ್ಳುಸುದ್ದಿಯನ್ನು ಹರಡಿದಾಗ ಅವಳು ಅದನ್ನು ನಿಜವೆಂದು ನಂಬಿ ದುಃಖ ತಾಳಲಾರದೆ ಪ್ರಾಣ ನೀಗಿದಂತೆಯೂ ಇದರಿಂದ ಭರ್ತೃಹರಿಯು ನಿರ್ವಿಣ್ಣನಾಗಿ ಪ್ರಾಪಂಚಿಕ ಬಂಧಗಳನ್ನೆಲ್ಲಾ ಕಡಿದುಹಾಕಿ ವಿರಕ್ತನಾದನೆಂದೂ ಇದರಲ್ಲಿ ನಿರೂಪಿತವಾಗಿದೆ. ಕೃಷ್ಣಮಹಿಮೆಯನ್ನು ಎತ್ತಿ ಹಿಡಿಯುವ **ವಿದಗ್ಧಮಾಧವ** ಮತ್ತು **ಲಲಿತಮಾಧವ** ಎಂಬ ಹತ್ತು ಅಂಕಗಳ ಎರಡು ನಾಟಕಗಳನ್ನೂ **ದಾನಕೇಳಿಕೌಮುದೀ** ಎಂಬ ಭಾಣವನ್ನೂ ಕೃಷ್ಣಚೈತನ್ಯರ ಶಿಷ್ಯನಾದ ರೂಪಗೋಸ್ವಾಮಿಯು ರಚಿಸಿದನು

## ೧೬ನೆಯ ಶತಮಾನದ ನಾಟಕಕಾರರು

೧೬ನೆಯ ಶತಮಾನದ ಆದಿಯಲ್ಲಿ ಶ್ರೀಮದಹೋಬಿಲ ಮಠದ ಏಳನೆಯ ಆಸ್ಥಾನಪತಿಗಳಾದ ಮೂರನೆಯ ಶಠಕೋಪಯತಿಗಳು ಐದು ಅಂಕಗಳ **ವಾಸಂತಿಕಾಪರಿಣಯ**ವೆಂಬ ನಾಟಕವನ್ನು ರಚಿಸಿದರು ಅದರಲ್ಲಿ ಅಹೋಬಿಲಕ್ಷೇತ್ರದ ನರಸಿಂಹಸ್ವಾಮಿಯನ್ನು ವನದೇವಿಯಾದ ವಾಸಂತಿಕೆಯು ವಿವಾಹವಾದ ಪ್ರಸಂಗ ರಮ್ಯವಾಗಿ ಚಿತ್ರಿತವಾಗಿದೆ. ಈ ನಾಟಕವು ಕಾವ್ಯಗುಣಗಳಿಂದ ಕೂಡಿ ಶ್ಲಾಘ್ಯವಾಗಿದೆ.

ಅಕ್ಬರನ ಸಮಕಾಲೀನನಾದ ಶೇಷಕೃಷ್ಣನ ಆರು ಅಂಕಗಳ **ಕಂಸವಧ ನಾಟಕ**ವೂ ಇಲ್ಲಿ ಉಲ್ಲೇಖನೀಯ. ಅಪ್ಪಯ್ಯ ದೀಕ್ಷಿತರ ಸಮಕಾಲೀನರಾದ ಶ್ರೀನಿವಾಸದೀಕ್ಷಿತ 'ರತ್ನಖೇಟ'ರ ಅನೇಕ ಕಾವ್ಯನಾಟಕಗಳಲ್ಲಿ ನಳದಮಯಂತಿಯರ ವಿವಾಹವಿಷಯಿಕವಾದ **ಭೈಮೀಪರಿಣಯನಾಟಕ** ಪ್ರಸಿದ್ಧವಾಗಿದೆ. ಈ ರತ್ನಖೇಟರ ಮಗನಾದ ರಾಜಚೂಡಾಮಣಿದೀಕ್ಷಿತರು **ಆನಂದರಾಘವ** ಎಂಬ ನಾಟಕವನ್ನೂ **ಕಮಲಿನೀಕಲಹಂಸ** ಎಂಬ ನಾಟಿಕೆಯನ್ನೂ **ಶೃಂಗಾರಸರ್ವಸ್ವ** ಎಂಬ ಭಾಣವನ್ನೂ ರಚಿಸಿದ್ದಾರೆ. ನೇಪಾಳದ ಜಗಜ್ಜ್ಯೋತಿರ್ಮಯನ **ಹರಗೌರೀವಿವಾಹ**, ವೇದಾಂತವಾಗೀಶಭಟ್ಟಾಚಾರ್ಯನ ಎರಡು ಅಂಕಗಳ **ಭೋಜರಾಜಸಚ್ಚರಿತ**, ಗುರುರಾಮನ ಐದು ಅಂಕಗಳ **ರತ್ನೇಶ್ವರಪ್ರಸಾದನ**, **ಸುಭದ್ರಾಧನಂಜಯ** ಮತ್ತು **ಮದನಗೋಪಾಲವಿಲಾಸ** ಭಾಣಗಳು ಈ ಶತಮಾನದ ಪ್ರಸಿದ್ಧರೂಪಕಗಳು.

## ೧೭, ೧೮, ೧೯ ನೆಯ ಶತಮಾನದ ನಾಟಕಕಾರರು

ಕಲ್ಲಿಕೋಟೆಯ ಜಾಮೋರಿನ್ನನ ಆಶ್ರಯದಲ್ಲಿ ಉದ್ದಂಡಿ ಅಥವ ಉದ್ದಂಡ ನಾಥನು ಮಲ್ಲಿಕಾಮಾರುತವೆಂಬ ನಾಟಕವನ್ನು ೧೭ನೆಯ ಶತಮಾನದ ಮಧ್ಯಭಾಗದಲ್ಲಿ ರಚಿಸಿದನು. ಉದ್ದಂಡೀ, ದಂಡೀ ಎಂಬ ನಾಮಸಾಮ್ಯದ ಆಧಾರದ ಮೇಲೆ ಈ ನಾಟಕ ರಚಿಸಿದವನು ದಂಡಿಯೇ ಎಂಬ ಭಾವನೆಗೆ ಇತ್ತೀಚಿನವರೆಗೂ ಅವಕಾಶವಾಗಿತ್ತು. ಈ ನಾಟಕವು ಭವಭೂತಿಯ ಮಾಲತೀ ಮಾಧವವನ್ನೇ ಎಲ್ಲ ರೀತಿಯಲ್ಲೂ ಹೋಲುತ್ತದೆ. ನೀಲಕಂಠದೀಕ್ಷಿತನ ನಳಚರಿತನಾಟಕ, ವೆಂಕಟಾಧ್ವರಿಯ ಪ್ರದ್ಯುಮ್ನಾಭ್ಯುದಯ, ರಾಮಭದ್ರ ದೀಕ್ಷಿತನ (ಮೌಲಿಕ ಸಂವಿಧಾನಗಳಿಂದ ಕೂಡಿದ) ಜಾನಕೀಪರಿಣಯ ಮತ್ತು ಶೃಂಗಾರತಿಲಕ, ನಲ್ಲಕವಿಯ ಶೃಂಗಾರಸರ್ವಸ್ವ ಮತ್ತು ಸುಭದ್ರಾಪರಿಣಯ, ಕವಿತಾರ್ಕಿಕನ ಕನಕರತ್ನಾಕರ ಪ್ರಹಸನ, ಶಾಮರಾಜ ದೀಕ್ಷಿತನ ಶ್ರೀದಾಮ ಚರಿತ ಮತ್ತು ಧೂರ್ತನರ್ತಕ ಪ್ರಹಸನ, ಮಹಾದೇವನ (ಹತ್ತು ಅಂಕಗಳ) ಅದ್ಭುತದರ್ಪಣ—ಇವು ಈ ಶತಮಾನದ ಕೆಲವು ಪ್ರಸಿದ್ಧ ನಾಟಕಗಳು.

೧೮, ೧೯ ನೆಯ ಶತಮಾನಗಳಲ್ಲಿ ದಕ್ಷಿಣದೇಶದ ಅನೇಕ ಕವಿಗಳು ಪ್ರಾಕೃತದಲ್ಲೂ ಸಂಸ್ಕೃತದಲ್ಲೂ ನಾಟಕಗಳನ್ನು ಹೇರಳವಾಗಿ ರಚಿಸಿದ್ದಾರೆ. ಅವುಗಳಲ್ಲಿ ಬಹುಪಾಲು ಇನ್ನೂ ಮುದ್ರಿತವಾಗಿಲ್ಲ. ಈ ಕಾಲದ ನಾಟಕಗಳಲ್ಲಿ ಆಂಗ್ಲಸಾಹಿತ್ಯದ ಮತ್ತು ದೇಶಭಾಷಾ ಕೃತಿಗಳ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು. ತಿರುವಾಂಕೂರಿನ ಸುಂದರರಾಜಕವಿಯ ಸ್ನುಷಾವಿಜಯ ದಂತಹ ಸಾಮಾಜಿಕ ನಾಟಕಗಳೂ ಈ ಕಾಲದಲ್ಲಿ ರಚಿತವಾಗಲಾರಂಭಿಸಿದುವು.

# ಅಧ್ಯಾಯ ೧೪

## ಧಾರ್ಮಿಕಾದಿ ಇತರ ನಾಟಕಗಳು

ಕೃಷ್ಣಯಜುರ್ವೇದದಲ್ಲೂ ಉಪನಿಷತ್ತುಗಳಲ್ಲೂ ಬರುವ ವಾಕ್, ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ವಾದವಿವಾದಗಳ ಆಧಾರದಮೇಲೆ ಹೇಳುವುದಾದರೆ ಅಮೂರ್ತ ಭಾವನೆಗಳನ್ನೂ ತತ್ತ್ವಗಳನ್ನೂ ಅರ್ಥಾಂತರ ದ್ಯೋತಕ ದೇವಮನುಷ್ಯಾದಿ ಶರೀರಿಗಳಂತೆ ನಿರೂಪಿಸುವ ವಾಡಿಕೆ ವೇದಗಳ ಕಾಲದಿಂದಲೂ ಬಂದಿದೆ. ಮೊದಲಿನಿಂದಲೂ ಭಾರತೀಯ ಕವಿಗಳು ಗುಣ ಗಳನ್ನೂ ಅಚಿದ್ವಸ್ತುಗಳನ್ನೂ ಚೇತನಗಳೆಂದೇ ಭಾವಿಸಿ ವ್ಯವಹರಿಸುತ್ತಾ ಬಂದಿದ್ದಾರೆ. ವನಶ್ರೀ, ರಾಜ್ಯಶ್ರೀ ಮುಂತಾದುವು ಒಂದೊಂದು ಬಗೆಯ 'ಲಕ್ಷ್ಮೀ' ಎಂಬ ಭಾವನೆ ನಮ್ಮಲ್ಲಿ ಬೇರೂರಿಬಿಟ್ಟಿದೆ. ಪಂಚತಂತ್ರಾದಿ ಕಥೆಗಳಲ್ಲಂತು ಪಶುಪಕ್ಷಿಗಳೂ ಕೂಡ ಮನುಷ್ಯರಂತೆಯೇ ನಡೆದುಕೊಳ್ಳುವು ದಲ್ಲದೆ 'ನೀತಿ'ಯನ್ನು ಬೋಧಿಸುತ್ತವೆ. ಇದೇ ಸಂಪ್ರದಾಯ ಬೆಳೆದು [1]ನಾಟಕ ಗಳಲ್ಲೂ ಮುಂದುವರಿಯಿತೆನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಧಾರ್ಮಿಕ ತತ್ತ್ವಗಳ ನಿರೂಪಣೆಗಾಗಿಯೇ ನಾಟಕಗಳಲ್ಲಿ ಈ ಸಂಪ್ರದಾಯವು ಬಳಕೆಗೆ ಬಂದಿರುವುದು ಅವಶ್ಯ ಗಮನಾರ್ಹ.

## ಅಶ್ವಘೋಷಕೃತ ನಾಟಕ (?)

ಮೇಲೆ ಹೇಳಿದ ಬಗೆಯ ಧಾರ್ಮಿಕ ನಾಟಕಗಳಲ್ಲಿ ನಮಗೆ ಉಪಲಬ್ಧ ವಾಗಿರುವ ಅತ್ಯಂತ ಪ್ರಾಚೀನ ಕೃತಿಯೆಂದರೆ ಅಶ್ವಘೋಷನ ಅಜ್ಞಾತ ಶೀರ್ಷಿಕೆಯ ರೂಪಕ. ಇದು ಅವನ ಶಾರಿಪುತ್ರಪ್ರಕರಣದೊಡನೆ (ಪುಟ ೧೯೭ ನೋಡಿ) ಟರ್ಫಾನಿನಲ್ಲಿ ಲೂಡರ್ಸ್ ಪಂಡಿತನಿಗೆ ಒಂದು ಓಲೆ ಪುಸ್ತಕದಲ್ಲಿ ದೊರೆತದ್ದು. ಇದೂ ಅಸಮಗ್ರ ಸ್ಥಿತಿಯಲ್ಲಿದೆ. ಇದರಲ್ಲಿ ಬುದ್ಧಿ, ಕೀರ್ತಿ, ಧೃತಿಗಳು ಪಾತ್ರಗಳು. ನಾಟಕದ ಕೊನೆಯಲ್ಲಿ ಬುದ್ಧನೇ ರಂಗದ ಮೇಲೆ ಬರುತ್ತಾನೆ. ನಾಟಕದ ಏಕದೇಶಮಾತ್ರ ಸಿಕ್ಕಿರುವುದರಿಂದ ಇದರಲ್ಲಿ ಪ್ರತಿಪಾದಿತವಾಗಿರುವ ತತ್ತ್ವಸ್ವರೂಪವು ಸ್ಪಷ್ಟವಾಗಿಲ್ಲ. ಇದರ ಪಾತ್ರಗಳೆಲ್ಲಾ ಸಂಸ್ಕೃತದಲ್ಲೇ ಸಂಭಾಷಿಸುವುದು ಗಮನಾರ್ಹ.

---

[1] ನ ತಚ್ಛಾಸ್ತ್ರಂ ನ ಸಾ ವಿದ್ಯಾ ನ ತಚ್ಛಿಲ್ಪಂ ನ ತಾಃ ಕಲಾಃ ।
ನಾಸೌ ಯೋಗೋ ನ ತದ್‌ಜ್ಞಾನಂ ನಾಟಕೇ ಯನ್ನ ದೃಶ್ಯತೇ ॥

### ಕೃಷ್ಣಮಿಶ್ರನ **ಪ್ರಬೋಧಚಂದ್ರೋದಯ** (ಕ್ರಿ. ಶ. ೧೨ನೆಯ ಶತಮಾನ)

ಅಶ್ವಘೋಷನ ಧಾರ್ಮಿಕ ನಾಟಕ ರಚಿತವಾದಮೇಲೆ ಸುಮಾರು ೧೦ ಶತಮಾನಗಳ ಕಾಲದಲ್ಲಿ ರಚಿತವಾಗಿರಬಹುದಾದ ಈ ರೀತಿಯ ನಾಟಕಗಳು ಯಾವುವೂ ಈವರೆಗೆ ನಮಗೆ ಸಿಕ್ಕಿಲ್ಲದಿರುವುದು ಶೋಚನೀಯವಾದ ವಸ್ತುಸ್ಥಿತಿ. ಆದ್ದರಿಂದ ಸಮಗ್ರವಾಗಿ ನಮ್ಮ ಮುಂದಿರುವ ಕೃಷ್ಣಮಿಶ್ರನ 'ಪ್ರಬೋಧಚಂದ್ರೋದಯ'ವೇ ಈ ಬಗೆಯ ಧಾರ್ಮಿಕ ನಾಟಕಗಳಿಗೆ ಆದಿಯೆಂಬ ಭಾವನೆ ಕೆಲವರಲ್ಲಿ ಈಗಲೂ ಇದೆ.

ಕೃಷ್ಣಮಿಶ್ರನು ಅದ್ವೈತವೇದಾಂತಸಂಪ್ರದಾಯದ ಯತಿಯೆಂದೂ ವೇದಾಂತದಲ್ಲಿ ಅಭಿರುಚಿಯಿಲ್ಲದ ಕಾವ್ಯಪ್ರಿಯನಾದ ತನ್ನ ಶಿಷ್ಯನೊಬ್ಬನಿಗೆ ವೇದಾಂತತತ್ವಗಳನ್ನು ತಿಳಿಸಲು ಈ ಪ್ರಬೋಧಚಂದ್ರೋದಯವನ್ನು ರಚಿಸಿದನೆಂದೂ ಹೇಳುವುದುಂಟು. ಇದು ವಿಷ್ಣುತತ್ವದ ಅದ್ವೈತರೂಪವನ್ನು ನಿರೂಪಿಸುವ ಆರು ಅಂಕಗಳ ನಾಟಕ. ಮೋಕ್ಷಸಂಪಾದನೆಗೆ ವಿಷ್ಣುಭಕ್ತಿಯ ಆವಶ್ಯಕತೆಯನ್ನು ಇದು ಪ್ರತಿಪಾದಿಸುತ್ತದೆ. ಮನಸ್ಸು, ಅಹಂಕಾರ, ಮುಂತಾದುವೇ ಈ ನಾಟಕದ ಪಾತ್ರಗಳು. ವಿವೇಕಕ್ಕೂ ಮಹಾಮೋಹಕ್ಕೂ ಯುದ್ಧವೇರ್ಪಟ್ಟು 'ಪ್ರಬೋಧ' ರೂಪೀ ಚಂದ್ರನ ಉದಯದಿಂದ ನಾಟಕ ಉಪಸಂಹೃತವಾಗುತ್ತದೆ.

ಅನೇಕ ವೈಶಿಷ್ಟ್ಯಗಳನ್ನೊಳಗೊಂಡು ರಚಿತವಾಗಿರುವ ಈ ನಾಟಕದ ರಸ 'ಶಾಂತ.' ನಾಟಕಗಳಲ್ಲಿ ಶಾಂತರಸಕ್ಕೆ ಪ್ರಾಧಾನ್ಯವಿರುವುದು ಲಕ್ಷಣಕಾರರ ದೃಷ್ಟಿಯಲ್ಲಿ ಸಾಧ್ಯವಿಲ್ಲ. ಅಸಾಧ್ಯವಾದುದನ್ನು ಸಾಧ್ಯವಾಗಿ ಮಾಡಲು ಕೃಷ್ಣಮಿಶ್ರನು ಮಾಡಿರುವ ಪ್ರಯತ್ನ ಫಲಕಾರಿಯಾಗಿರುವುದು ಗಮನಾರ್ಹ. ಈ ನಾಟಕವು ಪ್ರದರ್ಶನಕ್ಕೆ ಯೋಗ್ಯವೇ ಎಂಬಂಶ ವಿಚಾರಾರ್ಹವಾದುದು; 'ಮಾನಸಿಕವೀಕ್ಷಣ' ಕ್ಕೆ ಯೋಗ್ಯವೆನ್ನುವುದರಲ್ಲಿ ಸಂಶಯವಿಲ್ಲ. ಈ ನಾಟಕ ರಚಿತವಾದಮೇಲೆ ಪಂಡಿತಪಾಮರರ ಮೆಚ್ಚುಗೆಯನ್ನು ಗಳಿಸಿ ಮುಂದಿನ ಪೀಳಿಗೆಯ ಕವಿಗಳಿಗೆ ಇದು ಆದರ್ಶವಾಯಿತೆಂಬುದು ಸ್ಪಷ್ಟವಾಗಿದೆ. ನೀತಿ ಮತ್ತು ಧರ್ಮಗಳನ್ನು ಬೋಧಿಸುವ ಉದ್ದೇಶಕ್ಕಾಗಿಯೇ ನಾಟಕಗಳನ್ನು ಬಳಸುವ ಪದ್ಧತಿ ಅಲ್ಲಿಂದೀಚೆಗೆ ರೂಢಿಗೆ ಬಂದಿತೆನ್ನಬಹುದು.

ಕೃಷ್ಣಮಿಶ್ರನ ನಾಟಕರಚನಾಸಾಮರ್ಥ್ಯವು ಅಸಾಧಾರಣವಾದುದು. ಇಂತಹ ಧಾರ್ಮಿಕನಾಟಕದ 'ಅಮೂರ್ತ' ಭಾವನಾತ್ಮಕ ಪಾತ್ರಗಳ



ಚಿತ್ರಣವೂ ಸ್ಪಷ್ಟವಾಗಿದೆ. ನಾಟಕ ಪರಿಣಾಮಕಾರಿಯಾಗಿದೆ. ಇದರ ರಸ 'ಶಾಂತ'ವೇ ಆಗಿದ್ದರೂ ಕಾಮ-ರತಿಯರ ಸಂಭಾಷಣೆ, ಕಾಪಾಲಿಕರ ಕೂಟ ಮುಂತಾದ ದೃಶ್ಯಗಳಿಂದ ಉದ್ಬುದ್ಧವಾಗುವ ಶೃಂಗಾರವೂ ಹಾಸ್ಯವೂ ವಿವೃತವಾಗಿದ್ದು ಪ್ರೇಕ್ಷಕರ ಮನಸ್ಸಿನಲ್ಲಿ ಶಾಂತರಸಕ್ಕಿಂತ ಹೆಚ್ಚು ಸ್ಥಾಯಿಯಾಗಿ ನಿಲ್ಲುವಂತಿವೆ.

### ಯಶಃಪಾಲನ **ಮೋಹಪರಾಜಯ** (ಕ್ರಿ ಶ. ೧೩ನೆಯ ಶತಮಾನ)

ಹದಿಮೂರನೆಯ ಶತಮಾನದ ಯಶಃಪಾಲ ವಿರಚಿತವಾದ ಮೋಹಪರಾಜಯವು ಜೈನ ಧಾರ್ಮಿಕನಾಟಕದ ಉತ್ತಮ ಉದಾಹರಣೆ. ಐದು ಅಂಕಗಳ ಈ ನಾಟಕದಲ್ಲಿ ಗುಜರಾತಿನ ಚಾಳುಕ್ಯರಾಜ ಕುಮಾರಪಾಲನು ಜೈನಮತಕ್ಕೆ ಸೇರಿದುದು ನಿರೂಪಿತವಾಗಿದೆ. ಈ ನಾಟಕದಲ್ಲಿ ರಾಜ, ಹೇಮಚಂದ್ರ ಮತ್ತು ವಿದೂಷಕ— ಈ ಮೂವರನ್ನು ಬಿಟ್ಟರೆ ಉಳಿದೆಲ್ಲ ಪಾತ್ರಗಳೂ ಮಾನವಶರೀರಿಗಳಾದ ಗುಣಗಳೇ. ಮಹಾವೀರಜಯಂತಿಯ ಸಂದರ್ಭದಲ್ಲಿ ಮಾರವಾಡದ ರಾಜಧಾನಿಯಾಗಿದ್ದ (?) ತಾರಾಪದ್ರದಲ್ಲಿ ಇದರ ಮೊಟ್ಟಮೊದಲನೆಯ ಪ್ರದರ್ಶನವಾದಂತೆ ತಿಳಿದುಬರುತ್ತದೆ.

### ವೇದಾಂತದೇಶಿಕರ **ಸಂಕಲ್ಪಸೂರ್ಯೋದಯ** (ಕ್ರಿ ಶ. ೧೪ನೆಯ ಶತಮಾನ)

ವೇದಾಂತದೇಶಿಕರೆಂದೇ ಸಾಮಾನ್ಯವಾಗಿ ಕರೆಯಲ್ಪಡುವ ವೆಂಕಟನಾಥಾಚಾರ್ಯರ ಸಂಕಲ್ಪಸೂರ್ಯೋದಯವು ಒಟ್ಟಿನಲ್ಲಿ ಪ್ರಬೋಧಚಂದ್ರೋದಯದಂತೆಯೇ ಇದೆ. ಭಗವದ್ರಾಮಾನುಜರಿಂದೀಚೆಗೆ ವಿಶಿಷ್ಟಾದ್ವೈತವೇದಾಂತದಲ್ಲಿ ಅತ್ಯಂತ ಪ್ರಸಿದ್ಧ ಆಚಾರ್ಯರಾದ ವೇದಾಂತದೇಶಿಕರ ಕಾವ್ಯಾದಿಗಳ ವಿಚಾರವಾಗಿ ಹಿಂದೆಯೇ (ಪುಟ ೯೫, ೧೩೭, ೧೫೧) ಹೇಳಿದ್ದೇವೆ. ಅಸಾಧಾರಣ ಪಾಂಡಿತ್ಯವುಳ್ಳ ಈ ಕವಿವರೇಣ್ಯರು ವಿಶಿಷ್ಟಾದ್ವೈತತತ್ವಗಳನ್ನು ನಿರೂಪಿಸುವುದಕ್ಕಾಗಿ ಈ ನಾಟಕವನ್ನು ಹತ್ತು ಅಂಕಗಳಲ್ಲಿ ರಚಿಸಿದರು. ಇದರಲ್ಲಿ ಭಗವಂತನ ಸಂಕಲ್ಪವೆಂಬ ಸೂರ್ಯನ ಉದಯದಿಂದ ಜನ್ಮಮರಣಗಳೆಂಬ ಅಂಧಕಾರವು ತೊಲಗಿ ಜೀವಾತ್ಮನು ಮುಕ್ತನಾಗುವುದಾಗಿ ಪ್ರತಿಪಾದಿತವಾಗಿದೆ. ಶಾಂತರಸವೇ ಈ ನಾಟಕದಲ್ಲೂ ಪ್ರಧಾನವಾದುದು. ನಾಟಕವು ಓದಲು ರಮ್ಯವಾಗಿದೆ; ಆದರೆ ಪ್ರದರ್ಶನಕ್ಕೆ ಅತಿ ದೀರ್ಘ. ಪ್ರಸ್ತಾವನೆಯೇ ತುಂಬ ಉದ್ದವಾಗಿದೆ. ನಾಟಕದಲ್ಲಿ ಕಾವ್ಯಗುಣಗಳೆಲ್ಲ ತುಂಬಿ ತುಳುಕಾಡುತ್ತಿವೆ.

### ಇತರ ಧಾರ್ಮಿಕ ನಾಟಕಗಳು[2]

ಸೃಷ್ಟಿಯಿಂದ ಹಿಡಿದು ಪ್ರಳಯದವರೆಗಿನ ಜೀವಾತ್ಮನ ಚರಿತವನ್ನು ೧೬ನೆಯ ಶತಮಾನದ ಗೋಕುಲನಾಥನು ತನ್ನ **ಅಮೃತೋದಯ** ನಾಟಕದಲ್ಲಿ ನಿರೂಪಿಸಿದ್ದಾನೆ. ಇದೇ ಕಾಲದ ಪರಮಾನಂದದಾಸನೆಂಬ ಕವಿ ಕರ್ಣಪೂರನು **ಚೈತನ್ಯಚಂದ್ರೋದಯ** ನಾಟಕ ರಚಿಸಿ ಅದರಲ್ಲಿ ಭಕ್ತಿ ಪಂಥದ ಪ್ರಚಾರದಲ್ಲಿ ಶ್ರೀಕೃಷ್ಣಚೈತನ್ಯರು ಗಳಿಸಿದ ಸಿದ್ಧಿಯನ್ನು ಪ್ರತಿಪಾದಿಸಿದ್ದಾನೆ. ಜೀವಾತ್ಮನಿಗೂ ಅಧ್ಯಾತ್ಮವಿದ್ಯೆಗೂ ಪರಿಣಯವಾದಂತೆ **ವಿದ್ಯಾಪರಿಣಯ** ನಾಟಕದಲ್ಲೂ ಜೀವಾತ್ಮನು ಮುಕ್ತನಾಗುವುದನ್ನು **ಜೀವಾನಂದನ** ನಾಟಕದಲ್ಲೂ ೧೮ನೆಯ ಶತಮಾನದ ಆನಂದರಾಯಮುಖಿಯು ಶೈವಸಿದ್ಧಾಂತದಂತೆ ಪ್ರತಿಪಾದಿಸಿದ್ದಾನೆ. ಆಯುರ್ವೇದಶಾಸ್ತ್ರ ವಿಚಾರಗಳು ಮಧ್ಯೆ ಮಧ್ಯೆ ಸೇರಿಕೊಂಡಿರುವುದು ಜೀವಾನಂದನ ನಾಟಕದ ವೈಶಿಷ್ಟ್ಯ. ಇವುಗಳು 'ವೇದಕವಿ' ಯಿಂದ ರಚಿತವಾಗಿ, ಆಗ ತಂಜಾವೂರಿನ ಷಹಜಿಗೆ ಮಂತ್ರಿಯಾಗಿದ್ದ ಆನಂದರಾಯಮುಖಿಯ ಹೆಸರಿನಲ್ಲಿ ಪ್ರಕಟಿತವಾದುವೆಂದೂ ಹೇಳುತ್ತಾರೆ.

### ಛಾಯಾ ನಾಟಕಗಳು

'ಛಾಯಾನಾಟಕ'ಗಳ ವಿಚಾರವಾಗಿ ನಾಟ್ಯಶಾಸ್ತ್ರ ಮುಂತಾದ ಪ್ರಾಚೀನ ಲಕ್ಷಣ ಗ್ರಂಥಗಳಲ್ಲಿ ಏನೂ ಹೇಳಿಲ್ಲ. ರಟ್ಟಿನ ಬೊಂಬೆಗಳನ್ನು ಸೂತ್ರಗಳಿಂದ ಚಲಿಸುವಂತೆ ಕಟ್ಟಿ ತೆರೆಯ ಮೇಲೆ ಆಡಿಸುತ್ತಾ ಸಂಭಾಷಣೆಯನ್ನು ತೆರೆಯ ಮರೆಯಿಂದ ಹೇಳಿ ಪ್ರೇಕ್ಷಕರ ಮನರಂಜನೆಯಾಗುವಂತೆ ಮಾಡುವುದು ಈ ಛಾಯಾ ನಾಟಕಗಳ ಉದ್ದೇಶವೆನ್ನಬಹುದು. ಕ್ರಿ ಶ. ಸುಮಾರು ೧೦೦೦ ದಲ್ಲಿ ಅಭಿನವಗುಪ್ತನು ರಚಿಸಿದ ಅಭಿನವಭಾರತಿಯೇ ಛಾಯಾ ನಾಟಕಗಳ ಉಲ್ಲೇಖವಿರುವ ಅತ್ಯಂತ ಪ್ರಾಚೀನ ಗ್ರಂಥ.

ಮೇಘಪ್ರಭಾಚಾರ್ಯನ **ಧರ್ಮಾಭ್ಯುದಯವು** ಅದರಪ್ರಸ್ತಾವನೆಯಲ್ಲೇ ಹೇಳಿರುವಂತೆ ಒಂದು 'ಛಾಯಾನಾಟ್ಯಪ್ರಬಂಧ'. ಈ ಕವಿಯ ಕಾಲ ತಿಳಿದುಬಂದಿಲ್ಲ. ಸುಭಟನ **ದೂತಾಂಗದವು** ಕುಮಾರಪಾಲರಾಜನ ಸ್ಮೃತಿಗಾಗಿ ಕ್ರಿ ಶ. ೧೨೪೩ ರಲ್ಲಿ ತ್ರಿಭುವನಪಾಲನ ಆಸ್ಥಾನದಲ್ಲಿ ಛಾಯಾನಾಟಕವಾಗಿ ಪ್ರದರ್ಶಿತವಾಗಿತ್ತು. ಸುಭದ್ರಾಪರಿಣಯ, ರಾಮಾಭ್ಯುದಯ, ಪಾಂಡವಾಭ್ಯುದಯ—ಈ ಮೂರೂ ೧೫ನೆಯ ಶತಮಾನದ ವ್ಯಾಸ ಶ್ರೀರಾಮ ಮಿಶ್ರ ರಚಿತ ಛಾಯಾನಾಟಕಗಳು.

[2] ಸಂಪೂರ್ಣ ವಿವರಗಳಿಗೆ J O R, Madras, vol. x, Part II ನೋಡಿ.

# ಅಧ್ಯಾಯ ೧೫

## ಸಾಹಿತ್ಯಶಾಸ್ತ್ರ

ಶಬ್ದ-ಅರ್ಥಗಳ ಸಾಹಿತ್ಯದಿಂದ ರೂಪಿತವಾಗಿರುವ 'ಸಾಹಿತ್ಯಶಾಸ್ತ್ರ'ಕ್ಕೆ 'ಅಲಂಕಾರ'ಶಾಸ್ತ್ರವೆಂದೂ ಹೆಸರಿದೆ. ಈ ಶಾಸ್ತ್ರದ ವ್ಯಾಪ್ತಿಯಲ್ಲಿ ಕಾವ್ಯಲಕ್ಷಣ, ಗುಣದೋಷಗಳು, ಶಬ್ದವೃತ್ತಿಗಳು, ಕಾವ್ಯಪ್ರಭೇದಗಳು, ರೀತಿ, ರಸ, ನಾಟಕ ಲಕ್ಷಣ, ಅಲಂಕಾರಗಳು—ಇವೆಲ್ಲಾ ಸೇರಿ, ಕಾವ್ಯಾಸ್ವಾದಕ್ಕೆ, ಕಾವ್ಯಾಲೋಚನೆಗೆ ಈ ಶಾಸ್ತ್ರ ತುಂಬ ಸಹಕಾರಿಯೆನ್ನಲಡ್ಡಿಯಿಲ್ಲ.

ಈ ಶಾಸ್ತ್ರದ ಪರಂಪರೆಯನ್ನು ವಿಮರ್ಶಾತ್ಮಕವಾಗಿ ಅವಲೋಕಿಸಿದರೆ ಇದರ ಎರಡು ಮುಖಗಳನ್ನು ಕಾಣಬಹುದು—ಒಂದು ಪ್ರತಿಭಾಪ್ರಧಾನವಾದುದು ಮತ್ತೊಂದು ಭಾವಪ್ರಧಾನವಾದುದು. 'ಪ್ರತಿಭೆ'ಯನ್ನೂ 'ಭಾವ'ವನ್ನೂ ವಿಶ್ಲೇಷಿಸುವುದು ಅಸಾಧ್ಯವೇ ಆದರೂ ಈ ಶಾಸ್ತ್ರದ ಬೆಳವಣಿಗೆಯನ್ನು ಮನಗಾಣಬೇಕಾದರೆ ತಾತ್ವಿಕವಾಗಿಯಾದರೂ ಈ ಪ್ರಭೇದವನ್ನು ಗುರುತಿಸುವುದರಿಂದ ಪ್ರಯೋಜನವಿದೆ. 'ಪ್ರತಿಭಾ'ಪ್ರಧಾನವಾದುದನ್ನು 'ಅಲಂಕಾರ' ಸಂಪ್ರದಾಯವೆಂದೂ 'ಭಾವ'ಪ್ರಧಾನವಾದುದನ್ನು 'ರಸ'ಸಂಪ್ರದಾಯವೆಂದೂ ಹೇಳಬಹುದು. ಇವೆರಡು ಸಂಪ್ರದಾಯಗಳೂ ಕಾವ್ಯದಲ್ಲಿ 'ರಸ' 'ಅಲಂಕಾರ'ಗಳೆರಡರ ಆವಶ್ಯಕತೆಯನ್ನೂ ಒಪ್ಪುತ್ತವಾದರೂ, ಯಾವುದು ಪ್ರಧಾನ ಎಂಬಲ್ಲಿ ಭಿನ್ನಾಭಿಪ್ರಾಯಗಳಿಂದ ಕೂಡಿವೆ.

ಕಾವ್ಯವೆಂದರೇನು? ಒಳ್ಳೆಯ ಕಾವ್ಯದ ಲಕ್ಷಣಗಳೇನು?—ಈ ವಿಚಾರಗಳ ಪರಿಶೀಲನೆ ನಮ್ಮ ಪ್ರಾಚೀನರಿಂದ ಕೂಲಂಕಷವಾಗಿ ನಡೆದು ಆರು ವಿಭಿನ್ನಸಂಪ್ರದಾಯಗಳು ಮೂಡಿಬಂದಿವೆ—[1](೧) ರೀತಿ (ಮತ್ತು ಗುಣ) (೨) ಅಲಂಕಾರ (೩) ವಕ್ರೋಕ್ತಿ (೪) ರಸ (ಮತ್ತು ಅನುಮಾನ) (೫) ಧ್ವನಿ (೬) ಔಚಿತ್ಯ.

**ರೀತಿಸಂಪ್ರದಾಯ**—ಪದಗಳ ವಿಶಿಷ್ಟರಚನೆಗೆ **ರೀತಿ** ಎನ್ನುತ್ತೇವೆ. ರಚನೆಯಲ್ಲಿ ವೈಶಿಷ್ಟ್ಯವು ಗುಣಗಳಿಂದ ಉತ್ಪನ್ನವಾಗುತ್ತದೆ. ಆದ್ದರಿಂದ ರೀತಿಯು ಗುಣವನ್ನವಲಂಬಿಸಿರುತ್ತದೆ. ದಂಡಿಯು ಈ 'ರೀತಿ' ಸಂಪ್ರದಾಯ

[1] ರೀತಿ, ಅಲಂಕಾರ, ವಕ್ರೋಕ್ತಿ ಸಂಪ್ರದಾಯಗಳು ಪ್ರತಿಭಾಪ್ರಧಾನ ಪರಂಪರೆಗೂ ರಸ, ಧ್ವನಿ, ಅನುಮಾನ ಸಂಪ್ರದಾಯಗಳು ಭಾವಪ್ರಧಾನಪರಂಪರೆಗೂ ಸಂಬಂಧಿಸಿದುವು.

ವನ್ನು ಮೊಟ್ಟಮೊದಲು ಸ್ಪಷ್ಟವಾಗಿ ಪ್ರತಿಪಾದಿಸಿದ ಆಚಾರ್ಯ. ಭರತನ ನಾಟ್ಯಶಾಸ್ತ್ರದಲ್ಲಿ ಹತ್ತು ಕಾವ್ಯಗುಣಗಳ ಉಲ್ಲೇಖವಿದೆ (ಅವುಗಳ ಹೆಸರು— ಶ್ಲೇಷ, ಪ್ರಸಾದ, ಸಮತಾ, ಸಮಾಧಿ, ಮಾಧುರ್ಯ, ಓಜಸ್, ಸುಕುಮಾರತಾ, ಅರ್ಥವ್ಯಕ್ತಿ, ಉದಾರತಾ, ಕಾಂತಿ). ದಂಡಿಯೂ ಇವುಗಳನ್ನು ವೈದರ್ಭೀರೀತಿಯ ಪ್ರಾಣವೆಂದು ತಿಳಿಸಿದ್ದಾನೆ. ವೈದರ್ಭೀ, ಗೌಡೀ ಮತ್ತು ಪಾಂಚಾಲೀ ಎಂಬ ಮೂರು ರೀತಿಗಳು ಮಾತ್ರ ಮೊದಲು ಅಂಗೀಕೃತವಾಗಿದ್ದು ಕಾಲಕ್ರಮದಲ್ಲಿ ಲಾಟೀ, ಅವಂತೀ, ಮಾಗಧೀ ಎಂಬ ಇನ್ನೂ ಮೂರು ರೀತಿಗಳು ಸೇರಿ ಒಟ್ಟು ಆರು ರೀತಿಗಳೆಂದು ಪರಿಗಣಿತವಾದುವು. ಒಂದೊಂದು ರೀತಿಯೂ ಒಂದೊಂದು ದೇಶದಲ್ಲಿ ಪ್ರಚಲಿತವಾಗಿತ್ತೆಂಬುದು ಅವುಗಳ ಹೆಸರಿನಿಂದಲೇ ಸೂಚಿತವಾಗುತ್ತದೆ. ದಂಡಿಯ ಅನುಯಾಯಿಯಾದ ವಾಮನನು ರೀತಿಯನ್ನು ಕಾವ್ಯದ ಆತ್ಮಾ ಎಂದು ಹೇಳಿದನು. ಕಾವ್ಯಕ್ಕೆ 'ಆತ್ಮಾ' ಒಂದುಂಟೆಂದು ಭಾವಿಸಿದ ಲಾಕ್ಷಣಿಕರಲ್ಲಿ ವಾಮನನೇ ಮೊಟ್ಟ ಮೊದಲನೆಯವನು. ಈತನು ಗುಣಗಳಿಗೂ ಅಲಂಕಾರಗಳಿಗೂ ಇರುವ ಭೇದವನ್ನು ಸ್ಪಷ್ಟಪಡಿಸಿದ್ದಾನೆ.—'ಕಾವ್ಯಶೋಭಾಯಾಃ ಕರ್ತಾರೋ ಧರ್ಮಾಃ ಗುಣಾಃ। ತದತಿಶಯಹೇತವೋಽಲಂಕಾರಾಃ॥'

**'ಗುಣ'ಸಂಪ್ರದಾಯ**—ಶಬ್ದಗುಣಗಳು ಅರ್ಥಗುಣಗಳು ಎಂದು ಗುಣಗಳಲ್ಲಿ ಎರಡು ಪ್ರಭೇದಗಳನ್ನು ಗುರುತಿಸಬಹುದು. ಶಬ್ದಗುಣಗಳು ಕಾವ್ಯಶರೀರಕ್ಕೂ ಅರ್ಥಗುಣಗಳು ರೀತಿಗೂ ಸಂಬಂಧಿಸಿರುತ್ತವೆ. ಮೊದಲು ಪ್ರಸಾದ, ಮಾಧುರ್ಯ, ಓಜಸ್ ಎಂಬ ಮೂರೇ ಗುಣಗಳು ಅಂಗೀಕೃತವಾಗಿದ್ದುವು. ವಾಮನನು ಹತ್ತು ಗುಣಗಳನ್ನು ಪರಿಗಣಿಸಿದನು. ಅವನ ಕಾಲದಿಂದೀಚೆಗೆ ಶಬ್ದಗುಣಗಳು ಅಲಂಕಾರಗಳಲ್ಲೂ ಅರ್ಥಗುಣಗಳು ರಸದಲ್ಲೂ ಐಕ್ಯವಾಗಿಬಿಟ್ಟುವು.

**'ಅಲಂಕಾರ' ಸಂಪ್ರದಾಯ**—ಶಬ್ದಾಲಂಕಾರ ಮತ್ತು ಅರ್ಥಾಲಂಕಾರಗಳೇ ಕಾವ್ಯದ 'ಜೀವಾತ್ಮ'ವೆಂದು ಅಲಂಕಾರ ಸಂಪ್ರದಾಯದಲ್ಲಿ[2] ನಿರೂಪಿಸಲಾಗುತ್ತಿದೆ. ಭರತನೂ ಕೂಡ ಅಲಂಕಾರಗಳನ್ನು ಅಂಗೀಕರಿಸಿದ್ದರೂ

2 ಔಷ್ಣ್ಯವಿಲ್ಲದ್ದನ್ನು ಅಗ್ನಿಯೆನ್ನುವುದು ಹೇಗೆ ಹಾಸ್ಯಾಸ್ಪದವೋ ಹಾಗೆಯೇ ಅಲಂಕಾರಹೀನವಾದುದನ್ನು ಕಾವ್ಯವೆನ್ನುವುದೂ ಅಸ್ವಾಭಾವಿಕ—ಎಂಬುದು ಇವರ ಮತ.

ಅಂಗೀಕರೋತಿ ಯಃ ಕಾವ್ಯಂ ಶಬ್ದಾರ್ಥಾವನಲಂಕೃತೀ।
ಅಸೌ ನ ಮನ್ಯತೇ ಕಸ್ಮಾದನುಷ್ಣಮನಲಂ ಕೃತೀ॥ ಚಂದ್ರಾಲೋಕ ೧-೮.



ಭಾಮಹನನ್ನೇ ಈ ಸಂಪ್ರದಾಯದ ಪ್ರವರ್ತಕನೆಂದು ಪರಿಗಣಿಸಲಾಗಿದೆ. ಭರತನ ನಾಟ್ಯಶಾಸ್ತ್ರದಲ್ಲಿ ಅನುಪ್ರಾಸ, ಉಪಮಾ, ರೂಪಕ, ದೀಪಕ ಎಂಬ ನಾಲ್ಕೇ ಅಲಂಕಾರಗಳ ನಿರ್ದೇಶವಿದ್ದು, ಅನಂತರಕಾಲದಲ್ಲಿ ೩೨ ಅಲಂಕಾರಗಳು ನಿರೂಪಿತವಾಗಿ, ಈಚೆಗೆ ಅಲಂಕಾರಗಳ ಸಂಖ್ಯೆ ೨೦೦ಕ್ಕೆ ಏರಿದೆ.

ಅಲಂಕಾರ ಸಂಪ್ರದಾಯದ ಆಲಂಕಾರಿಕರಿಗೆ ರಸದ ತತ್ವ ತಿಳಿದಿಲ್ಲವೆಂದಲ್ಲ. ರಸವನ್ನು ಅವರು ಅಲಂಕಾರದ ಒಂದು ಪ್ರಭೇದವನ್ನಾಗಿ ಮಾತ್ರ ಪರಿಗಣಿಸುತ್ತಾರೆ. ರಸ ಮತ್ತು ಭಾವಗಳನ್ನು ಭಾಮಹನು ರಸವತ್. ಪ್ರೇಯ, ಊರ್ಜಸ್ವೀ ಮತ್ತು ಸಮಾಹಿತ ಎಂಬ ಅಲಂಕಾರಗಳೊಳಗೆ ಸೇರಿಸಿಬಿಟ್ಟಿದ್ದಾನೆ. ದಂಡಿಯೂ ಎಂಟು ರಸಗಳನ್ನೂ ಅವುಗಳ ಸ್ಥಾಯಿಭಾವಗಳನ್ನೂ ನಿರ್ದೇಶಿಸಿದ್ದಾನಲ್ಲದೆ ರಸವದಲಂಕಾರವೂ ಅವನಿಗೆ ಸಮ್ಮತ. ಪ್ರತೀಯಮಾನಾರ್ಥವನ್ನೂ ಈ ಸಂಪ್ರದಾಯದವರು ಸಮಾಸೋಕ್ತಿ, ಆಕ್ಷೇಪ ಮುಂತಾದ ಅಲಂಕಾರಗಳಲ್ಲಿ ಅಂತರ್ಗತವಾಗಿ ಭಾವಿಸುತ್ತಾರೆ.

**ವಕ್ರೋಕ್ತಿ ಸಂಪ್ರದಾಯ**—'ವಕ್ರೋಕ್ತಿ' ಎಂದರೆ ಸರ್ವಸಾಧಾರಣ ಜನರ ಮಾತಿಗಿಂತ ಬೇರೆಯಾದ ಅಲೌಕಿಕ ಚಮತ್ಕಾರದಿಂದ ಕೂಡಿದ ಮಾತು ಎಂಬು ಸಾಮಾನ್ಯವಾಗಿ ಹೇಳಬಹುದು. ಇದಕ್ಕೇ 'ವೈದಗ್ಧ್ಯಭಂಗೀಭಣಿತಿ' ಯೆಂದು ಹೇಳುವುದು.[3] ಕುಂತಕನು ಈ ವಕ್ರೋಕ್ತಿಯನ್ನೇ ಕಾವ್ಯದ ಜೀವಿತವೆಂದು ಸಿದ್ಧಾಂತಮಾಡಿದನು. ಅತಿಶಯೋಕ್ತಿ ಅಲಂಕಾರವನ್ನು ವಕ್ರೋಕ್ತಿ ಎಂಬ ಹೆಸರಿನಿಂದ ಮೊದಲು ಕರೆದು ಅದೇ ಎಲ್ಲ ಅಲಂಕಾರಗಳಿಗೂ ಜೀವನಾಧಾಯಕವೆಂದು ಹೇಳಿದವನು ಭಾಮಹ. ಆದ್ದರಿಂದ ಕುಂತಕನು ಒಂದು ಬಗೆಯಾಗಿ ಭಾಮಹನಿಗೆ ಋಣಿಯೆಂದೇ ಹೇಳಬೇಕು. ಇತ್ತೀಚಿನ ಆಲಂಕಾರಿಕರು ವಕ್ರೋಕ್ತಿಯನ್ನು ಒಂದು ಅಲಂಕಾರವೆಂದೇ ಭಾವಿಸುತ್ತಾರೆ.

**ರಸಸಂಪ್ರದಾಯ**—ಭರತಮುನಿಗಳೇ ರಸಸಂಪ್ರದಾಯದ ಸರ್ವಪ್ರಥಮ ಆಚಾರ್ಯರೆಂದು ಪರಿಗಣಿತರಾಗಿದ್ದಾರೆ. ನಾಟ್ಯಶಾಸ್ತ್ರದ ಆರನೆಯ ಮತ್ತು ಏಳನೆಯ ಅಧ್ಯಾಯಗಳಲ್ಲಿ ರಸ ಮತ್ತು ಭಾವಗಳು ನಿರೂಪಿತವಾಗಿವೆ. 'ವಿಭಾವಾನುಭಾವವ್ಯಭಿಚಾರಿಸಂಯೋಗಾತ್ ರಸನಿಷ್ಪತ್ತಿಃ'—ಎಂಬುದು ಈ

3 ವಕ್ರೋಕ್ತಿರೇವ ವೈದಗ್ಧ್ಯಭಂಗೀಭಣಿತಿರುಚ್ಯತೇ।
ವಕ್ರೋಕ್ತಿಃ ಪ್ರಸಿದ್ಧಾಭಿಧಾನವ್ಯತಿರೇಕಿಣೀ ವಿಚಿತ್ರೈವಾಭಿಧಾ;
ವೈದಗ್ಧ್ಯಂ ಕವಿಕೌಶಲಂ, ತಸ್ಯ ಭಂಗೀ ವಿಚ್ಛಿತ್ತಿಃ।—ವಕ್ರೋಕ್ತಿ ಜೀವಿತ ೧೧-೧

ಸಂಪ್ರದಾಯದ ಮೂಲಸೂತ್ರ. ನಾಟ್ಯಶಾಸ್ತ್ರದ ವ್ಯಾಖ್ಯಾನಕಾರರು ಈ ಸೂತ್ರಕ್ಕೆ ನಾಲ್ಕು ಬಗೆಯಾಗಿ ವ್ಯಾಖ್ಯಾನಮಾಡಿದ್ದಾರೆ. ಇವರಲ್ಲಿ ಭಟ್ಟ ಲೊಲ್ಲಟನು ಉತ್ಪತ್ತಿವಾದಿ. ರಸವು ವಿಭಾವಾದಿಗಳ ಕಾರ್ಯ ಎಂಬುದು ಅವನ ಮತ. ಶಂಕುಕನು ವಿಭಾವಾದಿಗಳ ಮೂಲಕ ರಸದ ಅನುಮಿತಿಯುಂಟಾಗುತ್ತದೆಂದು ಭಾವಿಸಿ ರಸಕ್ಕೂ ವಿಭಾವಾದಿಗಳಿಗೂ ಅನುಮಾಪ್ಯ ಅನುಮಾಪಕ ಸಂಬಂಧವನ್ನು ನಿರೂಪಿಸುತ್ತಾನೆ. ಭಟ್ಟನಾಯಕನು 'ಭುಕ್ತಿವಾದಿ'. ಅವನ ಅಭಿಪ್ರಾಯದಲ್ಲಿ ರಸಕ್ಕೂ ವಿಭಾವಾದಿಗಳಿಗೂ ಇರುವುದು ಭೋಜ್ಯ ಭೋಜಕ ಸಂಬಂಧ. ಇದನ್ನು ಸಿದ್ಧಪಡಿಸುವುದಕ್ಕಾಗಿ ಈತನು ಭಾವಕತ್ವ ಮತ್ತು ಭೋಜಕತ್ವವೆಂಬ ಎರಡು ವ್ಯಾಪಾರಗಳನ್ನು ಅಂಗೀಕರಿಸಿದ್ದಾನೆ. ಅಭಿನವಗುಪ್ತನದು 'ವ್ಯಕ್ತಿವಾದ.' ಈ ವಾದದ ಪ್ರಕಾರ ಎಲ್ಲ ಸ್ಥಾಯೀಭಾವವೂ ವಾಸನಾರೂಪದಿಂದ ಸಹೃದಯರ ಹೃದಯದಲ್ಲಿರುತ್ತದೆ. ಸುಪ್ತವಾಗಿರುವ ಈ ಸ್ಥಾಯೀಭಾವಗಳು ವಿಭಾವಾದಿಗಳ ಮೂಲಕ ಅಭಿವ್ಯಕ್ತವಾಗಿ ಆನಂದಮಯವಾದ ರಸದ ರೂಪವನ್ನು ತಾಳುತ್ತವೆ.

ಭರತನು ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಎಂಬ ಎಂಟು ರಸಗಳನ್ನು ಮಾತ್ರ ಉಲ್ಲೇಖಿಸಿದ್ದಾನೆ. ಅಭಿನಯಪ್ರಧಾನವಾದ ನಾಟಕದಲ್ಲಿ ಶಾಂತರಸ ಭರತನಿಗೂ ಧನಂಜಯನಿಗೂ ಸಮ್ಮತವಲ್ಲ. ಕಾವ್ಯಾದಿಗಳಲ್ಲಿ ಶಾಂತರಸವಿರಬಹುದು. ಮೇಲೆ ಹೇಳಿದ ರಸಗಳಿಗೆ ಕ್ರಮವಾಗಿ ರತಿ, ಹಾಸ, ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸಾ, ವಿಸ್ಮಯ, ಮತ್ತು ಶಮಗಳು ಸ್ಥಾಯೀಭಾವಗಳು. ಭರತನ 'ರಸತತ್ವ'ವು ಮುಂದೆ ಭೋಜ, ಧನಂಜಯ, ಉದ್ಭಟ ಮುಂತಾದವರಿಂದ ವಿವರವಾಗಿ ಪ್ರತಿಪಾದಿತವಾಯಿತು.

ರಸಾನುಭವವು ಅನುಮಾನದಿಂದುಂಟಾಗುವುದೆಂಬ ಶಂಕುಕನ ವಾದವನ್ನು **ಅನುಮಾನ ಸಂಪ್ರದಾಯ**ವೆಂದು ಪ್ರತ್ಯೇಕವಾಗಿ ಪರಿಗಣಿಸುವುದುಂಟು.

**ಧ್ವನಿ ಸಂಪ್ರದಾಯ** — 'ಧ್ವನಿ'ಮತವು 'ರಸ'ಸಿದ್ಧಾಂತದ ವಿಸ್ತರಣವೆನ್ನಬಹುದು. ರಸವು ಎಂದಿಗೂ 'ವಾಚ್ಯ'ವಾಗಲಾರದು; 'ವ್ಯಂಗ್ಯ'ವಾಗಿಯೇ ಇರುವಂತಹುದು. ಆದ್ದರಿಂದ ಕಾವ್ಯದಲ್ಲಿ ವ್ಯಂಗ್ಯಕ್ಕೇ ಪ್ರಾಧಾನ್ಯವಿರಬೇಕು. ಅಭಿಧಾ, ಲಕ್ಷಣಾ, ವ್ಯಂಜನಾ ಎಂಬ ಮೂರು ಶಬ್ದವೃತ್ತಿಗಳಲ್ಲಿ ವ್ಯಂಜನೆ



ಯನ್ನೇ ಮೂಲವಾಗಿ ಉಳ್ಳದ್ದು 'ಧ್ವನಿ'. ಈ ಧ್ವನಿಯೇ ಕಾವ್ಯದ ಆತ್ಮಾ ಎಂಬುದು ಈ ಸಂಪ್ರದಾಯದವರ ಸಿದ್ಧಾಂತ. ಈ ಧ್ವನಿಯಲ್ಲಿ ಮೂರು ವಿಧಗಳಿವೆ—(೧) ವಸ್ತುಧ್ವನಿ (೨) ಅಲಂಕಾರಧ್ವನಿ (೩) ರಸಧ್ವನಿ. ಆನಂದವರ್ಧನಾಚಾರ್ಯರು ಈ ಸಿದ್ಧಾಂತದ ಪ್ರಧಾನಪ್ರವರ್ತಕರು. ಅಭಿನವಗುಪ್ತನು ರಸಧ್ವನಿಗೇ ಪ್ರಾಧಾನ್ಯವಿತ್ತನು. ಗುಣಗಳೂ ಅಲಂಕಾರಗಳೂ ರಸಕ್ಕೆ ಸಂಬಂಧಿಸಿದಂತೆಯೇ ಪರಿಗಣಿತವಾಗಬೇಕು. ಆದ್ದರಿಂದ ಕಾವ್ಯಗಳಲ್ಲೂ ಮೂರು ಬಗೆಯನ್ನು ಅಂಗೀಕರಿಸಿದಂತಾಯಿತು—(೧) ಧ್ವನಿಕಾವ್ಯ (೨) ಗುಣೀಭೂತವ್ಯಂಗ್ಯಕಾವ್ಯ (೩) ಚಿತ್ರಕಾವ್ಯ.

**ಔಚಿತ್ಯ ಸಂಪ್ರದಾಯ**—ರಸ, ಧ್ವನಿ ಮುಂತಾದ ಎಲ್ಲ ಕಾವ್ಯತತ್ವಗಳಿಗೂ 'ಔಚಿತ್ಯ'ವೇ ಮೂಲ. ಕ್ಷೇಮೇಂದ್ರನು ಎಲ್ಲ ಆಲಂಕಾರಿಕರಿಗೂ ಸಮ್ಮತವಾದ ಈ 'ಔಚಿತ್ಯಭಾವನೆ'ಯನ್ನು ತನ್ನ ಔಚಿತ್ಯವಿಚಾರಚರ್ಚೆಯಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದ್ದಾನೆ.

ಔಚಿತ್ಯಸ್ಯ ಚಮತ್ಕಾರಕಾರಿಣಶ್ಚಾರುಚರ್ವಣೇ ।
ರಸಜೀವಿತಭೂತಸ್ಯ ವಿಚಾರಂ ಕುರುತೇಽಧುನಾ ॥ ಕಾ. ೩
ಉಚಿತಂ ಪ್ರಾಹುರಾಚಾರ್ಯಾಃ ಸದೃಶಂ ಕಿಲ ಯಸ್ಯತತ್ ।
ಉಚಿತಸ್ಯ ಚ ಯೋ ಭಾವಃ ತದೌಚಿತ್ಯಂ ಪ್ರಚಕ್ಷತೇ ॥ ಕಾ. ೭.

ಈ ಔಚಿತ್ಯವು ಪದ, ಕಾವ್ಯ, ಅರ್ಥ, ರಸ, ಕಾರಕ, ಲಿಂಗ, ವಚನಾದಿ ಎಲ್ಲೆಡೆಯೂ ಇರತಕ್ಕದ್ದು [4] ಅನೌಚಿತ್ಯವೇ ರಸಭಂಗಕ್ಕೆ ಕಾರಣವೆಂದೂ ಔಚಿತ್ಯವೇ ರಸದ ಪರಮ ರಹಸ್ಯವೆಂದೂ ಆನಂದವರ್ಧನನೂ ಹೇಳಿದ್ದಾನೆ.

## ಅತ್ಯಂತ ಪ್ರಾಚೀನ ಆಲಂಕಾರಿಕರು

ಅಲಂಕಾರಶಾಸ್ತ್ರದ ಪ್ರವರ್ತಕರಲ್ಲಿ ನಂದಿಕೇಶ್ವರ, ನಾರದ ಮುಂತಾದವರನ್ನು ಪ್ರಾಚೀನರೆಂದು ಭಾವಿಸಲಾಗಿದೆ. ಆದರೆ ಅವರ ಗ್ರಂಥಗಳಾವುವೂ ನಮಗೆ ಸಿಕ್ಕಿಲ್ಲ. ಅಗ್ನಿಪುರಾಣದಲ್ಲಿ ಕಾವ್ಯನಾಟಕ ಲಕ್ಷಣಗಳು ಉಕ್ತವಾಗಿವೆ. ಆದರೆ ಈ ಪುರಾಣದ ಕಾಲ ಅನಿಶ್ಚಿತ. ಶಿಲಾಲಿ ಮತ್ತು ಕೃಶಾಶ್ವ ರಚಿತ ನಟ ಸೂತ್ರಗಳನ್ನು ಪಾಣಿನಿಯು ತನ್ನ ಅಷ್ಟಾಧ್ಯಾಯಿಯಲ್ಲಿ ಉಲ್ಲೇಖಿಸಿದ್ದಾನೆ.

---

[4] ಅನೌಚಿತ್ಯಾದೃತೇ ನಾನ್ಯತ್ ರಸಭಂಗಸ್ಯ ಕಾರಣಂ ।
ಔಚಿತ್ಯೋಪನಿಬಂಧಸ್ತು ರಸಸ್ಯೋಪನಿಷತ್ ಪರಾ ॥

ಈ ನಟಸೂತ್ರಗಳೂ ಸಿಕ್ಕಿಲ್ಲ. ಭಾಮಹನೂ ಅವನಿಗಿಂತ ಈಚಿನವರೂ ಉಲ್ಲೇಖಿಸಿರುವ ಮೇಧಾವಿರುದ್ರನ ಗ್ರಂಥವೂ ಉಪಲಬ್ಧವಾಗಿಲ್ಲ.

### ಭರತ (ಸುಮಾರು ಕ್ರಿ.ಪೂ. ೪೦೦)

ನಾಟ್ಯ ಮತ್ತು ಅಲಂಕಾರಗಳ ವಿಷಯದಲ್ಲಿ ರಚಿತವಾಗಿ ಈಗ ಉಪಲಬ್ಧವಾಗಿರುವ ಗ್ರಂಥಗಳಲ್ಲಿ ಭರತನ ನಾಟ್ಯಶಾಸ್ತ್ರವೇ ಅತ್ಯಂತ ಪ್ರಾಚೀನ. ಇದರ ಕಾಲ ಸರಿಯಾಗಿ ತಿಳಿಯದು. ಭರತನೇ ಅಪ್ಸರೆಯರಿಗೆ ನಾಟ್ಯವನ್ನು ಕಲಿಸಿದನೆಂದು ಕಾಳಿದಾಸನು ತನ್ನ ವಿಕ್ರಮೋರ್ವಶೀಯ ($II^{18}$)[5] ದಲ್ಲಿ ಹೇಳಿದ್ದಾನೆ. ನಾಟ್ಯಶಾಸ್ತ್ರದಲ್ಲಿ ನಾಟಕಲಕ್ಷಣ, ನಾಟ್ಯ, ಸಂಗೀತ, ಅಲಂಕಾರ, ಛಂದಸ್ಸು ಮುಂತಾದ ವಿಷಯಗಳನ್ನು ನಿರೂಪಿಸುವ ಒಟ್ಟು ೩೬ ಅಧ್ಯಾಯಗಳಿವೆ. ಇದನ್ನು ಭಾರತೀಯ ಲಲಿತಕಲೆಗಳ ವಿಶ್ವಕೋಶವೆನ್ನಬಹುದು. ಇದರಲ್ಲಿ ಒಟ್ಟು ೫೦೦೦ ಶ್ಲೋಕಗಳಿದ್ದು ಅವುಗಳಲ್ಲಿ ಅನುಷ್ಟುಪ್ ಶ್ಲೋಕಗಳೇ ಹೆಚ್ಚು. ೬, ೭ ಮತ್ತು ೨೮ನೆಯ ಅಧ್ಯಾಯಗಳ ಕೆಲಭಾಗಗಳು ಗದ್ಯಾತ್ಮಕವಾಗಿವೆ.

ಭರತನೇ ರಸಸಂಪ್ರದಾಯದ ಪ್ರಥಮ ಆಚಾರ್ಯ. ನಾಟಕದಲ್ಲಿ ರಸಕ್ಕೇ ಪ್ರಾಧಾನ್ಯವಿರಬೇಕೆಂಬುದು ಈತನ ಮತ. ರೂಪಕ, ಉಪಮಾ, ದೀಪಕ ಮತ್ತು ಯಮಕ — ಈ ನಾಲ್ಕೇ ಅಲಂಕಾರಗಳು ನಾಟ್ಯಶಾಸ್ತ್ರದಲ್ಲಿ ಉಕ್ತವಾಗಿರುವುವು. ಈ ಅಲಂಕಾರಗಳೂ ಹಿಂದೆ ಹೇಳಿದ ಹತ್ತು ಗುಣಗಳೂ ರಸಪ್ರತೀತಿಗೆ ಉಪಷ್ಟಂಭಕಗಳು. ಕಾವ್ಯದೋಷಗಳನ್ನೂ ಭರತನು ಉಲ್ಲೇಖಿಸಿದ್ದಾನೆ. ನಾಟಕದಲ್ಲಿ ಶಾಂತರಸಕ್ಕೆ ಅವಕಾಶವಿಲ್ಲವೆಂಬುದು ಭರತನ ಸಿದ್ಧಾಂತ. ಆದ್ದರಿಂದ ಉಳಿದ ಎಂಟು ರಸಗಳನ್ನೂ ಅವುಗಳ ಸ್ಥಾಯಿಭಾವಗಳನ್ನೂ (ಪುಟ ೨೪೬ ನೋಡಿ) ವಿಸ್ತಾರವಾಗಿ ನಿರೂಪಿಸಿದ್ದಾನೆ. ನಾಟ್ಯಶಾಸ್ತ್ರಕ್ಕೆ ಅನೇಕ ವ್ಯಾಖ್ಯಾನಗಳಿವೆ. ಅವುಗಳಲ್ಲಿ ಮಾತೃಗುಪ್ತ, ಹರ್ಷವರ್ಧನ, ಶಂಕುಕ, ಲೊಲ್ಲಟ, ಉದ್ಭಟ, ಭಟ್ಟನಾಯಕ, ಅಭಿನವಗುಪ್ತರ ವ್ಯಾಖ್ಯಾನಗಳು ಪ್ರಸಿದ್ಧವಾಗಿವೆ. ಅಜ್ಞಾತಕರ್ತೃಕವಾದ 'ಭಾರತತಿಲಕ' ವ್ಯಾಖ್ಯಾನವೇ ಅತ್ಯಂತ ಪ್ರಾಚೀನವೆಂದು ಭಾವಿಸಲಾಗಿದೆ ಈಗ ಉಪಲಬ್ಧವಾಗಿರುವುದು ಅಭಿನವಗುಪ್ತನ 'ಅಭಿನವ ಭಾರತಿ'ಯೊಂದೇ.

---

5 ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಷ್ಟರಸಾಶ್ರಯೋ ನಿಯುಕ್ತಃ ।



ಭರತನನ್ನು ಸಾಮಾನ್ಯವಾಗಿ 'ಮುನಿ' ಯೆಂದೇ ಭಾವಿಸಲಾಗಿದೆ. ಆತನು ಕಾಳಿದಾಸನಿಗಿಂತ ತುಂಬ ಪ್ರಾಚೀನ. ಆದ್ದರಿಂದ ಅವನು ಕ್ರಿ.ಪೂ. ೪೦೦ ಅಥವಾ ಅದಕ್ಕೂ ಹಿಂದಿನವನೆನ್ನಬೇಕು. ಆದರೆ ಈಗ ಭರತನದೆಂದು ಪ್ರಚಲಿತವಾಗಿರುವ ನಾಟ್ಯಶಾಸ್ತ್ರವು, ಅದರಲ್ಲಿ ಅನೇಕ ಪ್ರಕ್ಷಿಪ್ತಭಾಗಗಳು ಸೇರಿಕೊಂಡಿರುವುದರಿಂದ, ಅದರ ಪ್ರಾಚೀನ ಮೂಲರೂಪದಲ್ಲಿಲ್ಲವೆಂಬುದನ್ನು ನೆನಪಿಡಬೇಕು.

### ದಂಡಿ (ಕ್ರಿ.ಶ. ೯ನೆಯ ಶತಮಾನ)

ದಂಡಿಯ ಕಾವ್ಯಾದರ್ಶವು ಪಂಡಿತರ ಮೆಚ್ಚುಗೆಗೆ ಪಾತ್ರವಾದ ಲಕ್ಷಣಗ್ರಂಥ. ಇದರಲ್ಲಿ ಮೂರು ಪರಿಚ್ಛೇದಗಳಿವೆ. ಮೊದಲನೆಯದರಲ್ಲಿ ಕಾವ್ಯಲಕ್ಷಣ, ಕಾವ್ಯಮಾರ್ಗಗಳು, ವೈದರ್ಭೀ ಗೌಡೀ ರೀತಿಗಳ ವ್ಯತ್ಯಾಸಗಳೂ ಎರಡನೆಯದರಲ್ಲಿ ಅರ್ಥಾಲಂಕಾರಗಳೂ, ಮೂರನೆಯದರಲ್ಲಿ ಶಬ್ದಾಲಂಕಾರಗಳೂ ದೋಷಗಳೂ ವಿವರಿಸಲ್ಪಟ್ಟಿವೆ. ಈ ಗ್ರಂಥದಲ್ಲಿ ಒಟ್ಟು ೬೬೦ ಶ್ಲೋಕಗಳಿವೆ. ಲಕ್ಷಣಗಳಿಗೆ ಕೊಟ್ಟಿರುವ ಉದಾಹರಣೆಗಳೆಲ್ಲಾ ದಂಡಿಯಿಂದಲೇ ರಚಿತವಾದುವು. ಈ ಲಕ್ಷಣಗಳೂ ಉದಾಹರಣೆಗಳೂ ತುಂಬ ಸರಳವೂ ಸಂದರ್ಭೋಚಿತವೂ ಆಗಿರುವುದರಿಂದ ನೆನಪಿಟ್ಟುಕೊಳ್ಳಲು ಸುಲಭ. ದಂಡಿಯನ್ನು ಅಲಂಕಾರಸಂಪ್ರದಾಯದ ಆಚಾರ್ಯನೆಂದು ಭಾವಿಸುವುದೇ ವಾಡಿಕೆಯಾಗಿದ್ದರೂ, ವೈದರ್ಭೀ ಮತ್ತು ಗೌಡೀರೀತಿಗಳ ಪರಸ್ಪರ ಭೇದವನ್ನು ಮೊಟ್ಟಮೊದಲು ಅವನೇ ನಿರೂಪಿಸಿ ರೀತಿಸಂಪ್ರದಾಯದ ಮಾರ್ಗದರ್ಶಕನೂ ಆಗಿದ್ದಾನೆ.

ದಂಡಿ ಮತ್ತು ಭಾಮಹ ಇಬ್ಬರೂ ಪರಸ್ಪರರ ಅಭಿಪ್ರಾಯಗಳನ್ನು ಖಂಡನಮಾಡಿರುವಂತೆ ಇವರ ಗ್ರಂಥಗಳಿಂದ ಊಹಿಸಲವಕಾಶವಿರುವುದರಿಂದ ಇವರಲ್ಲಿ ಯಾರು ಮೊದಲು ಯಾರು ಆಮೇಲೆ ಎಂಬ ಪೌರ್ವಾಪರ್ಯಗಣನೆ ಕಷ್ಟವಾಗಿದೆ. ಪ್ರಾಯಃ ಭಿನ್ನಸಂಪ್ರದಾಯದ ವಾದವನ್ನು ಸ್ಥೂಲವಾಗಿ ಅವರು ಖಂಡಿಸಿದ್ದರೂ ಇರಬಹುದು. ದಶಕುಮಾರಚರಿತವನ್ನು ರಚಿಸಿದ ದಂಡಿಯೇ ಕಾವ್ಯಾದರ್ಶ ರಚಿಸಿದವನೂ ಎಂಬುದರಲ್ಲಿ ಸಂದೇಹವಿಲ್ಲ. ಈತನ ಕಾಲ ಕ್ರಿ.ಶ. ಆರನೆಯ ಶತಮಾನವೆಂದು ಹಿಂದೆಯೇ (ಪುಟ ೯೪ ನೋಡಿ) ಹೇಳಲಾಗಿದೆ.

**ಭಾಮಹ** (ಕ್ರಿ.ಶ. ೬ನೆಯ ಶತಮಾನ)

ಭಾಮಹ ರಚಿತ ‘ಕಾವ್ಯಾಲಂಕಾರ’ ವನ್ನು ಭಾಮಹಾಲಂಕಾರವೆಂದೇ ಸಾಮಾನ್ಯವಾಗಿ ಕರೆಯಲಾಗುತ್ತಿದೆ. ಅದರಲ್ಲಿ ಆರು ಪರಿಚ್ಛೇದಗಳಿವೆ. ಮೊದಲನೆಯದರಲ್ಲಿ ಕಾವ್ಯಶರೀರವೂ, ಎರಡುಮೂರನೆಯವುಗಳಲ್ಲಿ ಅಲಂಕಾರಗಳೂ ನಾಲ್ಕನೆಯದರಲ್ಲಿ ದೋಷಗಳೂ ಐದನೆಯದರಲ್ಲಿ ನ್ಯಾಯಗಳೂ ಆರನೆಯದರಲ್ಲಿ ಶಬ್ದಶುದ್ಧಿಯೂ ನಿರೂಪಿತವಾಗಿವೆ. ದಂಡಿಗೆ ಸಮ್ಮತವಲ್ಲದ ಕಥಾ–ಆಖ್ಯಾಯಿಕಾ ಎಂಬ ಗದ್ಯವಿಭಾಗವು ಭಾಮಹನಿಗೆ ಇಷ್ಟ. ದಂಡಿಯು ಹತ್ತು ಕಾವ್ಯಗುಣಗಳನ್ನು ಉಲ್ಲೇಖಿಸಿದ್ದರೆ ಭಾಮಹನಿಗೆ ಮಾಧುರ್ಯ, ಪ್ರಸಾದ, ಓಜಸ್ಸು ಎಂಬ ಮೂರೇ ಗುಣಗಳು ಸಾಕು. ವೈದರ್ಭೀ ಗೌಡೀ ಎಂಬ ರೀತಿ ಪ್ರಭೇದಗಳು ಭಾಮಹನಿಗೆ ಸಮ್ಮತವಲ್ಲ. ವಕ್ರೋಕ್ತಿ ಪ್ರತ್ಯೇಕ ಅಲಂಕಾರವಲ್ಲ. ಅದು ಒಂದು ರೀತಿಯ ಅತಿಶಯೋಕ್ತಿ; ಅದೇ ಎಲ್ಲ ಅಲಂಕಾರಗಳಿಗೂ ಮೂಲ ಎಂಬುದೇ ಅವನ ಮತ. ‘ಶಬ್ದಾರ್ಥೌ ಕಾವ್ಯಂ’ ಎಂಬುದು ಭಾಮಹನು ಹೇಳಿರುವ ಕಾವ್ಯಲಕ್ಷಣ. ಹತ್ತು ಬಗೆಯ ಕಾವ್ಯದೋಷಗಳನ್ನು ಇವನು ಬಹಳ ಚೆನ್ನಾಗಿ ವಿವೇಚಿಸಿದ್ದಾನೆ.

**ವಾಮನ** (ಕ್ರಿ.ಶ. ೮ನೆಯ ಶತಮಾನ)

ಕಾಶ್ಮೀರದ ಜಯಾಪೀಡನ (ಕ್ರಿ.ಶ. ೮ನೆಯ ಶತಮಾನ) ಆಸ್ಥಾನದಲ್ಲಿದ್ದ ವಾಮನನೂ ದಂಡಿಯಂತೆ ಪ್ರಾಚೀನ ಸಂಪ್ರದಾಯದ ಆಲಂಕಾರಿಕ. ಈತನ ಗ್ರಂಥಕ್ಕೆ ‘**ಕಾವ್ಯಾಲಂಕಾರಸೂತ್ರ**’ ವೆಂದು ಹೆಸರು. ಇದರಲ್ಲಿ ಒಟ್ಟು ೩೧೯ ಸೂತ್ರಗಳಿವೆ. ಪ್ರತಿ ಸೂತ್ರಕ್ಕೂ ವಾಮನನೇ ರಚಿಸಿದ ವೃತ್ತಿಯೂ ಇದೆ. ಈ ಸೂತ್ರಗಳನ್ನು ಐದು ಅಧಿಕರಣಗಳಲ್ಲಿ ವಿಂಗಡಿಸಲಾಗಿದೆ. ಮೊದಲನೆಯ (ಶರೀರ) ಅಧಿಕರಣದಲ್ಲಿ ಕಾವ್ಯದ ಪ್ರಯೋಜನವೂ ವೈದರ್ಭೀ ಗೌಡೀ ಪಾಂಚಾಲೀ ರೀತಿಗಳ ವರ್ಣನೆಯೂ ಇವೆ. ಎರಡನೆಯ (ದೋಷದರ್ಶನ) ಅಧಿಕರಣದಲ್ಲಿ ಪದ ವಾಕ್ಯ ವಾಕ್ಯಾರ್ಥಗಳ ದೋಷಗಳು ಪ್ರತಿಪಾದಿತವಾಗಿವೆ. ಮೂರನೆಯ (ಗುಣವಿವೇಚನ) ಅಧಿಕರಣದಲ್ಲಿ ಹತ್ತು ಗುಣಗಳ ಶಬ್ದಗತ ಮತ್ತು ಅರ್ಥಗತ ಪ್ರಭೇದಗಳು ನಿರೂಪಿತವಾಗಿವೆ. ನಾಲ್ಕನೆಯ (ಆಲಂಕಾರಿಕ) ಅಧಿಕರಣದಲ್ಲಿ ಶಬ್ದಾಲಂಕಾರಗಳ ಅರ್ಥಾಲಂಕಾರಗಳ ಲಕ್ಷಣಗಳು ಉದಾಹರಣೆಗಳೊಂದಿಗೆ ವಿವರಿಸಲ್ಪಟ್ಟಿವೆ. ಐದನೆಯ ಅಧಿಕರಣದಲ್ಲಿ ಶಬ್ದಶುದ್ಧಿ ಮತ್ತು ಪ್ರಯೋಗಗಳ ವಿಚಾರವಿದೆ.



ಶಬ್ದಾರ್ಥಗುಣಗಳ ಉತ್ಕರ್ಷರೂಪವಾದ ರೀತಿಯೇ ಕಾವ್ಯದ ಆತ್ಮಾ ಎಂಬುದು ವಾಮನನ ಸಿದ್ಧಾಂತ. ಕಾವ್ಯಕ್ಕೆ ಸಂಬಂಧಿಸಿದಂತೆ ‘ಆತ್ಮ’ ಶಬ್ದವನ್ನು ಮೊಟ್ಟಮೊದಲು ಬಳಸಿದವನು ವಾಮನನೇ. ಆದರೆ ಅವನ ದೃಷ್ಟಿ ಶಬ್ದ ಅರ್ಥಗಳಲ್ಲೇ ಸೀಮಿತವಾಗಿ ಬಿಟ್ಟಿತ್ತು. ಅವನ ಕಾಲದಲ್ಲಿ ಅಂಗೀಕೃತವಾಗಿದ್ದ ವೈದರ್ಭೀ ಗೌಡೀ ರೀತಿಗಳ ಜತೆಗೆ ಅವನು ‘ಪಾಂಚಾಲೀ’ ರೀತಿಯನ್ನೂ ಸೇರಿಸಿದನು. ವಾಮನನು ದಂಡಿಯಂತೆ ಉದಾಹರಣೆಗಳನ್ನು ತಾನೇ ರಚಿಸದೆ ಪ್ರಸಿದ್ಧ ಕವಿಗಳಿಂದ ಆರಿಸಿ ಕೊಟ್ಟಿದ್ದಾನೆ. ಕೊನೆಯಲ್ಲಿ ಕೊಟ್ಟಿರುವ ‘ಪ್ರಯೋಗಗಳ’ ವಿವೇಚನೆ ಅವನ ಗ್ರಂಥಕ್ಕೆ ಉತ್ಕರ್ಷ ವುಂಟುಮಾಡತಕ್ಕದ್ದು. ಅವನು ನಾಟಕ ಲಕ್ಷಣಗಳನ್ನು ಪ್ರಸ್ತಾಪಿಸಿಲ್ಲ.

**ಉದ್ಭಟ** (ಕ್ರಿ.ಶ. ೮ನೆಯ ಶತಮಾನ)

ಉದ್ಭಟನೂ ಕಾಶ್ಮೀರದವನೇ. ವಾಮನನ ಸಮಕಾಲೀನನಾದ ಈತನ ‘**ಕಾವ್ಯಾಲಂಕಾರ ಸಂಗ್ರಹ**’ವನ್ನು ಸಾಮಾನ್ಯವಾಗಿ **ಉದ್ಭಟಾಲಂಕಾರ**ವೆಂದೇ ಕರೆಯಲಾಗುತ್ತದೆ. ಈತನಿಂದ ರಚಿತವಾಗಿದ್ದ ‘**ಭಾಮಹವಿವರಣ**’ (ಭಾಮಹಾಲಂಕಾರದ ವ್ಯಾಖ್ಯಾನ) ಮತ್ತು ಕುಮಾರಸಂಭವ (ಮಹಾಕಾವ್ಯ) ಲುಪ್ತವಾಗಿಹೋಗಿವೆ. ಈತನ ಕಾವ್ಯಾಲಂಕಾರಸಂಗ್ರಹವು ಅಲಂಕಾರ ವಿಷಯದ ಗ್ರಂಥ. ಅದರಲ್ಲಿ ಆರು ವರ್ಗಗಳಿವೆ. ಅದರಲ್ಲಿರುವ ಒಟ್ಟು ೭೯ ಕಾರಿಕೆಗಳಲ್ಲಿ ೪೧ ಅಲಂಕಾರಗಳ ವರ್ಣನೆಯಿದೆ. ಅಲಂಕಾರಗಳಿಗೆ ಉದ್ಭಟನು ಕೊಟ್ಟಿರುವ ಲಕ್ಷಣಗಳೂ ಭಾಮಹನು ಕೊಟ್ಟಿರುವುವೂ ಏಕರೀತಿ ಇವೆ. ಕೆಲವಂತು ಅಕ್ಷರಶಃ ಒಂದೇ ಆಗಿವೆ. ರೀತಿಗಳನ್ನು ಉದ್ಭಟನು ಉಪನಾಗರಿಕಾ, ಗ್ರಾಮ್ಯಾ, ಪರುಷಾ ಎಂದು ಮೂರು ಬಗೆಯಾಗಿ ವಿಂಗಡಿಸಿದ್ದಾನೆ. ‘ಶಾಂತ’ವನ್ನು ರಸವೆಂದು ಮೊಟ್ಟಮೊದಲು ಪ್ರತಿಪಾದಿಸಿದವನು ಈತನೇ. ಒಳ್ಳೆಯ ಕಾವ್ಯದಲ್ಲಿ ರಸದ ಆವಶ್ಯಕತೆಯನ್ನೂ ಈತನು ಒತ್ತಿ ಹೇಳಿದ್ದಾನೆ. ಹತ್ತನೆಯ ಶತಮಾನದಲ್ಲಿದ್ದ ಕೊಂಕಣದ ಪ್ರತಿಹಾರೇಂದು ರಾಜನು ಉದ್ಭಟನ ಗ್ರಂಥಕ್ಕೆ ವ್ಯಾಖ್ಯಾನ ಬರೆದಿದ್ದಾನೆ.

**ರುದ್ರಟ** (ಕ್ರಿ.ಶ. ೯ನೆಯ ಶತಮಾನ)

ರುದ್ರಟನೂ ಕಾಶ್ಮೀರದವನು. ಹತ್ತನೆಯ ಶತಮಾನದ ರಾಜಶೇಖರನು ಇವನ ಹೆಸರನ್ನು ‘ಕಾಕುವಕ್ರೋಕ್ತಿರ್ನಾಮ ಶಬ್ದಾಲಂಕಾರೋಽಯಮಿತಿ

ರುದ್ರಟಃ' ಎಂಬಲ್ಲಿ ಉಲ್ಲೇಖಿಸಿರುವುದರಿಂದ ಇವನು ಕ್ರಿ ಶ. ೯೦೦ಕ್ಕೂ ಹಿಂದಿನವನಾಗಿರಬೇಕು. ಈತನ '**ಕಾವ್ಯಾಲಂಕಾರ**' ಗ್ರಂಥದಲ್ಲಿ ೧೬ ಅಧ್ಯಾಯಗಳಿವೆ. ಇದರ ಸರಣಿಯು ಕಾವ್ಯಾದರ್ಶದಂತಿದೆ. ಇದು ಆರ್ಯಾವೃತ್ತದಲ್ಲಿ ರಚಿತವಾಗಿದೆ. ಒಟ್ಟು ಪದ್ಯಸಂಖ್ಯೆ ೭೩೪. ಉದಾಹರಣೆಗಳೆಲ್ಲಾ ಈತನಿಂದಲೇ ರಚಿತವಾದುವು. ಈತನೂ ಅಲಂಕಾರಸಂಪ್ರದಾಯಕ್ಕೇ ಸೇರಿದವನು. ಈತನು 'ಶಾಂತ'ವನ್ನು ಒಂಭತ್ತನೆಯ ರಸವೆಂದು ಹೇಳಿರುವುದಲ್ಲದೆ 'ಪ್ರೇಯಸ್' ಎಂಬ ಹತ್ತನೆಯ ರಸವೂ ಉಂಟೆನ್ನುತ್ತಾನೆ. 'ಲಾಟೀ' ಎಂಬ ನಾಲ್ಕನೆಯ ರೀತಿಯನ್ನು ಅಂಗೀಕರಿಸಿದ್ದಾನೆ. ಸಂಸ್ಕೃತ, ಪ್ರಾಕೃತ, ಮಾಗಧೀ, ಪೈಶಾಚೀ, ಶೌರಸೇನೀ ಮತ್ತು ಅಪಭ್ರಂಶ—ಈ ಆರು ಭಾಷೆಗಳನ್ನೂ ಪ್ರಸ್ತಾಪಿಸಿದ್ದಾನೆ. ಈತನಿಗೆ 'ಧ್ವನಿ' ತತ್ತ್ವವು ತಿಳಿದಿದ್ದಂತೆ ಕಾಣುವುದಿಲ್ಲ. ರಾಜಶೇಖರ, ಧನಿಕ, ಅಭಿನವಗುಪ್ತ ಮುಂತಾದವರು ಈತನ ಗ್ರಂಥದಿಂದ ಉದಾಹರಿಸಿದ್ದಾರೆ.

'ಕಾವ್ಯಾಲಂಕಾರ'ಕ್ಕೆ ನೇಮಿಸಾಧುವು ಒಂದು ಟಿಪ್ಪಣಿಯನ್ನೂ ವಲ್ಲಭದೇವನೂ ಆಶಾಧರನೂ ಪ್ರತ್ಯೇಕ ವ್ಯಾಖ್ಯಾನಗಳನ್ನೂ ರಚಿಸಿದ್ದಾರೆ.

### ಆನಂದವರ್ಧನ (ಕ್ರಿ.ಶ. ೯ನೆಯ ಶತಮಾನ)

ಸುಮಾರು ಒಂಭತ್ತನೆಯ ಶತಮಾನದ ಆದಿಯಲ್ಲಿ 'ಸಹೃದಯ' ಎಂಬ ಬಿರುದಾಂಕಿತನಾದ ವಿದ್ವಾಂಸನೊಬ್ಬನು 'ಧ್ವನಿ ತತ್ತ್ವವನ್ನು ೧೨೦ ಕಾರಿಕೆಗಳಲ್ಲಿ ಪ್ರತಿಪಾದಿಸಿದನು. ಈ ಕಾರಿಕೆಗಳಿಗೆ ಆನಂದವರ್ಧನನು ಸು. ಕ್ರಿ ಶ. ೮೫೦ರಲ್ಲಿ '**ಧ್ವನ್ಯಾಲೋಕ**' ಎಂಬ ವ್ಯಾಖ್ಯಾನವನ್ನು ಬರೆದನು. ಈ ಧ್ವನ್ಯಾಲೋಕದಲ್ಲಿ ಮೂರು ಅಂಶಗಳನ್ನು ನಾವು ಗಮನಿಸಬೇಕು. (೧) ಮೂಲ ಕಾರಿಕೆಗಳು (೨) ಅವುಗಳ ವೃತ್ತಿ (ಗದ್ಯಾತ್ಮಕವಾದ ವ್ಯಾಖ್ಯಾನ) (೩) ಉದಾಹರಣೆಗಳು (ಪ್ರಸಿದ್ಧ ಗ್ರಂಥಗಳಿಂದ ಆರಿಸಿದುವು). ಈ ಮೂಲಕಾರಿಕೆಗಳೂ ಆನಂದವರ್ಧನರಚಿತವೆಂದೇ ಕೆಲವರು ಅಭಿಪ್ರಾಯಪಡುತ್ತಾರೆ.

ಧ್ವನ್ಯಾಲೋಕದಲ್ಲಿ ನಾಲ್ಕು ಉದ್ಯೋತಗಳಿವೆ. ಮೊದನೆಯದಂಲ್ಲಿ ಧ್ವನಿವಿರೋಧೀ ಮತಗಳ ಸಮೀಕ್ಷೆಯೂ ಎರಡು ಮೂರನೆಯವುಗಳಲ್ಲಿ ಧ್ವನಿಪ್ರಕಾರಗಳ ವಿವೇಚನೆಯೂ ನಾಲ್ಕನೆಯದರಲ್ಲಿ ಧ್ವನಿಯ ಉಪಯೋಗವರ್ಣನೆಯೂ ಇದೆ. ಈ ಗ್ರಂಥದಲ್ಲಿ ಆನಂದವರ್ಧನನ ಇತರ ಕೃತಿಗಳಾದ



ದೇವೀಶತಕ, ಅರ್ಜುನಚರಿತ, ವಿಷಮಬಾಣಲೀಲಾ ಮತ್ತು ಹರವಿಜಯಗಳಿಂದ ಆರಿಸಿದ ಉದಾಹರಣೆಗಳಿವೆ. ಆನಂದವರ್ಧನನು ತನಗಿಂತ ಹಿಂದೆ ಧ್ವನಿಯ ವಿಷಯದಲ್ಲಿದ್ದ ಅಭಾವವಾದ, ಭಕ್ತಿ (ಲಕ್ಷಣ)ವಾದ, ಅನಿರ್ವಚನೀಯತಾವಾದ ಎಂಬ ಮೂರು ಮತಗಳನ್ನೂ ಖಂಡಿಸಿ 'ವ್ಯಂಜನೆ'ಯ ಅಸ್ತಿತ್ವವನ್ನು ಸ್ಥಾಪಿಸಿ ಧ್ವನಿಪ್ರಕಾರಗಳನ್ನು ವಿವರವಾಗಿ ವಿವೇಚಿಸಿದನು.

ಧ್ವನಿನಾತಿಗಭೀರೇಣ ಕಾವ್ಯತತ್ತ್ವನಿವೇಶಿನಾ ।
ಆನಂದವರ್ಧನಃ ಕಸ್ಯ ನಾಸೀದಾನಂದವರ್ಧನಃ ॥ —ಎಂದು ರಾಜಶೇಖರನು ಆನಂದವರ್ಧನನ ವಿಷಯದಲ್ಲಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ.

ನೋಣೋಪಾಧ್ಯಾಯನೆಂಬುವನ ಮಗನಾದ ಈ ಆನಂದವರ್ಧನನು ಕಾಶ್ಮೀರದಲ್ಲಿ ಕ್ರಿ.ಶ. ೨೫೫ ರಿಂದ ೮೮೪ರ ವರೆಗೆ ಆಳಿದ ಅವಂತಿವರ್ಮನ ಆಸ್ಥಾನ ಪಂಡಿತನಾಗಿದ್ದನು. ಧ್ವನ್ಯಾಲೋಕಕ್ಕೆ ಅನೇಕರು ವ್ಯಾಖ್ಯಾನ ಬರೆದಿದ್ದಾರೆ. ಅವುಗಳಲ್ಲಿ ಅಭಿನವಗುಪ್ತನ 'ಲೋಚನ'ವು ಮುಖ್ಯವಾದುದು.

### ರಾಜಶೇಖರ (ಕ್ರಿ.ಶ. ೧೦ನೆಯ ಶತಮಾನ)

ರಾಜಶೇಖರನ ನಾಟಕಗಳ ವಿಚಾರವಾಗಿ ಹಿಂದೆ (ಪುಟ ೨೨೭) ಹೇಳಿದ್ದೇವೆ. ಈತನು **ಕಾವ್ಯಮೀಮಾಂಸಾ** ಎಂಬ ೧೮ ಅಧ್ಯಾಯಗಳ ಒಂದು ಅಲಂಕಾರ ಶಾಸ್ತ್ರಗ್ರಂಥವನ್ನು ಬರೆದಿದ್ದಾನೆ. ಅದರ ಕೊನೆಯಲ್ಲಿ 'ಇತಿ ರಾಜಶೇಖರಕೃತೌ ಕಾವ್ಯಮೀಮಾಂಸಾಯಾಂ ಕವಿರಹಸ್ಯೇ ಪ್ರಥಮೇ ಅಧಿಕರಣೇ ಕಾಲವಿಭಾಗೋ ನಾಮ ಅಷ್ಟಾದಶೋಧ್ಯಾಯಃ' ಎಂದಿರುವುದರಿಂದ ಈಗ ನಮಗೆ ಸಿಕ್ಕಿರುವುದು ಒಟ್ಟು ಗ್ರಂಥದ ಏಕದೇಶ ಮಾತ್ರ ಎಂದು ಹೇಳಬೇಕಾಗುತ್ತದೆ. ಕವಿಗಳ ಮತ್ತು ಕವಯಿತ್ರಿಗಳ ವಿಷಯವಾಗಿ ಸಾಂಪ್ರದಾಯಕವಾಗಿರುವ ವಿವರಗಳು 'ಕಾವ್ಯಮೀಮಾಂಸೆಯಲ್ಲಿ ಕೊಡಲ್ಪಟ್ಟಿವೆ. ಅಲಂಕಾರಶಾಸ್ತ್ರವು ಏಳನೆಯ ವೇದಾಂಗವೆಂದೂ ೧೫ನೆಯ ವಿದ್ಯಾಸ್ಥಾನವೆಂದೂ ಉಕ್ತವಾಗಿದೆ. ರಾಜಶೇಖರನು ಕೊಟ್ಟಿರುವ ಉದಾಹರಣೆಗಳೆಲ್ಲಾ ಪ್ರಸಿದ್ಧ ಕವಿಗಳ ಕೃತಿಗಳಿಂದ ಆರಿಸಿದುವು.

### ಧನಂಜಯ ಮತ್ತು ಧನಿಕ (ಕ್ರಿ ಶ. ೧೦ನೆಯ ಶತಮಾನ)

ಮುಂಜನ ಆಸ್ಥಾನದಲ್ಲಿದ್ದ (೧೦ನೆಯ ಶತಮಾನ) ಧನಂಜಯನು **ದಶರೂಪ**ವೆಂಬ ನಾಟಕಲಕ್ಷಣ ಗ್ರಂಥವನ್ನು ರಚಿಸಿದ್ದಾನೆ. ಅದರ ನಾಲ್ಕು

ಪ್ರಕರಣಗಳಲ್ಲಿ ಒಟ್ಟು ೩೦೦ ಕಾರಿಕೆಗಳಿವೆ. ಮುಂಜನ ಕಾಲಾನಂತರ ಧನಂಜಯನ ಸೋದರನಾದ ಧನಿಕನು ದಶರೂಪಕ್ಕೆ '**ಅವಲೋಕ**' ಎಂಬ ವ್ಯಾಖ್ಯಾನವನ್ನು ಬರೆದನು. ಈ ಗ್ರಂಥವೂ ಇದರ ವ್ಯಾಖ್ಯಾನವೂ ಸಂಗ್ರಹವಾಗಿಯೂ ಉಪಯುಕ್ತವಾಗಿಯೂ ಇವೆ. ಇದರಿಂದ ಭರತನ ನಾಟ್ಯಶಾಸ್ತ್ರವೂ ಕೂಡ ಸ್ವಲ್ಪ ಹಿಂದೆ ಬೀಳುವಂತಾಯಿತೆನ್ನಬಹುದು. ಇದರಲ್ಲಿರುವ ಉದಾಹರಣೆಗಳು ಸ್ವರಚಿತವಲ್ಲ; ಪ್ರಸಿದ್ಧ ನಾಟಕಗಳಿಂದ, ಅದೂ ಹೆಚ್ಚುಪಾಲು ವೇಣೀಸಂಹಾರ ರತ್ನಾವಳಿಗಳಿಂದಲೇ, ಆರಿಸಿಕೊಂಡವು. ನಾಟಕಗಳು ಮಾತ್ರ ಈ ಗ್ರಂಥದಲ್ಲಿ ಪ್ರಸಕ್ತವಾಗಿದ್ದರೂ ಕಾವ್ಯಲಕ್ಷಣವೂ ಆನುಷಂಗಿಕವಾಗಿ ಪ್ರಸ್ತಾಪಿಸಲ್ಪಟ್ಟಿದೆ. ಇದರಲ್ಲಿ 'ರಸ' ತತ್ವಕ್ಕೆ ವಿಶೇಷ ಸ್ಥಾನವಿರುವುದು ಸಹಜವೇ ಆಗಿದೆ. 'ಶಾಂತ'ವನ್ನು ರಸವೆಂದು ಕರೆಯುವುದನ್ನು ಈ ಗ್ರಂಥಕಾರನು ಕಟುವಾಗಿ ಖಂಡಿಸಿದ್ದಾನೆ. 'ಅವಲೋಕ'ದಲ್ಲಿ ಉಲ್ಲೇಖಿಸಲ್ಪಟ್ಟಿರುವ ಧನಿಕನ **ಕಾವ್ಯನಿರ್ಣಯ** ಗ್ರಂಥವು ಇನ್ನೂ ಸಿಕ್ಕಿಲ್ಲ.

### ಭಟ್ಟನಾಯಕ, ರುದ್ರಭಟ್ಟ (ಕ್ರಿ.ಶ. ೧೦ನೆಯ ಶತಮಾನ)

ಭಟ್ಟನಾಯಕನು ಭರತನ ನಾಟ್ಯಶಾಸ್ತ್ರಕ್ಕೆ '**ಹೃದಯದರ್ಪಣ**'ವೆಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ಅದು ಈಗ ಅನುಪಲಬ್ಧ. ಭಟ್ಟನಾಯಕನು ಆನಂದವರ್ಧನನ 'ಧ್ವನಿ'ವಾದವನ್ನು ಅಲ್ಲಗಳೆದು 'ರಸ'ತತ್ವವನ್ನು ಸಮರ್ಥಿಸಿದ್ದಾನೆ. ಇದನ್ನು ಅಭಿನವಗುಪ್ತನು ಖಂಡಿಸಿದ್ದಾನೆ. ಆದ್ದರಿಂದ ಭಟ್ಟನಾಯಕನು ಆನಂದವರ್ಧನನ ಅನಂತರ ಅಭಿನವಗುಪ್ತನಿಗಿಂತ ಹಿಂದೆ ಇದ್ದಿರಬೇಕು. ಈತನ ಅಭಿಪ್ರಾಯದಲ್ಲಿ ಕಾವ್ಯಸೌಂದರ್ಯಕ್ಕೆ ಅಭಿಧಾ, ಭಾವಕತ್ವ, ಭೋಜಕತ್ವಗಳು ಪ್ರಧಾನ. ರಸವು ಪ್ರತ್ಯಕ್ಷವಲ್ಲ; ಅನುಭವ. ಇವನದು ರಸಸಂಪ್ರದಾಯದಲ್ಲಿ 'ಭುಕ್ತಿವಾದ'ವೆಂದು ಹೆಸರುಗೊಂಡಿದೆ. ಈತನು ಉದಾಹರಣೆಗಳನ್ನು ಶಾತವಾಹನನ ಗಾಥಾಸಪ್ತಶತಿ, ಶ್ರೀಮದ್ರಾಮಾಯಣ, ಯಶೋವರ್ಮನ ರಾಮಾಭ್ಯುದಯಗಳಿಂದ ಆರಿಸಿಕೊಂಡಿದ್ದಾನೆಂದು ಕಂಡುಬರುತ್ತದೆ.

### ಅಭಿನವಗುಪ್ತ (ಕ್ರಿ.ಶ. ೧೦ನೆಯ ಶತಮಾನ)

ಇದೇ ಕಾಲದ ರುದ್ರಭಟ್ಟನು **ರಸತಿಲಕಾ** ಮತ್ತು **ಶೃಂಗಾರತಿಲಕ**ಗಳನ್ನು ರಚಿಸಿದನು. ಹೇಮಚಂದ್ರನ (ಕ್ರಿ.ಶ. ೧೧೪೧–೧೧೭೨) ಕಾವ್ಯಾನುಶಾಸನದಲ್ಲಿ ಈ ಶೃಂಗಾರತಿಲಕದ ಉಲ್ಲೇಖವಿದೆ. ರುದ್ರಟನೂ ರುದ್ರಭಟ್ಟನೂ ಭಿನ್ನವ್ಯಕ್ತಿಗಳು. ಕಾವ್ಯಗಳಲ್ಲಿ ನಿಷ್ಪನ್ನವಾಗಿರುವ ಒಂಭತ್ತು ರಸಗಳನ್ನೂ ಈತನು ವಿವರಿಸಿದ್ದಾನೆ. 'ತ್ರಿಪುರವಧ'ವು ಈತನ ಮತ್ತೊಂದು ಕೃತಿಯೆಂದು ಹೇಳುತ್ತಾರೆ.



ಆನಂದವರ್ಧನನ ಧ್ವನ್ಯಾಲೋಕಕ್ಕೆ 'ಧ್ವನ್ಯಾಲೋಕಲೋಚನ' ಎಂಬ ವ್ಯಾಖ್ಯಾನವನ್ನು ರಚಿಸಿ ಅಭಿನವಗುಪ್ತನು ಪ್ರಸಿದ್ಧನಾಗಿದ್ದಾನೆ. ಈತನು ಭಟ್ಟೇಂದುರಾಜ, ಭಟ್ಟತಾವುತ ಮುಂತಾದ ೧೯ ವಿದ್ವಾಂಸರಲ್ಲಿ ಶಿಷ್ಯನಾಗಿ ವಿದ್ಯಾಭ್ಯಾಸ ಮಾಡಿದುದಾಗಿಯೂ ಅಲಂಕಾರ ಮತ್ತು ಶೈವಸಿದ್ಧಾಂತಗಳ ಮೇಲೆ ೪೧ ಗ್ರಂಥಗಳನ್ನು ರಚಿಸಿರುವುದಾಗಿಯೂ ಹೇಳಿಕೆಯಿದೆ. ಈತನು 'ಪ್ರತ್ಯಭಿಜ್ಞಾ' ಸಂಪ್ರದಾಯದ ಶೈವ. ಈತನು ಭರತನ ನಾಟ್ಯಶಾಸ್ತ್ರದ ಮೇಲೆ ರಚಿಸಿರುವ 'ಅಭಿನವಭಾರತೀ' ವ್ಯಾಖ್ಯಾನವು ತುಂಬ ಉಪಯುಕ್ತವಾದುದು. ಈತನು ಭಟ್ಟತಾವುತನ 'ಕಾವ್ಯಕೌತುಕ' ಎಂಬ ಅಲಂಕಾರ ಶಾಸ್ತ್ರಗ್ರಂಥಕ್ಕೂ ಬರೆದಿದ್ದ 'ಕಾವ್ಯಕೌತುಕವಿವರಣ'ವೆಂಬ ವ್ಯಾಖ್ಯಾನವು ಈಗ ಲುಪ್ತವಾಗಿಹೋಗಿದೆ. 'ಸಹೃದಯಾಲೋಕಲೋಚನ'ವೆಂದೂ ಕರೆಯಲ್ಪಡುವ ಧ್ವನ್ಯಾಲೋಕಲೋಚನದಲ್ಲಿ ಈತನು ತನ್ನ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದ ಮತಗಳನ್ನೆಲ್ಲಾ ಖಂಡಿಸಿ 'ಧ್ವನಿ'ವಾದವನ್ನು ಸಮರ್ಥಿಸಿದ್ದಾನೆ. ಇದರ ಪರಿಣಾಮವಾಗಿ ಗುಣ, ರೀತಿ, ಅನುಮಾನ ಮತ್ತು ವಕ್ರೋಕ್ತಿ ಸಂಪ್ರದಾಯಗಳ ಬೆಳವಣಿಗೆ ಅಲ್ಲಿಂದೀಚೆಗೆ ನಿಂತೇಹೋಯಿತೆನ್ನಬಹುದು.

### ಕುಂತಕ (ಕ್ರಿ.ಶ. ೧೧ನೆಯ ಶತಮಾನ)

'ಕುಂತಲ'ನೆಂದೂ ಕರೆಯಲ್ಪಡುವ ಕುಂತಕನು ಅಭಿನವಗುಪ್ತನ ಕಿರಿಯ ಸಮಕಾಲೀನ. ಈತನು ವಕ್ರೋಕ್ತಿ ಸಂಪ್ರದಾಯದ ಹುರಿಯಾಳು. ಈತನ **ವಕ್ರೋಕ್ತಿಜೀವಿತದ** ಮೂರೇ ಅಧ್ಯಾಯಗಳು ಉಪಲಬ್ಧವಾಗಿ, ಗ್ರಂಥವು ಅಸಮಗ್ರ ಸ್ಥಿತಿಯಲ್ಲಿದೆ. ಹಿಂದೆ ಬೇರೆ ಬೇರೆ ಪ್ರಾಂತಗಳ ಹೆಸರಿನಲ್ಲಿ ಬಳಕೆಯಲ್ಲಿದ್ದ ರೀತಿಗಳಿಗೆ ಬದಲಾಗಿ ಈತನು ಸುಕುಮಾರ, ವಿಚಿತ್ರ ಮತ್ತು ಮಧ್ಯಮ ಎಂಬ ಮೂರು ಮಾರ್ಗಗಳನ್ನು ಪ್ರತಿಪಾದಿಸಿದ್ದಾನೆ. ಪ್ರತಿಯೊಬ್ಬ ಲೇಖಕನದೂ ಒಂದು ಸ್ವತಂತ್ರವಾದ ಶೈಲಿಯೆಂಬುದು ಇವನ ಅಭಿಪ್ರಾಯ. ಮೇಲೆ ಹೇಳಿದ ಮೂರು ಮಾರ್ಗಗಳೂ ಸ್ಥೂಲವಾಗಿ ನಿರ್ದೇಶಿಸುವುದಕ್ಕಾಗಿ

ಮಾತ್ರ. ಕಾಳಿದಾಸನದು ಸುಕುಮಾರಮಾರ್ಗ ; ಬಾಣ, ಭವಭೂತಿಯರದು ವಿಚಿತ್ರಮಾರ್ಗ; ಮಾತೃಗುಪ್ತ, ಮಾಯುರಾಜರದು ಮಧ್ಯಮಮಾರ್ಗ. ಕಾವ್ಯದಲ್ಲಿ ಭಂಗೀಭಣಿತಿ ಅಥವಾ ಪ್ರತಿಭಾಸಂಪನ್ನವಾದ ಆಲಂಕಾರಿಕ ಭಾಷೆಯ ಆವಶ್ಯಕತೆಯಿದೆ. ಇಂತಹ ಭಾಷೆ ಅಥವಾ ವಕ್ರೋಕ್ತಿಯು ಕಾವ್ಯದ ಜೀವಿತ. ಈ ಸಂಪ್ರದಾಯದಲ್ಲಿ ಸ್ವಭಾವೋಕ್ತಿಯು ಅಲಂಕಾರವೆಂದು ಪರಿಗಣಿತವಾಗಿಲ್ಲ.

## **ಮಹಿಮಭಟ್ಟ** (ಕ್ರಿ.ಶ. ೧೧ನೆಯ ಶತಮಾನ)

ಮಹಿಮಭಟ್ಟನ **'ವ್ಯಕ್ತಿವಿವೇಕ'**ವು ತುಂಬ ಪ್ರಸಿದ್ಧವಾದ ಗ್ರಂಥ. ಇದರಲ್ಲಿ ಮೂರು ವಿಮರ್ಶಗಳಿವೆ. ಮೊದಲನೆಯ ವಿಮರ್ಶದಲ್ಲಿ ಧ್ವನಿಯ ಲಕ್ಷಣವೂ ಧ್ವನಿಯು ಅನುಮಾನದ ಒಂದು ಪ್ರಕಾರವೆಂಬುದೂ ಪ್ರತಿಪಾದಿತವಾಗಿದೆ. ಎರಡನೆಯದರಲ್ಲಿ ಅರ್ಥವಿಷಯಕ ಅನೌಚಿತ್ಯದ ವಿವೇಚನೆಯಿದೆ. ಮೂರನೆಯ ವಿಮರ್ಶದಲ್ಲಿ ಧ್ವನ್ಯಾಲೋಕದಲ್ಲಿ ಧ್ವನಿಗೆ ಕೊಟ್ಟಿರುವ ೪೦ ಉದಾಹರಣೆಗಳನ್ನೂ ಅನುಮಾನದಲ್ಲಿ ಅಂತರ್ಭಾವಗೊಳಿಸುವ ಪ್ರಯತ್ನವಿದೆ. ಮಹಿಮಭಟ್ಟನ ಅಭಿಪ್ರಾಯದಲ್ಲಿ ಶಬ್ದಕ್ಕಿರುವುದು ಅಭಿಧೇಯಾರ್ಥ ಮತ್ತು ಅನುಮೇಯಾರ್ಥಗಳೆರಡೇ[6]. ಧ್ವನಿಕಾರರ ಅಭಿಧೇಯ, ಲಕ್ಷ್ಯ, ವ್ಯಂಗ್ಯ ಎಂಬ ಮೂರು ಅರ್ಥಗಳು ಈತನಿಗೆ ಸಮ್ಮತವಲ್ಲ. ಧ್ವನಿ ಮತ್ತು ವಕ್ರೋಕ್ತಿವಾದಗಳನ್ನು ಈತನು ನಿರಾಕರಿಸಿಬಿಟ್ಟಿದ್ದಾನೆ. ಮಹಿಮಭಟ್ಟನು ಸಮರ್ಥನಾದ ತಾರ್ಕಿಕ. ಸಾಹಿತ್ಯ ಶಾಸ್ತ್ರದಲ್ಲೂ ತರ್ಕದ ಫಕ್ಕಿಯನ್ನು ಈತನು ವಿಶೇಷವಾಗಿ ಬಳಸಿಕೊಂಡಿದ್ದಾನೆ ಈ ತ ನ 'ತತ್ತ್ವೋಕ್ತಿಕೋಶ'ವೆಂಬ ಮತ್ತೊಂದು ಅಲಂಕಾರ ಶಾಸ್ತ್ರಕ್ಕೇ ಸೇರಿದ ಗ್ರಂಥವು ಈಗ ಉಪಲಬ್ಧವಾಗಿಲ್ಲ.

## **ಭೋಜ** (ಕ್ರಿ ಶ. ೧೧ನೆಯ ಶತಮಾನ)

ಧಾರಾನಗರದ ಭೋಜನು (ಕ್ರಿ ಶ. ೧೦೧೮-೧೦೫೪) **ಸರಸ್ವತೀ ಕಂಠಾಭರಣ** ಮತ್ತು **ಶೃಂಗಾರಪ್ರಕಾಶ** ಎಂಬ ಎರಡು ಅಲಂಕಾರ ಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾನೆ. ಮೊದಲನೆಯದರಲ್ಲಿ ಐದು ಪರಿಚ್ಛೇದಗಳಿದ್ದು ಕಾವ್ಯದ ಗುಣದೋಷಗಳೂ ಆಲಂಕಾರಗಳೂ ರಸಗಳೂ ನಿರೂಪಿತವಾಗಿವೆ.

6 ಅರ್ಥೋऽಪಿ ದ್ವಿವಿಧೋ ವಾಚ್ಯೋऽನುಮೇಯಶ್ಚ—ವ್ಯಕ್ತಿವಿವೇಕ, ಪುಟ ೭.



ರುದ್ರಟನು ಹೇಳಿರುವ ನಾಲ್ಕು ರೀತಿಗಳ ಜತೆಗೆ ಅವಂತೀ ಮಾಗಧೀ ಎಂಬ ಮತ್ತೆರಡು ರೀತಿಗಳನ್ನು ಈತನು ಸೇರಿಸಿ ರೀತಿಗಳು ಆರು ಎಂದು ಪ್ರತಿಪಾದಿಸಿದ್ದಾನೆ. ತನ್ನ ಲಕ್ಷಣ ವಾಕ್ಯಗಳಿಗೆ ಪ್ರಸಿದ್ಧ ಲೇಖಕರ ಕಾವ್ಯಾದಿಗಳಿಂದ ಉದಾಹರಣೆಗಳನ್ನು ಆರಿಸಿ ಕೊಟ್ಟಿದ್ದಾನೆ. ಶೃಂಗಾರಪ್ರಕಾಶದಲ್ಲಿ ೩೬ ಪ್ರಕಾಶಗಳಿವೆ. ಇದರಲ್ಲಿ ಕಾವ್ಯಗಳ, ಗುಣದೋಷಗಳ ಮತ್ತು ರಸಗಳ ವಿವೇಚನೆಯಿದೆ ಶೃಂಗಾರವೊಂದೇ ರಸವೆಂದೂ ವೀರಾದ್ಭುತಾದಿಗಳದು [7]ವಟಯಕ್ಷದಂತೆ ಮಿಥ್ಯಾರಸಪ್ರವಾದವೆಂದೂ ಶೃಂಗಾರಪ್ರಕಾಶದಲ್ಲಿ ನಿರೂಪಿತವಾಗಿದೆ.

## **ಕ್ಷೇಮೇಂದ್ರ** (ಕ್ರಿ.ಶ. ೧೧ನೆಯ ಶತಮಾನ)

ಕ್ಷೇಮೇಂದ್ರನು ತನ್ನ **ಔಚಿತ್ಯವಿಚಾರ ಚರ್ಚೆ**ಯಲ್ಲಿ 'ಔಚಿತ್ಯ' ಸಂಪ್ರದಾಯವನ್ನು ಪ್ರತಿಪಾದಿಸಿದ್ದಾನೆ. 'ಔಚಿತ್ಯ' ವಿದ್ದರೇ ಅದು ಒಳ್ಳೆಯ ಕಾವ್ಯವೆನಿಸುವುದು. ಕಾವ್ಯಕ್ಕೆ ಉತ್ಕರ್ಷವುಂಟಾಗುವುದು ಅದರಲ್ಲಿರುವ ಪದ ಅರ್ಥ, ಗುಣ, ಅಲಂಕಾರ, ರಸ ಮುಂತಾದುವುಗಳಲ್ಲೆಲ್ಲಾ ಇರುವ ಔಚಿತ್ಯದಿಂದಲೇ. ಪ್ರಸಿದ್ಧ ಕವಿಗಳ ಪ್ರಯೋಗಗಳಲ್ಲೂ ದೋಷವನ್ನು ಈತನು ತೋರಿಸಿದ್ದಾನೆ. ಉದಾಹರಣೆಗಳನ್ನು ತನ್ನ ಮತ್ತು ಇತರರ ಕೃತಿಗಳಿಂದ ಆರಿಸಿಕೊಟ್ಟಿದ್ದಾನೆ. 'ಕುಂತೇಶ್ವರದೌತ್ಯ' ಕಾಳಿದಾಸವಿರಚಿತವೆಂದು ಇದರಲ್ಲಿ ಉಲ್ಲೇಖವಿದೆ. ಈತನು ತನ್ನ ಮತ್ತೊಂದು ಕೃತಿಯಾದ **ಕವಿಕಂಠಾಭರಣ**ದಲ್ಲಿ ಕವಿಯಾಗುವುದು ಹೇಗೆಂಬುದನ್ನು ವಿವರಿಸಿದ್ದಾನೆ. ಈತನ **ಸುವೃತ್ತತಿಲಕ**ವು ಛಂದಃಶಾಸ್ತ್ರಕ್ಕೆ ಸೇರಿದುದು. ಈತನ ಕಾಲ ಮತ್ತು ಇತರ ಗ್ರಂಥಗಳ ವಿವರಗಳನ್ನು ಹಿಂದೆಯೇ (ಪುಟ ೭೦ ಮತ್ತು ೧೦೫) ಕೊಟ್ಟಿದ್ದೇವೆ.

## **ಮಮ್ಮಟ** (ಕ್ರಿ.ಶ. ಸುಮಾರು ೧೧೦೦)

ಮಮ್ಮಟನೂ ಕಾಶ್ಮೀರದವನು. ಈತನ **'ಕಾವ್ಯಪ್ರಕಾಶ'**ವು ಅಲಂಕಾರ ಶಾಸ್ತ್ರದ ಸುಪ್ರಸಿದ್ಧ ಗ್ರಂಥ. ಇದು ಆನಂದವರ್ಧನನ ಧ್ವನ್ಯಾಲೋಕದ ಆಧಾರದ ಮೇಲೆಯೇ ರಚಿತವಾಗಿ 'ಧ್ವನಿ' ತತ್ವವನ್ನು ಎತ್ತಿಹಿಡಿಯುತ್ತದೆ.

7 ಶೃಂಗಾರವೀರಕರುಣಾದ್ಭುತರೌದ್ರಹಾಸ್ಯ ಬೀಭತ್ಸವತ್ಸಲ ಭಯಾನಕ ಶಾಂತನಾಮ್ನಃ !
ಆಮ್ನಾಸಿಷುರ್ದಶ ರಸಾನ್ ಸುಧಿಯೋ ವಯಂ ತು ಶೃಂಗಾರಮೇವ ರಸನಾದ್ರಸಮಾಮನಾಮಃ ॥ ವೀರಾದ್ಭುತಾದಿಷು ಚ ಯೇಹ ರಸಪ್ರಸಿದ್ಧಿಃ ಸಿದ್ಧಾ ಕುತೋऽಪಿ ವ ಟ ಯ ಕ್ಷ ವ ದಾ ವಿ ಭಾತಿ। ಲೋಕೇ ಗತಾನುಗತಿಕತ್ವವಶಾದುಪೇತಾಮೇತಾಂ ನಿವರ್ತಯಿತುಮೇವ ಪರಿಶ್ರಮೋ ನಃ ॥ —ಶೃಂಗಾರಪ್ರಕಾಶ i ೭,೮.

ಇದರಲ್ಲಿ ಹತ್ತು ಉಲ್ಲಾಸಗಳಿವೆ. ಗ್ರಂಥವು (೧೪೨) ಕಾರಿಕೆಗಳ ರೂಪದಲ್ಲಿ ರಚಿತವಾಗಿ ಗ್ರಂಥಕರ್ತನ ಗದ್ಯಾತ್ಮಕ 'ವೃತ್ತಿ' ಗಳಿಂದ ಕೂಡಿದೆ. ಇದನ್ನು ಒಂಭತ್ತನೆಯ ಉಲ್ಲಾಸದಲ್ಲಿ 'ಪರಿಕರ'ದ ವರೆಗೆ ಮಾತ್ರ ಮಮ್ಮಟ ರಚಿಸಿದ ನೆಂದೂ ಅಲ್ಲಿಂದ ಮುಂದಿನ ಭಾಗವು ಅಲಕನೆಂದೂ ಕರೆಯಲ್ಪಡುತ್ತಿದ್ದ ಅಲ್ಲಟನು ಬರೆದದ್ದೆಂದೂ ಒಂದು ಹೇಳಿಕೆಯಿದೆ. ಮಮ್ಮಟನು ತನ್ನ ಕಾವ್ಯ ಪ್ರಕಾಶದಲ್ಲಿ ತನಗಿಂತ ಹಿಂದಿನವರ ವಿವಿಧ ವಾದಗಳನ್ನೆಲ್ಲಾ ಖಂಡಿಸಿ ಧ್ವನಿ ವಾದವನ್ನು ಸಮರ್ಥಿಸಿದ್ದಾನೆ ಈ ಗ್ರಂಥಕ್ಕೆ ವ್ಯಾಖ್ಯಾನಗಳು ಹೇರಳವಾಗಿವೆ. ಮಮ್ಮಟನು ಕೊಟ್ಟಿರುವ ಉದಾಹರಣೆಗಳೆಲ್ಲಾ ಹಿಂದಿನ ಕವಿಗಳ ಕೃತಿಗಳಿಂದ ಆರಿಸಿದುವು. ತತ್ಕಾಲದ ಆವಶ್ಯಕತೆಗಾಗಿ ಅವನಿಂದಲೇ ರಚಿತವಾದುವಲ್ಲ. ಈತನನ್ನು ಪತಂಜಲಿಯ ಮಹಾಭಾಷ್ಯದ ವ್ಯಾಖ್ಯಾತೃವಾದ ಕೈಯಟನ ಮತ್ತು ವೇದಭಾಷ್ಯಕಾರ ಉವ್ವಟನ ಸೋದರನೆಂದು ಭಾವಿಸಲಾಗಿದೆ. '**ಶಬ್ದ ವ್ಯಾಪಾರವಿಚಾರ**'ವು ಈತನ ಮತ್ತೊಂದು ಗ್ರಂಥ.

ಮಮ್ಮಟನು 'ಧ್ವನಿಪ್ರಸ್ಥಾಪನಾಚಾರ್ಯ'ನೆಂದೂ ಆತನ ಗ್ರಂಥಕ್ಕೆ ವ್ಯಾಖ್ಯಾನ ಬರೆಯುವುದೇ ಪರಮಪ್ರತಿಷ್ಠೆಯೆಂದೂ ವಿದ್ವಾಂಸರು ಬಹು ಕಾಲದವರೆಗೆ ಭಾವಿಸಿದ್ದರು.

### ಹೇಮಚಂದ್ರ ; ಶಾರದಾತನಯ (ಕ್ರಿ.ಶ. ೧೨ನೆಯ ಶತಮಾನ)

ಹೇಮಚಂದ್ರನು (ಕಿ.ಶ. ೧೦೮೮-೧೧೭೨) **ಕಾವ್ಯಾನುಶಾಸನ**ವನ್ನು ಬರೆದು ಅದಕ್ಕೆ ಅಲಂಕಾರಚೂಡಾಮಣಿಯೆಂಬ ವ್ಯಾಖ್ಯಾನವನ್ನೂ ತಾನೇ ರಚಿಸಿದನು. ಹನ್ನೆರಡನೆಯ ಶತಮಾನದ ಶಾರದಾತನಯನು ತನ್ನ ೧೦ ಅಧಿಕರಣಗಳ **ಭಾವಪ್ರಕಾಶ**ದಲ್ಲಿ ಭರತನ ಮತವನ್ನೇ ಪ್ರತಿಪಾದಿಸಿದ್ದಾನೆ; 'ರಸ'ತತ್ವವನ್ನು ಸಮರ್ಥಿಸಿ ಧ್ವನಿವಾದವನ್ನು ಖಂಡಿಸಿದ್ದಾನೆ.

### ರುಯ್ಯಕ (ಕ್ರಿ.ಶ. ೧೨ನೆಯ ಶತಮಾನ)

ರುಚಿಕನೆಂದೂ ಕರೆಯಲ್ಪಡುವ ಕಾಶ್ಮೀರದ ರುಯ್ಯಕನು '**ಅಲಂಕಾರ ಸರ್ವಸ್ವ**'ವನ್ನು ರಚಿಸಿದನು. ಈ ಗ್ರಂಥವು ಸೂತ್ರಾತ್ಮಕವಾಗಿದ್ದು ವೃತ್ತಿ ಯಿಂದಲೂ ಉದಾಹರಣೆಗಳಿಂದಲೂ ಕೂಡಿದೆ. ಇದರಲ್ಲಿ ೭೫ ಅರ್ಥಾಲಂಕಾರ ಗಳ ಮತ್ತು ೬ ಶಬ್ದಾಲಂಕಾರಗಳ ವ್ಯಾಪಕವೂ ವಿಸ್ತೃತವೂ ಆದ ವರ್ಣನೆಯಿದೆ;



ಭಿನ್ನಸಂಪ್ರದಾಯಗಳ ವಾದಗಳೆಲ್ಲಾ ವಿಮರ್ಶಿಸಲ್ಪಟ್ಟು ಧ್ವನಿವಾದವು ಸಮರ್ಥಿತವಾಗಿದೆ. ರುಯ್ಯಕನು ಸಾಂಧಿವಿಗ್ರಹಿಕ ಮಹಾಕವಿ ಮಂಖುಕನ ಗುರು. ಈತನ ಕಾಲ ಸುಮಾರು ಕ್ರಿ ಶ. ೧೧೫೦. ಅಲಂಕಾರಸರ್ವಸ್ವದ ಸೂತ್ರಗಳು ಮಾತ್ರ ರುಯ್ಯಕ ರಚಿತವೆಂದೂ ವೃತ್ತಿಯು ಮಂಖುಕ ಬರೆದದ್ದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ರುಯ್ಯಕನು ಮಮ್ಮಟನ ಕಾವ್ಯಪ್ರಕಾಶಕ್ಕೂ ಮಹಿಮಭಟ್ಟನ ವ್ಯಕ್ತಿವಿವೇಕಕ್ಕೂ ವ್ಯಾಖ್ಯಾನ ಬರೆದಿದ್ದಾನೆ. ಈತನ ಹರ್ಷಚರಿತವಾರ್ತಿಕವು ಬಾಣನ ಹರ್ಷಚರಿತೆಯ ವ್ಯಾಖ್ಯಾನ. **ಅಲಂಕಾರಾನುಸಾರಿಣೀ** ಮತ್ತು **ಸಹೃದಯಲೀಲಾ** ಎಂಬುವು ಈತನ ಇತರ ಅಲಂಕಾರ ಶಾಸ್ತ್ರ ಗ್ರಂಥಗಳು.

### ವಾಗ್ಭಟ, ಜಯದೇವ ಇತ್ಯಾದಿ

ವಾಗ್ಭಟನೆಂಬ ಹೆಸರಿನ ಇಬ್ಬರು ಜೈನಲೇಖಕರಿದ್ದಾರೆ. ಇವರಲ್ಲಿ ೧೨ನೆಯ ಶತಮಾನದವನು ೫ ಪರಿಚ್ಛೇದಗಳ '**ವಾಗ್ಭಟಾಲಂಕಾರ**'ವನ್ನು ರಚಿಸಿದನು. ಇದರ ಮೊದಲ ನಾಲ್ಕು ಪರಿಚ್ಛೇದಗಳಲ್ಲಿ ಕಾವ್ಯಲಕ್ಷಣ, ಕಾವ್ಯಹೇತು, ಕವಿಶಿಕ್ಷಾ, ಕವಿಸಮಯ, ಕಾವ್ಯೋಪಯೋಗಿ ಸಂಸ್ಕೃತಾದಿ ಭಾಷೆಗಳು, ಗದ್ಯಪದ್ಯವಿಭಾಗ, ಪದ, ವಾಕ್ಯ, ದೋಷ, ಗುಣ, ೪ ಶಬ್ದಾ ಲಂಕಾರಗಳು, ೩೫ ಅರ್ಥಾಲಂಕಾರಗಳು, ವೈದರ್ಭೀ ಮುಂತಾದ ರೀತಿಗಳೂ ಐದನೆಯ ಪರಿಚ್ಛೇದದಲ್ಲಿ ನವರಸಗಳೂ ನಾಯಕ ನಾಯಿಕಾದಿ ಭೇದಗಳೂ ನಿರೂಪಿತವಾಗಿವೆ. ಉದಾಹರಣೆಗಳೆಲ್ಲಾ ವಾಗ್ಭಟನೇ ರಚಿಸಿದುವು. ಎರಡನೆಯ ವಾಗ್ಭಟನು ಹದಿಮೂರನೆಯ ಶತಮಾನದವನು. ಇವನ ಗ್ರಂಥ **ಕಾವ್ಯಾನುಶಾಸನ**. ಇದರಲ್ಲಿ ಈತನು ತನಗಿಂತ ಹಿಂದಿನ ವಾಗ್ಭಟನನ್ನು ಉಲ್ಲೇಖಿಸಿದ್ದಾನೆ.

ನಾಟಕಕಾರನೂ 'ಪೀಯೂಷವರ್ಷ'ನೆಂಬ ಬಿರುದಾಂಕಿತನೂ ಆಗಿದ್ದ ಜಯದೇವನು (ಪುಟ ೨೫೫) ಸುಮಾರು ಕ್ರಿ.ಶ. ೧೨೬೦ರಲ್ಲಿ '**ಚಂದ್ರಾಲೋಕ**' ವನ್ನು ರಚಿಸಿದನು. ಇದರಲ್ಲಿ ನಾಟಕಲಕ್ಷಣಗಳನ್ನು ಬಿಟ್ಟು ಉಳಿದೆಲ್ಲ ಅಲಂಕಾರಶಾಸ್ತ್ರವಿಚಾರಗಳನ್ನೂ ನಿರೂಪಿಸಿದ್ದಾನೆ. ಶೈಲಿ ಲಲಿತವಾಗಿರು ವುದರಿಂದ ಈ ಗ್ರಂಥ ಜನಪ್ರಿಯವಾಗಿದೆ. ಇದರಲ್ಲಿ ೧೦ ಮಯೂಖಗಳಿವೆ. ಅಲಂಕಾರಗಳನ್ನು ವಿವರಿಸಿರುವ ೫ನೆಯ ಮಯೂಖ ತುಂಬ ಉಪಯುಕ್ತ

ವಾಗಿದೆ. ಅಮೃತಾನಂದಯೋಗಿಯ **ಅಲಂಕಾರಸಾರಸಂಗ್ರಹ**ವೂ ಇದೇ ಕಾಲದಲ್ಲಿ ರಚಿತವಾದ ವ್ಯಾಪಕವಾದ ಗ್ರಂಥ. ರೆಡ್ಡಿರಾಜ ಶಿಂಗಭೂಪಾಲನ **ರಸಾರ್ಣವಸುಧಾಕರ**ವು ೧೪ನೆಯ ಶತಮಾನದಲ್ಲಿ ರಚಿತವಾದುದು. ಇದರಲ್ಲಿ ರಸ ಮತ್ತು ನಾಟಕಲಕ್ಷಣಗಳು ವರ್ಣಿತವಾಗಿವೆ. ಭಾನುದತ್ತನ **ರಸತರಂಗಿಣಿ**ಯೂ **ರಸಮಂಜರಿ**ಯೂ ಪ್ರಧಾನವಾಗಿ 'ರಸ'ವನ್ನೇ ನಿರೂಪಿಸುವ ಇದೇ ಶತಮಾನದ ಗ್ರಂಥಗಳು.

**ವಿದ್ಯಾನಾಥ** (ಕ್ರಿ.ಶ. ೧೪ನೆಯ ಶತಮಾನ)

ಅಗಸ್ತ್ಯನೆಂದೂ ಕರೆಯಲ್ಪಡುತ್ತಿದ್ದ ವಿದ್ಯಾನಾಥನು **ಪ್ರತಾಪರುದ್ರೀಯಂ** ಎಂದು ಪ್ರಸಿದ್ಧವಾದ **ಪ್ರತಾಪರುದ್ರಯಶೋಭೂಷಣ**ವನ್ನು ರಚಿಸಿದ್ದಾನೆಂದು ಹಿಂದೆಯೇ (ಪುಟ ೨೩೬) ಹೇಳಿದ್ದೇವೆ. ಈ ಗ್ರಂಥದಲ್ಲಿ ಅಲಂಕಾರಗಳೂ ಅಲಂಕಾರಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಅಡಗಿವೆ. ಇದರಲ್ಲಿ ಕೊಟ್ಟಿರುವ ಉದಾಹರಣೆಗಳೆಲ್ಲ ಗ್ರಂಥಕರ್ತನಿಂದಲೇ ತನ್ನ ಆಶ್ರಯದಾತನಾದ ಪ್ರತಾಪರುದ್ರರಾಜನ ಸ್ತುತಿರೂಪವಾಗಿ ರಚಿತವಾದುವು. ಪ್ರತಾಪರುದ್ರಕಲ್ಯಾಣವೆಂಬ ಲಕ್ಷಣಬದ್ಧವಾದ ಒಂದು ನಾಟಕವೂ ರಚಿತವಾಗಿ ಈ ಗ್ರಂಥದೊಳಗೇ ಸೇರಿಸಲ್ಪಟ್ಟಿದೆ. ಒಟ್ಟಿನಲ್ಲಿ ಈ ಗ್ರಂಥವು ಉಪಯುಕ್ತ ವಿಷಯಗಳನ್ನೆಲ್ಲ ಒಳಗೊಂಡಿರುವುದರಿಂದ ಜನಪ್ರಿಯವಾಗಿದೆ.

ವಿದ್ಯಾಧರನ **ಏಕಾವಳಿ**ಯೂ ಇದೇ ಕಾಲದಲ್ಲಿ ಕಾವ್ಯಪ್ರಕಾಶದ ಮಾದರಿಯಲ್ಲಿ ರಚಿತವಾದುದು. ಇದರಲ್ಲಿರುವ ಉದಾಹರಣೆಗಳೆಲ್ಲ ಉತ್ಕಲದ ನರಸಿಂಹನೆಂಬ ರಾಜನ ಸ್ತುತಿರೂಪವಾಗಿ ರಚಿತವಾದುವು.

**ವಿಶ್ವನಾಥ** (ಕ್ರಿ.ಶ. ೧೪ನೆಯ ಶತಮಾನ)

ಉತ್ಕಲದೇಶದ ರಾಜನ ಸಾಂಧಿವಿಗ್ರಹಿಕನಾಗಿದ್ದ ವಿಶ್ವನಾಥ 'ಕವಿರಾಜ'ನು 'ಪುಷ್ಪಮಾಲಾ' ಮತ್ತು 'ಭಾಷಾರ್ಣವ'ಗಳನ್ನು ರಚಿಸಿದ ಚಂದ್ರಶೇಖರಪಂಡಿತನ ಮಗ; ಕಾವ್ಯಪ್ರಕಾಶಕ್ಕೆ 'ದೀಪಿಕಾ' ಟೀಕೆಯನ್ನು ಬರೆದ ಚಂಡೀದಾಸನ ಅಣ್ಣನ ಮೊಮ್ಮಗ. ವಿಶ್ವನಾಥನು ಸ್ವಯಂ ಕವಿ. ಈತನ **ಸಾಹಿತ್ಯದರ್ಪಣ**ವು ತುಂಬ ಲೋಕಪ್ರಿಯವಾಗಿದೆ. ಅದರಲ್ಲಿ ಹತ್ತು ಪರಿಚ್ಛೇದಗಳಿದ್ದು ಕಾವ್ಯಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ —ನಾಟಕ



ಲಕ್ಷಣಗಳೂ ಸೇರಿ— ಪ್ರತಿಪಾದಿತವಾಗಿವೆ. ಈತನು ಮಮ್ಮಟನ ಅನುಯಾಯಿಯೆಂದು ಹೇಳಬಹುದು. ಈತನು ಪ್ರಸಿದ್ಧಕವಿಗಳ ಕೃತಿಗಳಿಂದಲೂ ಸ್ವರಚಿತವೇ ಆದ ಕುವಲಯಾಶ್ವಚರಿತ (ಪ್ರಾಕೃತಕಾವ್ಯ), ರಘುವಿಲಾಸ (ಮಹಾಕಾವ್ಯ), ಪ್ರಭಾವತೀ ಮತ್ತು ಚಂದ್ರಕಲಾ (ಎರಡು ನಾಟಿಕೆಗಳು) ಮತ್ತು ನರಸಿಂಹರಾಜವಿಜಯ (ಐತಿಹಾಸಿಕಕಾವ್ಯ) ಗಳಿಂದಲೂ ಉದಾಹರಣೆಗಳನ್ನು ಆರಿಸಿಕೊಟ್ಟಿದ್ದಾನೆ. ಈತನ ಈ ಕಾವ್ಯನಾಟಕಾದಿಗಳು ಇನ್ನೂ ಸಿಕ್ಕಿಲ್ಲ. ಸಾಹಿತ್ಯದರ್ಪಣವನ್ನು ಪ್ರಾಯಃ ಅಲಂಕಾರಶಾಸ್ತ್ರದ ವಿದ್ಯಾರ್ಥಿಗಳೆಲ್ಲಾ ಪಠ್ಯಪುಸ್ತಕವನ್ನಾಗಿ ಉಪಯೋಗಿಸುತ್ತಾರೆ. ಅದರ ಶೈಲಿ ಮತ್ತು ವಿಷಯನಿರೂಪಣಕ್ರಮ ಸರಳವಾಗಿರುವುದೇ ಇದಕ್ಕೆ ಕಾರಣ.

ಸಂಧೌ ಸರ್ವಸ್ವಹರಣಂ ವಿಗ್ರಹೇ ಪ್ರಾಣನಿಗ್ರಹಃ ।
ಅಲಾವುದೀನನೃಪತೌ ನ ಸಂಧಿರ್ನ ಚ ವಿಗ್ರಹಃ ॥—ಸಾಹಿತ್ಯದರ್ಪಣ ೪–೧೪.

ಎಂಬ ಶ್ಲೋಕದಲ್ಲಿ ಈತನು ಅಲ್ಲಾವುದ್ದೀನನನ್ನು ನಿರ್ದೇಶಿಸಿರುವುದರಿಂದ ಈತನ ಕಾಲ ಕ್ರಿ.ಶ. ೧೪ನೆಯ ಶತಮಾನವೆಂದು ಭಾವಿಸಲಾಗಿದೆ.

ವಾಮನಭಟ್ಟಬಾಣನ ಆಶ್ರಯದಾತನಾದ ವೇಮಭೂಪಾಲನ **ಸಾಹಿತ್ಯಚಿಂತಾಮಣಿ**ಯೂ ವಿದ್ಯಾಭೂಷಣನ **ಸಾಹಿತ್ಯಕೌಮುದಿ**ಯೂ ಈ ಶತಮಾನಕ್ಕೆ ಸೇರಿದ ಶ್ಲಾಘ್ಯ ಕೃತಿಗಳು.

**ಅಪ್ಪಯ್ಯದೀಕ್ಷಿತ** (ಕ್ರಿ.ಶ. ೧೬ನೆಯ ಶತಮಾನ)

ದಕ್ಷಿಣಭಾರತದ ಸುಪ್ರಸಿದ್ಧ ಕವಿಯೂ ವೇದಾಂತಿಯೂ ಆಗಿದ್ದ ಅಪ್ಪಯ್ಯ ದೀಕ್ಷಿತರು **ಕುವಲಯಾನಂದ** ಮತ್ತು **ಚಿತ್ರಮೀಮಾಂಸಾ** ಎಂಬ ಎರಡು ಅಲಂಕಾರಶಾಸ್ತ್ರ ಗ್ರಂಥಗಳನ್ನು ರಚಿಸಿದರು. ಕುವಲಯಾನಂದವು ಜಯದೇವನ ಚಂದ್ರಾಲೋಕದ ಐದನೆಯ (ಅಲಂಕಾರ) ಮಯೂಖದ ವ್ಯಾಖ್ಯಾನ. ಇದು ಅಭ್ಯಾಸದಶೆಯಲ್ಲಿರುವ ವಿದ್ಯಾರ್ಥಿಗಳಿಗೆ ತುಂಬ ಉಪಯುಕ್ತವಾಗಿದೆ. 'ಚಿತ್ರಮೀಮಾಂಸೆ'ಯೂ ಅಲಂಕಾರಗಳನ್ನೇ ನಿರೂಪಿಸಿದ್ದರೂ ಮೌಲಿಕ ಗ್ರಂಥ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದರಲ್ಲಿ ತನಗಿಂತ ಹಿಂದಿನವರ ಭಿನ್ನಾಭಿಪ್ರಾಯಗಳನ್ನು ಖಂಡಿಸಿ ಎರಡನೆಯದರಲ್ಲಿ ಅರ್ಥಾಲಂಕಾರಗಳ ವಿಸ್ತೃತವೂ ವೈಜ್ಞಾನಿಕವೂ ಆದ ವಿವರಣೆಗಳನ್ನಿತ್ತಿದ್ದಾರೆ. ಈ ಚಿತ್ರಮೀಮಾಂಸೆಯನ್ನು (ಪಂಡಿತರಾಜ) ಜಗನ್ನಾಥ

ಪಂಡಿತನು ಕಟುವಾಗಿ ಖಂಡಿಸಿದ್ದಾನೆ. ಚಿತ್ರಮೀಮಾಂಸೆಯು ಅಸಮಗ್ರ ಸ್ಥಿತಿಯಲ್ಲಿದೆ. ಶಬ್ದವೃತ್ತಿಗಳನ್ನು ನಿರೂಪಿಸುವ ದೀಕ್ಷಿತರಚಿತ **ವೃತ್ತಿವಾರ್ತಿಕ**ವೂ ಅಸಮಗ್ರವಾಗಿದೆ.

ಅಪ್ಪಯ್ಯದೀಕ್ಷಿತರು ಸುಮಾರು ೧೦೦ ಗ್ರಂಥಗಳನ್ನು ರಚಿಸಿದ್ದಾರೆ. ಪಂಡಿತರಾಜ ಜಗನ್ನಾಥನು ಇವರ ಪ್ರತಿಕಕ್ಷಿ. ದೀಕ್ಷಿತರು ರುಯ್ಯಕನ ಮತ್ತು ಅವನ ಟೀಕಾಕಾರನಾದ ಜಯರಥನ ಅಂಧಾನುಕರಣ ಮಾಡಿರುವುದಾಗಿ ಜಗನ್ನಾಥನು ಆಪಾದಿಸಿ ತನ್ನ ರಸಗಂಗಾಧರದಲ್ಲಿ ಇದರ ಸಮಾಲೋಚನೆ ನಡೆಸಿದ್ದಾನೆ.

**'ಕಾವ್ಯದರ್ಪಣ'**ವನ್ನು ತನ್ನದೇ ವ್ಯಾಖ್ಯಾನದೊಡನೆ ರಾಜಚೂಡಾಮಣಿ ದೀಕ್ಷಿತನು ಸುಮಾರು ಕ್ರಿ.ಶ. ೧೬೦೦ರಲ್ಲಿ ರಚಿಸಿದನು. ಇದೇ ಕಾಲದಲ್ಲಿ ರೂಪಗೋಸ್ವಾಮಿಯೆಂದು ಪ್ರಸಿದ್ಧನಾದ ರೂಪದೇವನು ರಚಿಸಿದ **ಉಜ್ಜ್ವಲನೀಲಮಣಿ**ಯಲ್ಲಿ ಗ್ರಂಥಕರ್ತನೇ ರಚಿಸಿದ ಕೃಷ್ಣಸ್ತುತ್ಯಾತ್ಮಕ ಉದಾಹರಣೆಗಳು ಹೇರಳವಾಗಿವೆ. ಕವಿ ಕರ್ಣಪೂರನ **ಅಲಂಕಾರಕೌಸ್ತುಭ**ವೂ ಕೇಶವಮಿಶ್ರನ **ಅಲಂಕಾರಶೇಖರ**ವೂ ಇದೇ ಕಾಲದಲ್ಲಿ ರಚಿತವಾದ ಅಲಂಕಾರಶಾಸ್ತ್ರದ ಗ್ರಂಥಗಳು.

### ಜಗನ್ನಾಥಪಂಡಿತ (ಕ್ರಿ.ಶ. ೧೫೯೦–೧೬೬೫)

ಪಂಡಿತರಾಜನೆಂದು ಪ್ರಸಿದ್ಧನಾಗಿದ್ದ ಜಗನ್ನಾಥಪಂಡಿತನ ಭಾಮಿನೀವಿಲಾಸ ಮತ್ತು ಪಂಚಲಹರಿಗಳ ವಿಷಯವಾಗಿ ಹಿಂದೆ (ಪುಟ ೧೪೩, ೧೩೬) ಹೇಳಿದ್ದೇವೆ. ಈತನ **ರಸಗಂಗಾಧರ**ವು ಅಲಂಕಾರ ಶಾಸ್ತ್ರದ ಉದ್ಗ್ರಂಥವೆಂದು ಪರಿಗಣಿತವಾಗಿದೆ. 'ರಮಣೀಯಾರ್ಥಪ್ರತಿಪಾದಕಃ ಶಬ್ದಃ ಕಾವ್ಯಂ' ಎಂಬುದು ಈತನು ಕೊಟ್ಟಿರುವ ಕಾವ್ಯಲಕ್ಷಣ. ಈತನು 'ಧ್ವನಿ'ವಾದವನ್ನು ಖಂಡಿಸಿ 'ರಸ'ತತ್ವವನ್ನು ಸಮರ್ಥಿಸಿದ್ದಾನೆ. ಇತರ ಅಭಿಪ್ರಾಯಗಳನ್ನೆಲ್ಲಾ ಕಟುವಾಗಿ ಟೀಕಿಸಿದ್ದಾನೆ. **ಚಿತ್ರಮೀಮಾಂಸಾಖಂಡನ**ವೆಂಬ ತನ್ನ ಮತ್ತೊಂದು ಗ್ರಂಥದಲ್ಲಿ ಈತನು ಅಪ್ಪಯ್ಯದೀಕ್ಷಿತರ ಚಿತ್ರಮೀಮಾಂಸೆಯನ್ನು ಉಗ್ರವಾಗಿ ಖಂಡಿಸಿದ್ದಾನೆ.

ಜಗನ್ನಾಥಪಂಡಿತನ ಪಾಂಡಿತ್ಯ ಅಸಾಧಾರಣವಾದುದು. ಇವನ ವಿಚಾರಧಾರೆ ಹೊಸ ರೀತಿಯದು. ಈತನು ಚೆನ್ನಾಗಿ ಆಲೋಚಿಸದೆ ಏನನ್ನೂ



ಬರೆಯುವವನಲ್ಲ. ಈತನು ಕೊಟ್ಟಿರುವ ಉದಾಹರಣೆಗಳೂ ಹೊಸಹೊಸದಾಗಿ ಆರಿಸಿದುವು. ಮೌಲಿಕವೂ ಉಪಾದೇಯವೂ ಆದ ವಿಚಾರಗಳಿಂದ ಕೂಡಿರುವ ಇವನ ರಸಗಂಗಾಧರದ ಶೈಲಿ ಪ್ರೌಢ.

### ಅರ್ವಾಚೀನ ಆಲಂಕಾರಿಕರು

ಯಜ್ಞನಾರಾಯಣದೀಕ್ಷಿತನು ತನ್ನ ಪೋಷಕನಾದ ತಂಜಾವೂರಿನ ರಘುನಾಥನಾಯಕನ ಸ್ತುತಿರೂಪದಲ್ಲಿ ಬರೆದಿರುವ **ಅಲಂಕಾರರತ್ನಾಕರ**ವು ಹದಿನೇಳನೆಯ ಶತಮಾನದಲ್ಲಿ ದಕ್ಷಿಣದೇಶದಲ್ಲಿ ರಚಿತವಾದ ಅಲಂಕಾರಗ್ರಂಥ.

ಅಭಿನವಕಾಳಿದಾಸನೆಂದು ಕರೆಯಲ್ಪಡುತ್ತಿದ್ದ ನರಸಿಂಹಕವಿಯು ಮೈಸೂರಿನ ನಂಜರಾಜನ ಸ್ತುತಿರೂಪವಾಗಿ ರಚಿಸಿದ **ನಂಜರಾಜಯಶೋಭೂಷಣ**ವೂ ಸದಾಶಿವಮುಖಿಯು ಕೇರಳದ ರಾಮವರ್ಮನನ್ನು ಸ್ತುತಿಸಿ ಬರೆದ **ರಾಮವರ್ಮಯಶೋಭೂಷಣ**ವೂ ಹದಿನೆಂಟನೆಯ ಶತಮಾನದ ಗ್ರಂಥಗಳು. ವಿಶ್ವೇಶ್ವರನ **ಅಲಂಕಾರಾಭರಣ**ವೂ **ಅಲಂಕಾರಕೌಸ್ತುಭ**ವೂ ಇದೇ ಕಾಲದಲ್ಲಿ ರಚಿತವಾದುವು.

ಮೈಸೂರು ಶ್ರೀ ಪರಕಾಲಮಠದ ೨೯ನೆಯ ಆಸ್ಥಾನಪತಿಗಳಾಗಿದ್ದ ಶ್ರೀ ಶ್ರೀನಿವಾಸ ಪರಕಾಲಸ್ವಾಮಿಗಳು (ಕ್ರಿ.ಶ. ೧೮೦೨–೧೮೬೧) **ಅಲಂಕಾರಸಂಗ್ರಹ**ವನ್ನೂ ೩೧ನೆಯ ಆಸ್ಥಾನಪತಿಗಳಾದ ಶ್ರೀಕೃಷ್ಣಬ್ರಹ್ಮತಂತ್ರ ಪರಕಾಲಸ್ವಾಮಿಗಳು (ಕ್ರಿ.ಶ. ೧೮೪೯–೧೯೧೯) **ಅಲಂಕಾರಮಣಿಹಾರ**ವನ್ನೂ ರಚಿಸಿದರು. ಶ್ರೀಕೃಷ್ಣಬ್ರಹ್ಮತಂತ್ರಸ್ವಾಮಿಗಳು ಒಟ್ಟು ೬೭ ಗ್ರಂಥಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ. ಇವುಗಳಲ್ಲಿ ಕೆಲವು ಮಾತ್ರ ಅಚ್ಚಾಗಿವೆ. ಇವರ ಪಾಂಡಿತ್ಯವೂ ಕವಿತಾಶಕ್ತಿಯೂ ಅಸಾಧಾರಣವಾದುವು. ಇವರು ತಮ್ಮ ಅಲಂಕಾರಮಣಿಹಾರದಲ್ಲಿ ಎಲ್ಲ ಉದಾಹರಣೆಗಳನ್ನೂ ತಿರುಪತಿಯ ಶ್ರೀನಿವಾಸಸ್ವಾಮಿಯ ಸ್ತೋತ್ರರೂಪವಾಗಿ ರಚಿಸಿ ಸೇರಿಸಿದ್ದಾರೆ.

### ಆಧುನಿಕ ದೃಷ್ಟಿ

ಒಳ್ಳೆಯ ಕಾವ್ಯದಲ್ಲಿ ಮುಖ್ಯವಾಗಿರಬೇಕಾದುದು ಪ್ರತಿಭಾಸಂಪನ್ನತೆ ಮತ್ತು ಭಾವಪ್ರಚೋದಕತ್ವ. ಮೊದಲನೆಯದಕ್ಕೇ ಪ್ರಾಧಾನ್ಯವಿರಬೇಕೆನ್ನುವವರು ಅಲಂಕಾರಸಂಪ್ರದಾಯದವರು; ಎರಡನೆಯದಕ್ಕೇ ಪ್ರಾಧಾನ್ಯ

ಮೀಯುವವರು ರಸಸಂಪ್ರದಾಯದವರು. ಯಾವುದು ಪ್ರಧಾನವೆಂಬುದರಲ್ಲಿ ಮಾತ್ರ ಮತಭೇದವೇ ವಿನಾ ಎರಡೂ ಇರಬೇಕೆನ್ನುವುದು ಉಭಯಸಮ್ಮತ. ಕಾವ್ಯವು ನಮ್ಮ ಕಲ್ಪನೆಯನ್ನು ಪ್ರಚೋದಿಸುವಂತಿರಬೇಕೆಂದು ಆಲಂಕಾರಿಕರೂ ಭಾವಗಳನ್ನು ಪ್ರಚೋದಿಸಬೇಕೆಂದು 'ರಸ'ಸಂಪ್ರದಾಯದವರೂ ಹೇಳುತ್ತಾರೆ. ಈ ಎರಡು ಮತಗಳೂ ತುಂಬ ಪ್ರಾಚೀನಕಾಲದಿಂದ ಜತೆಜತೆಯಾಗಿಯೇ ಬೆಳೆದುಬಂದಿರುವುದು ಈ ಶಾಸ್ತ್ರದಲ್ಲಿ ರಚಿತವಾಗಿರುವ ಗ್ರಂಥಗಳಿಂದ ತಿಳಿದುಬರುವ ಅಂಶ. ಮೊದಮೊದಲು ಆಲಂಕಾರಿಕ ಮತವೇ ಪ್ರಬಲವಾಗಿದ್ದು ಕ್ರಮೇಣ ರಸಸಂಪ್ರದಾಯದ ಕೈ ಮೇಲಾಯಿತೆಂದು ಹೇಳಲು ಅವಕಾಶವಿದೆ. ಆದ್ದರಿಂದ ಈಚೆಗೆ 'ಕಾವ್ಯಸ್ವರೂಪ'ದ ಬಗೆಗೆ ವಿಮರ್ಶಕರ ದೃಷ್ಟಿ ಬದಲಾಗಬೇಕಾಯಿತು. 'ರಸ'ವು ಅನಿರ್ವಚನೀಯ ಸ್ವರೂಪವುಳ್ಳದ್ದೆಂಬುದು ಸಿದ್ಧವಾದಮೇಲೆ 'ಭಾವ'ಗಳ ಪ್ರಚೋದನೆ ನೇರವಾಗಿ ಆಗಲಾರದೆಂಬುದು ಖಚಿತವಾಯಿತು. ಇದು 'ಧ್ವನಿ'ವಾದಕ್ಕೆ ಅವಕಾಶ ಮಾಡಿಕೊಟ್ಟಿತು. ಇದರಿಂದ ವಾಚ್ಯಾರ್ಥಕ್ಕಿಂತ ವ್ಯಂಗ್ಯಾರ್ಥಕ್ಕೇ ಪ್ರಾಧಾನ್ಯ ಬಂತು. ಧ್ವನಿಯೂ ವಸ್ತುಧ್ವನಿ, ಅಲಂಕಾರಧ್ವನಿ, ರಸಧ್ವನಿ ಎಂಬ ಮೂರು ರೂಪದಲ್ಲಿರಬಹುದಾದ್ದರಿಂದ ಇವುಗಳಲ್ಲೂ ರಸಧ್ವನಿಯೇ ಸರ್ವೋತ್ತಮವೆಂಬ ಅಭಿಪ್ರಾಯ ಪ್ರಸ್ತುತಕಾಲದಲ್ಲಿ ಸರ್ವಸಮ್ಮತವಾಗಿಯೇ ಇದೆಯೆನ್ನಬಹುದು. ಹೀಗೆ ಶಬ್ದಾರ್ಥಗಳು ಕಾವ್ಯದ ಶರೀರಮಾತ್ರವೆಂದೂ ರಸವೇ ಅದರ ಆತ್ಮವೆಂದೂ ಈಗ ಭಾವಿಸಲಾಗಿದೆ.

## ಉಪಸಂಹಾರ

ವೈದಿಕ ಮತ್ತು ಕಾವ್ಯಸ್ಥ ಸಂಸ್ಕೃತ ಸಾಹಿತ್ಯಗ್ರಂಥಗಳಲ್ಲದೆ ಹೇರಳವಾದ ನಾನಾ ಶಾಸ್ತ್ರಗಂಥಗಳೂ ಸಂಸ್ಕೃತದಲ್ಲಿವೆ. ದರ್ಶನಗ್ರಂಥಗಳು, ಧರ್ಮಗ್ರಂಥಗಳು, ಜ್ಯೌತಿಷ ಆಯುರ್ವೇದ ಅರ್ಥಶಾಸ್ತ್ರಾದಿ ಪ್ರತ್ಯಕ್ಷ ಪ್ರಯೋಜನವುಳ್ಳ ಶಾಸ್ತ್ರಗಳ ಗ್ರಂಥಗಳು, ಶಿಲ್ಪ ಯಂತ್ರ ಮುಂತಾದ ಸರ್ವೋಪಯೋಗಿ ಶಾಸ್ತ್ರಗಳ ಗ್ರಂಥಗಳು, ಸಂಗೀತ ನಾಟ್ಯ ಮುಂತಾದ ಲಲಿತಕಲೆಗಳಿಗೆ ಸಂಬಂಧಪಟ್ಟ ಗ್ರಂಥಗಳು, ಕದಿಯುವುದು ಮುಂತಾದ ಕೇವಲ ಬೌದ್ಧಿಕ ವಿದ್ಯೆಗೆ ಸಂಬಂಧಿಸಿದ ಗ್ರಂಥಗಳು, ಇನ್ನೂ ಯಾವಯಾವುದನ್ನು ವಿದ್ಯೆ, ಜ್ಞಾನ, ಕಲೆಯೆನ್ನಬಹುದೋ ಅದನ್ನೆಲ್ಲಾ ನಿರೂಪಿಸಿರುವ ಗ್ರಂಥಗಳು—ಇವುಗಳನ್ನೆಲ್ಲಾ



ಒಳಗೊಂಡಿರುವ ವಿಶ್ವಜ್ಞಾನಭಂಡಾರವೇ ಸಂಸ್ಕೃತದಲ್ಲಿದೆ. ಸಂಸ್ಕೃತದಲ್ಲಿ ಹಿಂದೆ ರಚಿತವಾಗಿದ್ದಷ್ಟು ಉಪಯುಕ್ತಗ್ರಂಥಗಳು ಬೇರಾವ ಭಾಷೆಯಲ್ಲೂ ರಚಿತವಾಗಿರಲಿಲ್ಲವೆನ್ನಲಡ್ಡಿಯಿಲ್ಲ. ಸಂಸ್ಕೃತ ವಿದ್ಯಾಭ್ಯಾಸದ ಉಪಯುಕ್ತತೆಯನ್ನು ಪ್ರೊ. ಮ್ಯಾಕ್ಸ್‌ಮೂಲರನಂತಹ ಸುಪ್ರಸಿದ್ಧ ವಿದ್ವಾಂಸನೇ ಒತ್ತಿ ಹೇಳಿದ್ದಾನೆ.[8] ಈಚೆಗೆ ಆಂಗ್ಲರ ಆಳ್ವಿಕೆಯ ಕಾಲದಲ್ಲಿ ಜವಾಬ್ದಾರಿಯಿಲ್ಲದೆ ಒಬ್ಬಿಬ್ಬ ಆಂಗ್ಲರು ಸಂಸ್ಕೃತವನ್ನು 'ಮೃತಭಾಷೆ'ಯೆಂದು ಹೇಳಿಬಿಟ್ಟುದೇಕಾರಣವಾಗಿ ತತ್ಕಾಲದಲ್ಲಿ ಅವರ ಛಂಧಾನುವರ್ತಿಗಳಾಗಿದ್ದ ಕೆಲ ಭಾರತೀಯರೂ ಅದೇ ಪಲ್ಲವಿ ಹಾಡುತ್ತಿದ್ದುದುಂಟು. ವಿಖ್ಯಾತರಾದ ಪಾಶ್ಚಾತ್ಯ ವಿದ್ವಾಂಸರೂ ಇಂತಹ ಭಾವನೆಯನ್ನು ಅಲ್ಲಗಳೆದಿದ್ದಾರೆ. ಸುಪ್ರಸಿದ್ಧ ವಿದ್ವಾಂಸನಾದ ಎಂ. ವಿಂಟರ್‌ನಿಟ್ಸ್ ಈ ವಿಚಾರವಾಗಿ ಹೀಗೆ ಹೇಳಿದ್ದಾನೆ—

"Sanskrit is not a 'dead' language to-day. There are still at the present day a number of Sanskrit periodicals in India, and topics of the day are discussed in Sanskrit pamphlets. Also, the Mahābhārata is still to-day read publicly. To this very day poetry is still composed and works written in Sanskrit, and it is the language in which Indian scholars converse upon scientific questions. Sanskrit at the least plays the same part in India still as Latin in the Middle ages in Europe, or as Hebrew with the Jews."[9]

ಹಿಂದಿನಿಂದಲೂ ಸಂಸ್ಕೃತ ಅಮರಭಾಷೆಯಾಗಿಯೇ ಬೆಳೆದು ಬಾಳುತ್ತ ಬಂದಿದೆ. ಈಗಲೂ ಅದರ ಪ್ರಭಾವ ಮಹತ್ವ ಯಾವ ರೀತಿಯಲ್ಲೂ ಕಮ್ಮಿಯಾಗಿಲ್ಲ. ಅದು ಹಿಂದಿನ ಹಾಗೆ ಸಾರ್ವತ್ರಿಕವಾಗಿ ಬಳಕೆಯಲ್ಲಿಲ್ಲದಿರಬಹುದಾದರೂ ಪ್ರಾಂತೀಯ ಭಾಷೆಗಳಿಗೆ ಪೋಷಕವಾಗಿಯೂ ವಿದ್ವಾಂಸರಿಗೆ ಆದರಣೀಯವಾಗಿಯೂ ಪಾಮರರಿಗೆ ಪೂಜ್ಯವಾಗಿಯೂ ಸರ್ವವ್ಯವಹಾರ

---

[8] Maxmuller—'What can India Teach us' pp. 13 & 15

[9] History of Indian Literature I 45.

ಗಳಿಗೂ ಉಪಯುಕ್ತವಾಗಿಯೂ ಇದೆ. ಹಿಂದೆಯೂ ಅಮರ ಭಾಷೆಯಾಗಿದ್ದ ಸಂಸ್ಕೃತ ಈಗಲೂ ಅಮರ; ಮುಂದೆಯೂ ಎಂದೆಂದಿಗೂ ಅಮರವೇ.

> ಯಾವದಸ್ತಿ ತ್ರಯೀ ಲೋಕೇ ಚತುರ್ಮುಖಮುಖೋದ್ಭವಾ ।
> ಯಾವದ್ವಾ ರಾಮಚರಿತಂ ವಾಲ್ಮೀಕಿಕವಿಚಿತ್ರಿತಂ ॥
> ಕ್ಷರಂತ್ಯಮೃತಧಾರಾ ವಾ ಯಾವದ್ವ್ಯಾಸಸ್ಯ ಸೂಕ್ತಯಃ ।
> ವಾಗ್ದೇವ್ಯಾ ವರಪುತ್ರಸ್ಯ ಕಾಲಿದಾಸಸ್ಯ ವಾ ಗಿರಃ ॥
> ತಾವದೇಷಾ ದೇವಭಾಷಾ ದೇವೀ ಸ್ಥಾಸ್ಯತಿ ಭೂತಲೇ ॥
> ಯಾವಚ್ಚ ವಂಶೋऽಸ್ತ್ಯಾರ್ಯಾಣಾಂ ತಾವದೇಷಾ ಧ್ರುವಂ ಧ್ರುವಾ॥[10]



10 ಮಹೇಶಚಂದ್ರ ಚೂಡಾಮಣಿ ವಿರಚಿತ.

ಈ ಲೋಕದಲ್ಲಿ ಎಲ್ಲಿಯವರೆಗೆ ಚತುರ್ಮುಖನ ಮುಖಗಳಿಂದುದ್ಭವಿಸಿದ ವೇದಗಳಿರುತ್ತವೋ, ಎಲ್ಲಿಯವರೆಗೆ ವಾಲ್ಮೀಕಿಕವಿಚಿತ್ರಿತವಾದ ರಾಮಚರಿತವಿರುತ್ತದೋ, ಎಲ್ಲಿಯುವರೆಗೆ ವ್ಯಾಸನ ಸೂಕ್ತಿಗಳೂ ವಾಗ್ದೇವಿಯ ವರಪುತ್ರನಾದ ಕಾಳಿದಾಸನ ನುಡಿಗಳೂ ಅಮೃತಧಾರೆಗಳನ್ನು ಹರಿಸುತ್ತಿರುತ್ತವೋ, ಅಲ್ಲಿಯವರೆಗೂ ದೇವತಾಸ್ವರೂಪಿಯಾದ ಈ ದೇವಭಾಷೆಯು ಭೂತಲದಲ್ಲಿ ನೆಲಸಿರುತ್ತದೆ. ಹಾಗೆಯೇ, ಆರ್ಯರ ವಂಶವು ಎಷ್ಟುಕಾಲ ಇರುತ್ತದೋ, ಅಷ್ಟುಕಾಲವೂ ಈ ಭಾಷೆ ಅಚಲ,ಅಮರ; ಇದು ನಿಶ್ಚಯ.

# ಅನುಬಂಧ ೧

## ಗ್ರಂಥಕಾರಾನುಕ್ರಮಣೀ



# ಅನುಬಂಧ ೨

## ಗ್ರಂಥಾನುಕ್ರಮಣೀ



**DRAMA** Rs. P.

- BĀSA's Pañcarātram *(Revised Fourth Edition)* 4 50
- ,, Svapna-vāsavadattam *(,, 2nd Edition-1966)* 6 00
- ,, Pratijñā-yaugandharāyaṇam (Text only) 1 75
- ,, Karṇabhāram *(Revised 3rd Edition)* 1 75
- ,, Ūrubhaṅgam *(Revised 2nd Edition 1967)* 3 75
- ,, Pratimā-nāṭakam *(Revised 2nd Edition 1968)* 5 00
- ,, Abhiṣeka-nāṭakam *(Revised 5th Edition 1968)* 5 00
- ,, Madhyamavyāyogaḥ *(1967)* 2 00
- KĀLIDĀSA's Mālavikāgnimitram *(Revised 2ndEdition)* 4 25
- ,, Vikramorvas'iyam *( ,, 3rd Edition)* 4 50
- ,, Abhijñāne-s'ākuntalam *( ,, ,, 1967)* 6 25
- HARṢA's Nagānandam 4 50
- VIS'ĀKHADATTA's Mudrārākṣasam 4 25

**CHAMPU**

- CAMPŪ-RĀMĀYAṆAM–Bāla & Sundara kāṇḍas no stock
- Ayodhyā, Araṇya & Kiṣkindhā kāṇḍas; each 2 75
- NĪLAKAṆṬHA-VIJAYAM Chapter III 2 25

**PROSE**

- BĀṆA's Kādambarī: Pūrvabhāga (Part II) 3 00
- do (Parts IV, V & VI) each 2 75
- do Mahās'vetā-vṛttānta Eng. Trans. only 2 50

**POETRY**

- KĀLIDĀSA's Meghasandes'a (Pūrvamegha) *(1968)* 2 00
- KĀLIDĀSA's Kumārasambhavam Canto III 2 25
- do Canto V *(1967)* 3 00
- do Canto VI 2 50
- KĀLIDĀSA's Raghuvams'am—Canto II *(1968)* 2 00
- do Canto IV 1 12
- do Canto VI *(1967)* 3 00
- do Canto XIII 2 50
- As'VAGHOṢA's Buddhacaritam—Cantos I & III each 2 50
- BHARTṚHARI's Nītis'atakam *(Revised 2nd Edition)* 2 50

**GENERAL**

- Outlines of the History of Classical Sanskrit Literature *(Revised Edition)* 5 00

